ಪ್ರವಾಸ ಕೈಗೊಂಡೆವು. ನನ್ನೊಟ್ಟಿಗೆ ಈ ತಂಡದಲ್ಲಿ ಗೆಳೆಯ ಡಾ ವೈ ಬಿ ಹಿಮ್ಮಡಿ, ಅಲೆಮಾರಿ ಒಕ್ಕೂಟದ ರಾಜ್ಯಾಧ್ಯಕ್ಷರಾದ ಕೆ ಭಾಸ್ಕರದಾಸ್ ಎಕ್ಕಾರು, ಹಿರಿಯರಾದ ಗಂಗಾಧರಪ್ಪ, ಆರ್ ಮೋಹನದಾಸ್, ಬಿ ವಿ ಸುರೇಶ್, ಸ್ಥಳೀಯವಾಗಿ ನೂರಾರು ಜನ ಬಂಧುಗಳು ಭಾಗವಹಿಸಿ ಮಾಹಿತಿ ಸಂಗ್ರಹಿಸಿ ತಮ್ಮ ಸಲಹೆ ಸೂಚನೆಗಳನ್ನು ನೀಡಿದ್ದಾರೆ. ಈ ಎಲ್ಲಾ ಸಹೃದಯಿ ಮಿತ್ರರಿಗೂ ಅಭಿನಂದನೆಗಳು.

ಈ ಕೃತಿ ರಚನೆಗೆ ಸಹಕರಿಸಿದ ಕರ್ನಾಟಕ ರಾಜ್ಯ ದೊಂಬಿದಾಸರ ಕ್ಷೇಮಾಭಿವೃದ್ಧಿ ಸಂಘದ ಅಧ್ಯಕ್ಷರಾದ ಶ್ರೀ ಡಿ ತಿಪ್ಪಣ್ಣ ಮತ್ತು ಎಲ್ಲ ಪದಧೀಕಾರಿಗಳು ಹಾಗೂ ಜಿಲ್ಲಾ ಮತ್ತು ತಾಲೂಕುಮಟ್ಟದ ಸಂಘದ ಸದಸ್ಯರಿಗೂ ನೆನೆಯುವೆ.

ಹಸ್ತಪ್ರತಿ ಓದಿ ಸಲಹೆ ಸೂಚನೆಗಳನ್ನು ನೀಡಿದ ಗೆಳೆಯ ಡಾ ಮೈಲಹಳ್ಳಿ ರೇವಣ್ಣ, ತನ್ನ ಗ್ರಂಥ ಬಂಡಾಯವನ್ನು ಉಪಯೋಗಿಸಿಕೊಳ್ಳಲು ಅವಕಾಶ ಮಾಡಿಕೊಟ್ಟ ಗೆಳೆಯ ಸ್ವಾಮಿ, ಕರಡು ಪ್ರತಿ ತಿದ್ದಿ ಸಹಕರಿಸಿದ ಡಾ ಆರ್ ಬಿ ಕುಮಾರ, ಹಸ್ತಪ್ರತಿ ಮಾಡಿ ಸಹಕರಿಸಿದ ವಿ ಗುರುಮೂರ್ತಿ, ಇವರುಗಳನ್ನು ಈ ಸಂದರ್ಭದಲ್ಲಿ ನೆನೆಯುವುದು ಅತ್ಯವಶ್ಯ.

ನಾವು ಕೇಳಿದ ನೂರಾರು ಪ್ರಶ್ನೆಗಳಿಗೆ ತಾಳ್ಮೆಯಿಂದ ಉತ್ತರಿಸಿದ ಮಾಹಿತಿದಾರರಿಗೂ, ಸಮೀಕ್ಷೆಗೆ ಸಹಕರಿಸಿದ ಎಲ್ಲ ಮಿತ್ರರಿಗೂ, ಈ ಮಾಹಿತಿಯನ್ನು ಗಣಕ ಯಂತ್ರದಲ್ಲಿ ದಾಖಲಿಸಿದ ಕೆ ಎಂ ಶ್ರೀನಿವಾಸಮೂರ್ತಿ, ವಿ ಲೋಕೇಶ್, ಕೆ ಎಸ್ ಸೂರಜ್ ಅವರಿಗೂ ನನ್ನ ಕೃತಜ್ಞತೆಗಳು.

ಈ ಕೃತಿಗೆ ಅಗತ್ಯವಾದ ಛಾಯಾಚಿತ್ರಗಳನ್ನು ನೀಡಿ ಸಹಕರಿಸಿದ ಎಂ ಹುಲಿಯಪ್ಪ ರಂಗಪ್ಪ, ಪ್ರವೀಣಕುಮಾರ, ಪುಟ್ಟಣ್ಣ, ಬಿ ವಿ ಅಚ್ಚುತಾನಂದ ಮುಂತಾದ ಗೆಳೆಯರನ್ನು ಈ ಸಂದರ್ಭದಲ್ಲಿ ನೆನೆಯುತ್ತೇನೆ.

ನನ್ನ ಈ ಕೆಲಸದಲ್ಲಿ ತುಂಬು ಹೃದಯದ ಸಹಕಾರ ನೀಡಿದ ನನ್ನ ಅಧಿಕಾರಿಗಳು ಮತ್ತು ಸಹದ್ಯೋಗಿಗಳಿಗೂ ನನ್ನ ಅಲೆದಾಟದ ಅನುಪಸ್ಥಿತಿಯಲ್ಲಿ ಕುಟುಂಬದ ಜವಾಬ್ದಾರಿಯನ್ನು ನಿಭಾಯಿಸಿ ನನ್ನೊಟ್ಟಿಗೆ ಸಹಕರಿಸಿದ ನನ್ನ ಶ್ರೀಮತಿಯವರಿಗೂ ಹಾಗೂ ಪ್ರತ್ಯಕ್ಷವಾಗಿ ಪರೋಕ್ಷವಾಗಿ ಸಹಕರಿಸಿದ ಅಸಂಖ್ಯಾತ ಮಿತ್ರರು ಮತ್ತು ಬಂಧುಗಳಿಗೆ ನಾನು ಅಭಾರಿಯಾಗಿದ್ದೇನೆ.

ಸಮೀಕ್ಷೆಯ ಮಾಹಿತಿಯನ್ನು ಕಂಪ್ಯೂಟರಿಗೆ ಅಳವಡಿಸಿ ಕೋಷ್ಟಕಗಳನ್ನು ತಯಾರಿಸುವಲ್ಲಿ ಸಹಕರಿಸಿದ ಮಲ್ಲಿಕಾರ್ಜುನ ಮಾನ್ವಡೆ ಹಾಗೂ ಅಕ್ಷರ ಸಂಯೋಜನೆಗೊಳಿಸಿದ ಕಮಲಾಪುರದ ಭಾವನಾ ಗ್ರಾಫಿಕ್ಸ್ ಶ್ರೀನಿವಾಸ ಕೆ ಕಲಾಲ್ ಅವರುಗಳಿಗೆ ಋಣಿಯಾಗಿದ್ದೇನೆ.

**ಕುಪ್ಪೆ ನಾಗರಾಜ**

## ಪರಿವಿಡಿ

## ಕೋಷ್ಟಕಗಳು



## ವೃತ್ತಚಿತ್ರ



## ಭೂಪಟ

# ೧

## ಪ್ರವೇಶ

**ಕಂ**ಠಸ್ಥ ಸಂಪ್ರದಾಯದ ವೃತ್ತಿಗಾಯಕರನ್ನು ಜಗತ್ತಿನ ಹಲವಾರು ಭಾಷಾ ಜನಪದರಲ್ಲಿ ಕಾಣಬಹುದಾಗಿದೆ. ರಷ್ಯಾದ ಜನಪದ ಕಾವ್ಯಸಂಪ್ರದಾಯಗಳಲ್ಲಿ ಸ್ಕೊಮರೊಸ್ಕಿ (Skomaroski) ಎಂಬ ವೃತ್ತಿಗಾಯಕರನ್ನು ಕಾಣಬಹುದು. ಡ್ಯಾನಿಷ್‌ರಲ್ಲಿಯೂ ಈ ತರಹದ ವೃತ್ತಿಗಾಯಕರ ಪರಂಪರೆಯನ್ನು ಕಾಣಬಹುದಾಗಿದೆ. ಇಂಗ್ಲೆಂಡಿನ ಡ್ಯಾನಿಷ್ ಚಕ್ರವರ್ತಿ ತನ್ನ ಸೇನೆಯ ಬಲವನ್ನು ಅರಿಯಲು ವೃತ್ತಿಕಲಾವಿದ (ಗಾಯಕ) ವೇಷಧರಿಸಿ ಸೈನಿಕರ ಶಿಬಿರಗಳಿಗೆ ಹೋಗಿ ಹಾಡಿ ಕುಣಿದು ರಂಜಿಸಿದ ಸ್ವಾರಸ್ಯಕರ ಸಂಗತಿಗಳು ಲಭ್ಯವಾಗಿವೆ. ಎಲಿಜಬತ್ ರಾಣಿಯ ಕಾಲಕ್ಕಿಂತ ಮುಂಚೆ ಈ ಅಲೆಮಾರಿ ಗಾಯಕರ ಸ್ಥಿತಿ ಚೆನ್ನಾಗಿತ್ತೆಂದು ಹೇಳಲಾಗಿದೆ. ಆಗಲೂ ಇವರು ಅಲೆಮಾರಿಗಳಾಗಿಯೇ ಸಂತೆ, ಜಾತ್ರೆ ಮುಂತಾದ ಸಾರ್ವಜನಿಕ ಸ್ಥಳಗಳಲ್ಲಿ ತಮ್ಮ ಗಾಯನ ಮತ್ತು ಅಭಿನಯದ ಮೂಲಕ ಜನರನ್ನು ರಂಜಿಸುತ್ತಿದ್ದರು. ಈ ಅಲೆಮಾರಿ ವೃತ್ತಿಗಾಯಕರ ಪರಂಪರೆ ದೇಶ ಕಾಲ ಜನಾಂಗವನ್ನು ಮೀರಿ ವಿಶ್ವವ್ಯಾಪಿಯಾಗಿತ್ತು.

ಭಾರತದಲ್ಲಿಯೂ ವೈವಿಧ್ಯಮಯವಾದ ವೃತ್ತಿಗಾಯಕರನ್ನು ಕಾಣುತ್ತೇವೆ. ದಕ್ಷಿಣ ಭಾರತದ ತಮಿಳುನಾಡು, ಕೇರಳ, ಆಂಧ್ರಪ್ರದೇಶ ಮತ್ತು ಕರ್ನಾಟಕದ ರಾಜ್ಯಗಳಲ್ಲಿಯೂ ಈ ವೃತ್ತಿಗಾಯಕರನ್ನು ಕಾಣುತ್ತೇವೆ. ಕರ್ನಾಟಕದಲ್ಲಿ ಕಂಡು ಬರುವ ವೃತ್ತಿಗಾಯಕರನ್ನು ಜೀಶಂಪರವರು ಪ್ರಮುಖವಾಗಿ ಮೂರು ವರ್ಗಗಳಾಗಿ ವಿಂಗಡಿಸಿದ್ದಾರೆ.

೧. ಧಾರ್ಮಿಕ ವೃತ್ತಿಗಾಯಕರು

೨. ಲೌಕಿಕ ವೃತ್ತಿಗಾಯಕರು

೩. ಅರೆ ವೃತ್ತಿಗಾಯಕರು.

ವೃತ್ತಿಗಾಯಕರ ಹೆಸರೆ ಸೂಚಿಸುವಂತೆ ಹಾಡುವುದನ್ನು ವೃತ್ತಿಯಾಗಿಸಿಕೊಂಡವರು. ವೈವಿಧ್ಯಮಯ ವೇಷಭೂಷಣ, ವಿಶಿಷ್ಟ ಮಯವಾದ ವಾದ್ಯಗಳಿಂದ ಕೂಡಿದ ಸುದೀರ್ಘ ಕಾವ್ಯಗಳನ್ನು ವಿಶೇಷ ಮತ್ತು ಸಾಮಾನ್ಯ ಸಂದರ್ಭಗಳಲ್ಲಿಯೂ ಹಾಡುತ್ತಿದ್ದರು. ವೈಷ್ಣವ ಮತಾವಲಂಬಿಗಳಾದ ಇವರು ವಿಷ್ಣು ಸಂಕೀರ್ತನೆಗಳನ್ನು ಹಾಡುತ್ತ ಜೊತೆಗೆ ಶೈವ ಸಂಪ್ರದಾಯದ ಲೌಕಿಕ ಕಾವ್ಯಗಳನ್ನು, ತತ್ವಪದಗಳನ್ನು ಹಾಡಿ ಜೀವಿಸುತ್ತಿದ್ದರು. ಇವರನ್ನು ಲೌಕಿಕ ವೃತ್ತಿಗಾಯಕರೆಂದೆ ಗುರುತಿಸಲಾಗಿದೆ. ಈ ತರಹದ ಹಲವಾರು ಕಥೋಪಜೀವಿಗಳನ್ನು ಕರ್ನಾಟಕದಾದ್ಯಂತ ಕಾಣಬಹುದು. ದಾಸ ಸಮುದಾಯ

ಮೂಲದಲ್ಲಿ ಒಂದೇ ಆದರೂ ಪ್ರಾದೇಶಿಕವಾಗಿ ಇವರನ್ನು ಬೇರೆ ಬೇರೆ ಹೆಸರುಗಳಿಂದ ಕರೆದಿದ್ದಾರೆ. ವೈಷ್ಣವ ಸಂಪ್ರದಾಯದ ಬಿಕ್ಷಾವೃತ್ತಿಯನ್ನು ಪ್ರಧಾನ ಕಸುಬನ್ನಾಗಿಸಿ ಕೊಂಡಿರುವ ಇವರು ಜನಪದರ ನಾಲಿಗೆಯಲ್ಲಿ ದೊಂಬಿದಾಸರು / ಗಂಡುದಾಸರು/ ಹೆಣ್ಣುವೇಷದವರು, ಕೋಲೆಬಸವ, ಗಂಗೆದ್ಲು, ತಿರುಮಲರದಾಸರು, ದಂಗದಾಸರು, ಗೋಪಾಲಬುಟ್ಟಿದಾಸರು, ಚೆನ್ನದಾಸರ್, ಹೊಲೆಯದಾಸರ್ ಗರುಡಗಂಬದಾಸರು, ಚಕ್ರವಾದ್ಯದಾಸರು, ಮಾಲದಾಸರ್, ಕಾಶಿದಾಸ, ಶಂಕದಾಸರು, ಹೆಣ್ಣು ದಾಸರು ಇನ್ನೂ ಮುಂತಾದ ಹೆಸರುಗಳಿಂದ ಕರೆಯುತ್ತಾರೆ.

ಪ್ರಸ್ತುತ ಈ ಕೃತಿಯಲ್ಲಿ ದೊಂಬಿದಾಸರ ಸಾಮಾಜಿಕ, ಸಾಂಸ್ಕೃತಿಕ ಆರ್ಥಿಕ ಮತ್ತು ಶೈಕ್ಷಣಿಕ ಬದುಕಿನ ವಿವರಗಳ ಅಧ್ಯಯನ ಮಾಡಲು ಪ್ರಯತ್ನಿಸಿದೆ. ಈವರೆಗೂ ಈ ಸಮುದಾಯದ ಸಮಗ್ರವಾದ ಅಧ್ಯಯನ ನಡೆದಿಲ್ಲ. ಆದರೂ ಅಲ್ಲೊಂದು ಇಲ್ಲೊಂದು ಬಿಡಿಬಿಡಿಯಾದ ಮಾಹಿತಿಗಳಷ್ಟೆ ದೊರಕುತ್ತವೆ.

ಕನ್ನಡದಲ್ಲಿ ಮೊದಲಬಾರಿಗೆ ದೊಂಬಿದಾಸರನ್ನು ಕುರಿತು ಜೀಶಂಪ ಅವರು "ದೊಂಬಿದಾಸರು" ಎಂಬ ಕಿರು ಹೊತ್ತಿಗೆ ಹೊರತಂದು ಕರ್ನಾಟಕದ ಜನಪದ ಕ್ಷೇತ್ರಕ್ಕೆ ಪರಿಚಯಿಸಿದರು. ಹಾಗೂ "ದೊಂಬಿದಾಸರ ಲಾವಣಿಗಳು" ಎಂಬ ಗ್ರಂಥವನ್ನು ಪ್ರಕಟಿಸಿದ್ದಾರೆ. ಇವುಗಳನ್ನು ಬಿಟ್ಟರೆ, ಕುಪ್ಪೆ ನಾಗರಾಜ್‌ರವರ "ಏಕತಾರಿ ಸ್ಮರಣಸಂಚಿಕೆ ಇಲ್ಲಿ ಉಲ್ಲೇಖಿಸಬಹುದು. ಅವರ ಸಾಹಿತ್ಯ ಸಂಸ್ಕೃತಿ ಜೀವನ ಕ್ರಮ ಆಚಾರ ವಿಚಾರಗಳು, ಸಾಮಾಜಿಕ ಶ್ರೇಣಿ, ವಸತಿ ನೆಲೆಗಳು, ಪ್ರಮುಖವಾದ ಹಬ್ಬ ಹರಿದಿನಗಳು, ಸಂಪ್ರದಾಯ ಗಳು, ನಂಬಿಕೆಗಳು, ನ್ಯಾಯ ಪದ್ಧತಿ, ಅವಿಭಾಜ್ಯ ಅಂಗವಾಗಿದ್ದ ಬೇಟೆ ಪದ್ಧತಿ, ವೃತ್ತಿ ಕಲಾವಿದರಾಗಿ ಈ ನಾಡಿನ ಸಾಂಸ್ಕೃತಿಕ ಬದುಕನ್ನು ಶ್ರೀಮಂತಗೊಳಿಸಿದ ವಿಧಾನಗಳನ್ನು, ಸಾಹಿತ್ಯ ಪ್ರಕಾರಗಳನ್ನು, ನಾಡಿನ ದಾಸಪರಂಪರೆಯ ದಾರ್ಶನಿಕರ ವಿಚಾರಗಳನ್ನು, ಅವರ ಬದುಕು ಬವಣೆಗಳ ಕುರಿತಂತೆ ಈ ಕೃತಿಯಲ್ಲಿ ಅವಲೋಕಿಸಲಾಗಿದೆ.

# ೨

# ಮೂಲ ಮತ್ತು ಪ್ರಸಾರ

## ಹೆಸರು ಹಾಗೂ ಔಚಿತ್ಯ

ನಾಡಿನ ಸಾಂಸ್ಕೃತಿಕ ರಾಯಬಾರಿಗಳಾದ ಈ ಸಮುದಾಯದ ಮೂಲದ ಬಗ್ಗೆ ಸ್ಪಷ್ಟವಾದ ಮಾಹಿತಿ ಲಭ್ಯವಿಲ್ಲವೆಂದೇ ಹೇಳಬೇಕು. ಇವರ ಮೂಲ ಕುರಿತಂತೆ ಹಲವು ವಿದ್ವಾಂಸರ ಅಭಿಪ್ರಾಯಗಳು ಹೀಗಿವೆ. "ದೊಂಬಿ" ಎಂಬ ಪದ ತೆಲುಗು ಮೂಲದ "ದೊಮ್ಮಿ" ಎಂಬುದುರಿಂದ ಬಂದಿರಬಹುದೆಂದು ಊಹಿಸಲಾಗಿದೆ. "ದೊಮ್ಮಿ" ಎಂದರೆ ಕಾಳಗ ಜಗಳ ಎಂಬರ್ಥದ ಜೊತೆಗೆ ಗದ್ದಲ, ಗೊಂದಲ ಎಂಬರ್ಥಗಳೂ ಇವೆ. ಇದಕ್ಕೆ ಪೂರಕವಾಗಿ ಇವರು ಹೆಸರಾಂತ ಬಯಲಾಟದ ಕಲಾವಿದರಾಗಿದ್ದು ಬಯಲಾಟಗಳನ್ನು ಪ್ರದರ್ಶಿಸುವಾಗ ನಾಟಕದ ಪಾತ್ರಗಳು ಕೆಲವೊಮ್ಮೆ ಪ್ರೇಕ್ಷಕರ ನಡುವೆ ಕೂಡ ಕಾಣಿಸಿಕೊಂಡು ಒಂದು ರೀತಿಯ 'ಗದ್ದಲ' ದೊಂಬಿ ಸೃಷ್ಠಿಯಾಗುತ್ತಿತ್ತು. ಮತ್ತೆ ಕೆಲವು ಸಂದರ್ಭಗಳಲ್ಲಿ ಪರದೆಯ ಹಿಂದುಗಡೆ ತಮ್ಮೊಳಗೆ ಗದ್ದಲವೇರ್ಪಡುತಿತ್ತು. ಈ ಗದ್ದಲ ನಾಟಕದ ಜೊತೆಯೆ ಸಮ್ಮಿಲನಗೊಂಡು ಹೆಚ್ಚು ಗದ್ದಲ ಉಂಟಾಗುತಿತ್ತು.

ಕರ್ನಾಟಕ ರಾಜ್ಯಾದ್ಯಂತ ಕಂಡುಬರುವ ದೊಂಬಿದಾಸರು ಒಂದು ಅಲೆಮಾರಿ ಸಮುದಾಯ. ಈ ಸಮುದಾಯದ ಬಗ್ಗೆ ಅಧ್ಯಯನಗಳು ನಡೆದಿರುವುದು ಕಂಡು ಬರುವುದಿಲ್ಲ. ದಕ್ಷಿಣ ಭಾರತದ ಜಾತಿಗಳ ಬಗ್ಗೆ ಅಧ್ಯಯನ ನಡೆಸಿರುವ ಹೆಚ್ ವಿ ನಂಜುಂಡಯ್ಯ ಮತ್ತು ಅನಂತಕೃಷ್ಣ ಅಯ್ಯರ್ ಹಾಗೂ ಥರ್‍ಸ್ಟನ್‌ರವರು ದಾಸರಿ ಹಾಗೂ ದೊಂಗದಾಸರಿಗಳನ್ನು ಎರಡು ಪ್ರತ್ಯೇಕ ಜಾತಿಗಳಾಗಿ ಪರಿಗಣಿಸಿರುವುದಾದರೂ, ದೊಂಬಿದಾಸರ ಜಾತಿಯನ್ನು ಪ್ರತ್ಯೇಕ ಜಾತಿಯೆಂದು ಸೂಚಿಸಿಲ್ಲ. ದೊಂಗದಾಸರ ಚೋರ ವೃತ್ತಿ, ಇತರ ದಾಸರ ಸಾಮಾಜಿಕ ವೃತ್ತಿಗಳಿಗೆ ವ್ಯತಿರಿಕ್ತವಾಗಿರವುದೇ ಇದಕ್ಕೆ ಕಾರಣ. ದಾಸರಿ ಜಾತಿಯ ಅನೇಕ ಉಪ ಜಾತಿಗಳಲ್ಲಿ ದೊಂಬಿದಾಸರು ಒಂದು ಉಪ ಜಾತಿ, ೧೯೦೧ರ ಜನಗಣತಿಯ ವರದಿಯಲ್ಲಿ ದಾಸರಿ ಸಮುದಾಯಕ್ಕೆ ಸೇರಿದ ಈ ಕೆಳಕಂಡ ಸ್ವಗೋತ್ರ ಪಂಗಡಗಳನ್ನು ಪಟ್ಟಿಮಾಡಲಾಗಿದೆ. ಗುಡುಮದಾಸರಿ, ದೊಂಬಿದಾಸರು, ಧರ್ಮದಾಸರು, ಶಂಕದಾಸರು, ಚಕ್ರವಾದ್ಯ ದಾಸರು ಇವುಗಳ ಜೊತೆಗೆ ಇರುವ ಸ್ವಗೋತ್ರ ಪಂಗಡಗಳೆಂದರೆ, ದೇಶಬಾಗದಾಸರು, ಕತ್ತರಿ ದಾಸರು,

ಆಟದಾಸರು, ಬಿಂದಿಗೆ ದಾಸರು, ನಾಮದಾರಿ ದಾಸರು, ಶನಿವಾರದಾಸರು. ಈ ಹೆಸರುಗಳು ನಿಜವಾಗಿ ವಿಭಿನ್ನ ಪಂಗಡಗಳನ್ನು ಪ್ರತಿನಿಧಿಸುತ್ತವೆ ಅಥವಾ ಸೂಚಿಸುತ್ತವೆಂದು ಹೇಳುವುದು ಸ್ಪಷ್ಟವಾಗಿಲ್ಲ ಎಂದು ಕೆ ಅನಂತಕೃಷ್ಣ ಅಯ್ಯರ್ ಅಭಿಪ್ರಾಯ ಪಡುತ್ತಾರೆ. ಮುಂದುವರಿದು "ಗುಂಪುಗಳಲ್ಲಿ ನರ್ತನ ಮಾಡುವುದರಿಂದಾಗಿ ಇವರನ್ನು ದೊಂಬಿದಾಸರೆಂದು ಕರೆಯಲಾಗಿದೆ. ಈ ಸಮುದಾಯದ ವೃತ್ತಿ ಜೀವನಕ್ಕೆ ಸಂಬಂಧಿಸಿದಂತೆ ಕಳ್ಳ ಅಥವಾ ದೊಂಗ ಎಂಬ ಪದವು (ಪರಿಕಲ್ಪನೆ) ಯಾವುದೇ ಅಪರಾಧ ಪ್ರವೃತ್ತಿಯನ್ನು ಅರ್ಥೈಸುವುದಿಲ್ಲ ಎಂದಿದ್ದಾರೆ.

"Dombidasaru are so called on account of their dancing in a group. The term thief or donga has no reference to any criminal prospersity, but is apparently applied to devoters who fail to visit holy shrine of Tirupathi for three generations in that case they are known as donga kapu (Iyar, Ananthakrishna L K :1931:103)

೧೯೦೧ರ ಕರ್ನಾಟಕ ರಾಜ್ಯದ ಜನಗಣತಿಯಲ್ಲಿ ದೊಂಬಿದಾಸರನ್ನು ದಾಸರಿಗಳ ಪೈಕಿ ಒಂದು ಉಪವರ್ಗವೆಂದು ಇವರು ಇಡೀ ರಾಜ್ಯಾದ್ಯಂತ ವ್ಯಾಪಕವಾಗಿ ಹರಡಿರುವರೆಂದು ಹೇಳಲಾಗಿದೆ. ಕರ್ನಾಟಕದ ಗಡಿಭಾಗಗಳಾದ ತಮಿಳುನಾಡಿನ ಉತ್ತರ ಅರ್ಕಾಟ್, ತಂಜಾವೂರು, ಮಧುರೈ ಮತ್ತು ಆಂಧ್ರ ಪ್ರದೇಶದ ಅನಂತಪುರ, ಹಿಂದುಪುರ, ಪೆನಕೊಂಡ ಜಿಲ್ಲೆಗಳಲ್ಲಿ ಇವರ ನೆಲೆಗಳಿದ್ದವೆಂದು ಗುರುತಿಸಿದೆ. ಮೂಲತಃ ಆಂಧ್ರ ಪ್ರದೇಶದವರಾದ ಈ ವೃತ್ತಿಗಾಯಕರು ವಿಜಯನಗರದ ಅರಸರ ಕಾಲದಲ್ಲಿ ದಕ್ಷಿಣ ಭಾರತದಾದ್ಯಂತ ಹರಡಿಕೊಂಡಂತೆ ಕಂಡುಬರುತ್ತದೆ. ಅಂದು ಅವರ ಹೆಸರು ದಂಡಿದಾಸರು ಎಂಬುದಾಗಿತ್ತು ಎಂದು ತಿಳಿದು ಬರುತ್ತದೆ. ಉದಾಹರಣೆಗೆ "ಕೃಷ್ಣ ದೇವರಾಯನು ಪಿರಿಯಾಪಟ್ಟಣದ ಚಂಗಾಳ್ವರನ್ನು ಸೋಲಿಸಿ ಅಲ್ಲಿ ತನ್ನ ಪ್ರತಿನಿಧಿ ಗುಂಡು ರಾಜನನ್ನು ನಿಲ್ಲಿಸಿದುದಾಗಿಯೂ ಗುಂಡುರಾಜನ ಪರಿವಾರದಲ್ಲಿನ ಕೆಲವು ತೆಲುಗರು ಉಳಿದುಕೊಂಡ ಊರು ತೆಲುಗಿನ ಕುಪ್ಪೆಯಾಗಿಯೂ, ಈ ದಂಡಿನ ಜೊತೆ ಸೈನಿಕರನ್ನು ತಮ್ಮ ನೃತ್ಯ ನಾಟಕ ಗಾಯನಗಳಿಂದ ರಂಜಿಸಲು ಬಂದಿದ್ದ ಕಲಾಕಾರರಾದ ದಾಸರು ಉಳಿದುಕೊಂಡ ಊರು ದಂಡಿನ ಕೊಪ್ಪಲು ಎಂದು ಹೆಸರಾಗಿದೆ ಎಂದು ತಿಳಿದು ಬಂದಿದೆ(ಕುಪ್ಪೆ, ನಾಗರಾಜ: ೨೦೦೩:೭) ಎಂದು ಡಾ ಪಿ ಕೆ ರಾಜಶೇಖರ್ ಅವರು ಉಲ್ಲೇಖಿಸಿದ್ದಾರೆ.

ಇನ್ನೊಂದು ಮೂಲದ ಪ್ರಕಾರ ಇವರು ವಿಜಯನಗರ ಅರಸ ಶ್ರೀ ಕೃಷ್ಣದೇವರಾಯನ ನಂಬಿಕಸ್ತ ಗೂಢಾಚಾರರಾಗಿದ್ದರೆಂದು ರಾಜ್ಯಾಡಳಿತಕ್ಕೆ ಸಂಬಂಧಿಸಿದ ಗುಪ್ತ ಮಾಹಿತಿಗಳನ್ನು ಸಂಗ್ರಹಿಸಲು ಇವರು ಕಲಾವಿದರಾಗಿ ಊರೂರು ಅಲೆದು ಮಾಹಿತಿ ಸಂಗ್ರಹಿಸಿ ರಾಜ್ಯಾಡಳಿತಕ್ಕೆ ತಲುಪಿಸುತ್ತಿದ್ದರೆಂದೂ ನಂಬಲಾಗಿದೆ. ಹೀಗೆ ಸೈನಿಕರ ಮನರಂಜನೆ

ಮತ್ತು ಗೂಢಾಚಾರ ಕೆಲಸ ಮಾಡುತ್ತಿದ್ದ ದಂಡಿನ ಜೊತೆ ಇರುತ್ತಿದ್ದ ದಂಡಿನದಾಸರೇ ಈ ದೊಂಬಿದಾಸರಾಗಿರುವ ಸಾಧ್ಯತೆ ಇದೆ. ಅಲ್ಲದೆ ಇವರು ಹಾಡಲು ಬಳಸುತ್ತಿದ್ದ ದಂಡಿಗೆ(ಏಕತಾರಿ) ಎಂಬ ವಾದ್ಯದಿಂದ ದಂಡಿಗೆ ದಾಸರಾಗಿದ್ದು ತರುವಾಯ ದಂಡಿನ ದಾಸರಾಗಿರಬಹುದು. ಅನಂತ ಕೃಷ್ಣ ಅಯ್ಯರ್ ಅವರು ಹೇಳುವಂತೆ ಅವರು ನಾಟಕದಲ್ಲಿ ಹಾಡುವಾಗ ಏಕತಾರಿಯೊಡನೆ ಬೀದಿಯಲ್ಲಿ ಹಾಡಿಕೊಳ್ಳುತ್ತಾ ಭಿಕ್ಷೆ ಬೇಡುವಾಗ ಅವರ ಸಂಗೀತ ಬಹುಜನರನ್ನು ಆಕರ್ಷಿಸುತ್ತಿದ್ದದ್ದರಿಂದ, ಇವರು ದುಂಬಿಯಂತೆ ಬಹು ಮಧುರವಾಗಿ ಹಾಡುವುದರಿಂದ ಇವರನ್ನು "ದುಂಬಿದಾಸ"ರೆಂದು ಊಹಿಸುತ್ತಾರೆ (ಅವರೇ:೨೦೦೩:೩).

## ಐತಿಹ್ಯ ಮತ್ತು ಪುರಾಣ

ದೊಂಬಿದಾಸರು ವೈಷ್ಣವ ಸಂಪ್ರದಾಯಸ್ಥರು. ತಿರುಪತಿ ವೆಂಕಟರಮಣ ಸ್ವಾಮಿಯ ಭಕ್ತರು. ಸಂಪ್ರದಾಯದಂತೆ ಪ್ರತಿವರ್ಷ ಅಲ್ಲಿಗೆ ಕಾಣಿಕೆ ಸಲ್ಲಿಸುತ್ತಿದ್ದರು. ಕಾರಣಾಂತರ ದಿಂದ ಕಾಣಿಕೆ ಒಪ್ಪಿಸುವುದನ್ನು ಕೈಬಿಟ್ಟರು. ವಾರ್ಷಿಕ ಕಾಣಿಕೆಯನ್ನು ತಿರುಪತಿ ಕ್ಷೇತ್ರಕ್ಕೆ ಒಪ್ಪಿಸದೆ ಕೈಕೊಟ್ಟರೆಂಬ ಕಾರಣಕ್ಕಾಗಿ, ಇವರನ್ನು ದೊಂಗದಾಸರು (ಕಳ್ಳದಾಸರು) ಎಂದೂ ದೊಂಗ ಪದ ಕ್ರಮೇಣ ದೊಂಬಿ ಎಂದಾಯಿತೆಂದು, ಮುಂದೆ ಇವರೇ ದೊಂಬಿದಾಸರೆಂದಾದರು.

ದೊಂಬಿದಾಸರನ್ನು ಹೆಣ್ಣುವೇಷದವರು ಎಂದು ಕರೆಯುವ ವಾಡಿಕೆ ಇದೆ. ಹೆಣ್ಣುವೇಷದವರೆಂದು ಕರೆಯಲು ಪುರಾಣ ಕಥೆಯೊಂದು ಹೀಗಿದೆ.

ಇಬ್ಬರು ಗಂಡಸರು ಯಾವುದೋ ಒಂದು ದಾರಿಯಲ್ಲಿ ಬರುತ್ತಿದ್ದರು. ಪಾರ್ವತಿ ದೇವಿ ವಿಹಾರಾರ್ಥವಾಗಿ ಭೂಲೋಕದಲ್ಲಿ ಸಂಚರಿಸುತ್ತಾ ಬರುತ್ತಿರುವಾಗ ದೈವೀ ಸೌಂದರ್ಯವನ್ನು ಕಂಡು ಅವಳಿಗಾಗಿ ಆಸೆಪಟ್ಟು ಇಬ್ಬರೂ ಧೈರ್ಯ ಮಾಡಿ ನನ್ನನ್ನು ಮದುವೆಯಾಗು, ನನ್ನ ಹೆಂಡತಿಯಾಗು ಎಂದು ಅಂಗಲಾಚಿದರು. ಆಗ ಪಾರ್ವತಿ ಕೋಪದಿಂದ ಲೋಕಮಾತೆಯಾದ ನನ್ನನ್ನು ಬಯಸಿದ ನೀವು ನಪುಂಸಕ ರಾಗಿರೆಂದು ಶಾಪಕೊಟ್ಟಳಂತೆ. ಶಾಪಗ್ರಸ್ಥರಾದ ಇವರು ತಾವು ಮಾಡಿದ ಅಪರಾಧಕ್ಕೆ ಪಶ್ಚಾತಾಪಪಟ್ಟು ತಮ್ಮನ್ನು ಕ್ಷಮಿಸಬೇಕೆಂದು ಗೋಳಾಡಿದರು. ಮಮತಾಮಯಿ ದೇವಿ ಪಾರ್ವತಿ ಕನಿಕರದಿಂದ ನಿಮ್ಮ ನಪುಂಸಕತ್ವವನ್ನು ನಾನು ಹೋಗಲಾಡಿಸಿದರೂ ನೀವು ನಿಮ್ಮ ಸ್ತ್ರೀಯರ ಸೀರೆ ಕುಪ್ಪಸಗಳನ್ನು ಉಟ್ಟುಕೊಂಡು ಸ್ತ್ರೀ ಪಾತ್ರಗಳನ್ನು ಹಾಕಿ ಕೊಂಡು ಜನರಿಗೆ ಮನರಂಜನೆ ನೀಡುವ ಗೀತ ನೃತ್ಯನಾಟಕಗಳಿಂದ ಹಣ ಸಂಪಾದಿಸಿ ಬದುಕುವ ಮಾರ್ಗ ನಿಮ್ಮದಾಗಲಿ ಎಂದು ಹೇಳಿ ಅದೃಶ್ಯಳಾದಳು. ಅಂದಿನಿಂದ ದೊಂಬಿದಾಸರಿಗೆ ಯಕ್ಷಗಾನ ಬಯಲಾಟಗಳಲ್ಲಿ ಸ್ತ್ರೀ ವೇಷ ಹಾಕುವುದು ಮತ್ತು ಹಾಡುವುದು ಪ್ರಧಾನ ವೃತ್ತಿಯಾಯಿತು. ಅಲ್ಲಿಂದ ಅವರು ಹೆಣ್ಣು ವೇಷದವರೆಂದು ಪ್ರಸಿದ್ಧರಾದರು(ಅವರೇ:೨೦೦೩:೫೨-೩).

ಪ್ರೊ ಆರ್ ವಿ ಎಸ್ ಸುಂದರಂ ರವರು ಹೇಳುವಂತೆ ತೆಲಗು ದಾಸರಲ್ಲಿ ಅನೇಕ

ರೀತಿಯವರಿದ್ದಾರೆ. ದೊಂಬಿದಾಸರೆಂಬ ಹೆಸರಿಲ್ಲದಿದ್ದರೂ ಇಬ್ಬರನ್ನೂ ಹೋಲಿಸಿ ನೋಡಿದಾಗ ಕೆಲವು ಸಾಮ್ಯತೆಗಳು ಕಂಡು ಬರುತ್ತವೆ. ಮೊದಲನೆಯದಾಗಿ ಇವರು ವೈಷ್ಣವ ಸಂಪ್ರದಾಯಕ್ಕೆ ಸೇರಿದವರು. ಹರಿದಾಸ ಸಂಪ್ರದಾಯವನ್ನು ನಡೆಸುವಂಥವರನ್ನು ಆಂಧ್ರದಲ್ಲಿ ದಾಸರೆನ್ನುತ್ತಾರೆ. ಇವರು ಯಾವುದೇ ಒಂದು ಜಾತಿಗೆ ಸೇರಿದವರೆಂದು ಹೇಳಲಾಗುವುದಿಲ್ಲ. ಶ್ರೀ ಕೃಷ್ಣ ದೇವರಾಯನು ರಚಿಸಿದ "ಅಮುಕ್ತಮೌಲ್ಯದ" ಕಾವ್ಯದ ಮುಖ್ಯ ಪ್ರಸಂಗದಲ್ಲಿ ಮಾಲದಾಸರಿ ಕಥೆ ಒಂದು. ಅದರಲ್ಲಿ ದಲಿತ ಜನಾಂಗಕ್ಕೆ ಸೇರಿದ ದಾಸರಿ ವಿಷ್ಣು ನಾಮ ಸಂಕೀರ್ತನದ ಫಲವಾಗಿ ಅತ್ಯಧಿಕ ಪುಣ್ಯವನ್ನು ಪಡೆದ ಕಥೆ ಇದೆ. ಆ ಕಥೆಯಲ್ಲಿ ಮಾಲದಾಸರಿ ಒಬ್ಬ ಮಹಾ ಭಕ್ತನೆಂದು ಶ್ರೀ ಕೃಷ್ಣದೇವರಾಯ ನಿರೂಪಿಸಿದ್ದಾನೆ. ಇದಕ್ಕೆ ಪೂರಕವಾಗಿ ಚುಟುಕು ಮಾಸ ಪತ್ರಿಕೆ ಅಕ್ಟೋಬರ್ ೨೦೦೨ರಲ್ಲಿ ಪ್ರಕಟಿಸಿರುವ "ದಲಿತ ಪುರೋಹಿತರಿರುವ ದೇವಾಲಯ" ಲೇಖನದ ವಿವರ ಹೀಗಿದೆ.

**ಮಾಲದಾಸರಿ ಪುರೋಹಿತರಾದದ್ದು**

ಆಂಧ್ರ ಪ್ರದೇಶದ ವಿಜಯವಾಡ ಜಿಲ್ಲೆಯ ಉಪ್ಪುಲೂರು ಎಂಬ ಹಳ್ಳಿಯಲ್ಲಿರುವ ಐತಿಹಾಸಿಕ ಚೆನ್ನಕೇಶವಸ್ವಾಮಿ ದೇವಾಲಯದಲ್ಲಿ ಒಂಬತ್ತು ಜನ ದಲಿತ ಪುರೋಹಿತರು ನೇಮಕವಾಗಿದ್ದಾರೆ. ಇದಕ್ಕೆ ಮೇಲ್ವರ್ಗದ ಭಕ್ತರು ಯಾವುದೇ ವಿರೋಧ ವ್ಯಕ್ತಪಡಿಸಿಲ್ಲ. (ಆಂಧ್ರ ಪ್ರದೇಶದಲ್ಲಿ ಪರಿಶಿಷ್ಟಜಾತಿಗೆ ಸೇರಿದ ಮಾಲದಾಸರಿಯವರು ಪುರೋಹಿತ ರಾಗಿದ್ದಾರೆ.)

ಜನಪದ ಕಥೆಗಳ ಪ್ರಕಾರ ಸುಮಾರು ೭೦೦ವರ್ಷಗಳ ಹಿಂದೆ ಸ್ಥಳೀಯ ರಾಜ ರೊಬ್ಬರು ಮಾಲದಾಸರಿ ಸಮುದಾಯದವರನ್ನು ಪುರೋಹಿತರನ್ನಾಗಿ ನೇಮಿಸಿದರೆಂದು ಹೇಳಲಾಗಿದೆ. ೮೦೦೦ ಜನಸಂಖ್ಯೆ ಇರುವ ಉಪ್ಪುಲೂರು ಗ್ರಾಮದಲ್ಲಿ ಬಹುಸಂಖ್ಯಾತರು ಮೇಲ್ವರ್ಗದವರೇ ಆಗಿದ್ದಾರೆ. ಪುರೋಹಿತಿಕೆ ಮಾಡುವ ಮಾಲದಾಸರಿಗಳಲ್ಲಿ ಕೆಲವರು ತಮ್ಮ ಪುರೋಹಿತ ವೃತ್ತಿಯ ಜೊತೆಗೆ ಸರ್ಕಾರಿ ನೌಕರರಾಗಿಯೂ ಕೆಲಸ ಮಾಡುತ್ತಿದ್ದಾರೆ. ಪುರೋಹಿತತನವನ್ನು ತಮ್ಮ ಪೂರ್ವಿಕರಿಗೆ ೧೪ನೇ ಶತಮಾನದ ಸಮಾಜ ಸುಧಾರಕ ಬ್ರಾಹ್ಮಣ ನಾಯ್ಡುರವರು ನೀಡಿದರು ಎಂದು ಕೃಷ್ಣಮೂರ್ತಿ ಮತ್ತು ಕೇಶವದಾಸು ಹೇಳುತ್ತಾರೆ.

ನಾಗಮ್ಮನೊಂದಿಗೆ ನಡೆದ ಯುದ್ಧದ ವೇಳೆಯಲ್ಲಿ ಬ್ರಾಹ್ಮಣ ನಾಯ್ಡು ಈ ದಲಿತ ಸಮುದಾಯವನ್ನು ಅಲ್ಲಿನ ದೇವಾಲಯದ ಚೆನ್ನಕೇಶವ ವಿಗ್ರಹವನ್ನು ಸುರಕ್ಷಿತ ಸ್ಥಳಕ್ಕೆ ತೆಗೆದುಕೊಂಡು ಹೋಗುವಂತೆ ಹೇಳಿದರು. ಇವರು ಉಪ್ಪಲೂರಿಗೆ ತಂದ ವಿಗ್ರಹವನ್ನು ಕಂಡಾಲರಾಮಕೃಷ್ಣಚಾರಿ ೧೩೩೫ರಲ್ಲಿ ಪ್ರತಿಷ್ಠಾಪನೆ ಮಾಡಿದರು.

ಮಾಲದಾಸರಿ ಸಮುದಾಯದವರು ಪುರೋಹಿತರಾದ ಸಂದರ್ಭವನ್ನು ಈ ಅಂಶಗಳು ಸ್ಪಷ್ಟಪಡಿಸುತ್ತದೆ. ಮುಂದುವರಿದು ಈ ದಾಸ ಸಮುದಾಯವು ಶೂದ್ರರು ಮತ್ತು ಸಮಾಜದ ಕೆಳಸ್ಥರದ ಸಮುದಾಯಕ್ಕೆ ಪುರೋಹಿತರಾಗಿ ಮುಂದುವರಿದಿದ್ದಾರೆ ಎನ್ನಲಾಗಿದೆ.

ದಾಸ ಸಮುದಾಯದ ಮೂಲ ಕುರಿತಂತೆ, ಈ ಸಮುದಾಯದ ಹಿರಿಯರು ಹೇಳುವ ಕಥೆಗಳೇನು ಎಂಬುದನ್ನು ತಿಳಿದುಕೊಳ್ಳುವ ಪ್ರಯತ್ನ ಮಾಡಲಾಗಿ ಕೆಲವು ಅಭಿಪ್ರಾಯಗಳು ಹೀಗಿವೆ.

ಮಂಡ್ಯದ ಡಿ ಎಂ ಲಕ್ಕಯ್ಯ ವಯಸ್ಸು ಸುಮಾರು ೭೦ ವರ್ಷ. ಇವರು ವೃತ್ತಿಯಿಂದ ನಾಟಕದ ಮಾಸ್ತರು, ಇವರು ಹೇಳುವಂತೆ, "ನಾವು ವಿಜಯನಗರ ಸಾಮ್ರಾಜ್ಯದವರಾಗಿದ್ದು, ರಾಜಧಾನಿ ಹಂಪಿಯಿಂದ ಈ ಕಡೆಗೆ ಬಂದ್ವಿ. ವಿಜಯನಗರ ರಾಜರ ಕಾಲದಲ್ಲಿ ನಮ್ಮ ಜನ ವ್ಯಾಪಾರಸ್ಥರಾಗಿದ್ದು, ಮುತ್ತು-ರತ್ನಗಳನ್ನು ಮಾರಾಟ ಮಾಡುತ್ತಿದ್ದರು. ಈ ಕಾರಣದಿಂದಾಗಿಯೇ ಇವರ ಮನೆ (ಬೆಡಗು) ಹೆಸರುಗಳು ಮುತ್ತಿಮಶೆಟ್ಟೋಳು, ಅಮಲಶೆಟ್ಟೋಳು, ಸೆನಿಮಶೆಟ್ಟೋಳು, ಪಾಲೋಳ್ಳು ಮುಂತಾಗಿ ಇವೆ. ಬೀದಿಗಳಲ್ಲಿ ಮುತ್ತು ರತ್ನಗಳ ವ್ಯಾಪಾರ ಮಾಡುತ್ತಿದ್ದ ಈ ಸಮುದಾಯ, ಮೊಘಲರ ಆಕ್ರಮಣದಿಂದಾಗಿ ವಿಜಯನಗರ ಪತನವಾದ ನಂತರ ಇವರ ಬದುಕು ಶೀರ ಕಷ್ಟಕರವಾಗತೊಡಗಿತು. ಒಂದೊತ್ತಿನ ಊಟಕ್ಕಾಗಿ ಗತಿಯಿಲ್ಲದ ಸ್ಥಿತಿಗೆ ತಲುಪಿದರು. ಈ ಪರಿಸ್ಥಿತಿ ಇರುವಾಗ ಒಂದು ದಿನ ಒಬ್ಬ ದಾಸ ತಿನ್ನಲು ಏನು ಸಿಗದೆ ನಿತ್ರಾಣನಾಗಿದ್ದು, ಹೊಟ್ಟೆ ತುಂಬಿಸಿಕೊಳ್ಳಲು ಏನಾದರೂ ಮಾಡಲೇಬೇಕಾಗಿತ್ತು. ಆ ದಾಸ ತುಂಬ ಕಿಲಾಡಿ ಮನುಷ್ಯನಾಗಿದ್ದನು, ಅಂತಹ ನಿತ್ರಾಣ ಸ್ಥಿತಿಯಲ್ಲೂ ಧೃತಿಗೆಡದೆ ತನಗೆ ಬರುತ್ತಿದ್ದ ಒಂದು ದಾಸರ ಪದವನ್ನು ತುಂಬ ಸುಶ್ರಾವ್ಯವಾಗಿ ಹಾಡತೊಡಗಿದ. ದಾರಿಯಲ್ಲಿ ಸಂಚರಿಸುತ್ತಿದ್ದ ಜನ ಇವನ ಮಧುರವಾದ ಕಂಠಕ್ಕೆ ಮನಸೋತು ಇವನು ಹಾಡುತ್ತಿದ್ದ ಹಾಡನ್ನು ಕೇಳಲು ಸುತ್ತ ಗುಂಪು ಸೇರಿದರು, ಆ ಸಂದರ್ಭದಲ್ಲಿ ಆ ಮಾರ್ಗವಾಗಿ ಒಬ್ಬ ರಾಜ ಕುದುರೆ ಮೇಲೆ ಹೋಗುತ್ತಿದ್ದ, ಇದ್ಯಾಕೆ ಜನ ಹೀಗೆ ಸೇರಿದ್ದಾರೆ ಏನಿದು ದೊಂಬಿ ಎಂದು ವಿಚಾರಿಸಿದ. ಆಗ ಜನ ಅಲ್ಲೊಬ್ಬ ದಾಸ ಹಾಡು ಹೇಳುತ್ತಿದಾನೆ. ಈ ಜನ ಕೇಳಲಿಕ್ಕಾಗಿ ಗುಂಪು ಸೇರಿದ್ದಾರೆ ಎಂದ. ಆಗ ರಾಜ ಇದೊಂದು ದೊಂಬಿ ಅವನೊಬ್ಬ ದಾಸ, ಅಂತೇಳಿ ಮುಂದೆ ಹೋದ. ಅಲ್ಲಿಂದ ಜನ ಇವರನ್ನು ದೊಂಬಿದಾಸರು ಅಂತ ಕರೆದರು ಮುಂದೆ ಈ ಸಮುದಾಯ ಜೀವನೋಪ ಯಾಕ್ಕಾಗಿ ಹಾಡುಗಳನ್ನು ಹೇಳುತ್ತಾ ಭಿಕ್ಷೆ ಬೇಡಲು ಪ್ರಾರಂಭಿಸಿತು".

ತುಮಕೂರು ಜಿಲ್ಲೆ ತುರುವೇಕೆರೆ ತಾಲ್ಲೂಕಿನ ಚಿಮ್ಮನಹಳ್ಳಿಯ ವೆಂಕಟಪ್ಪನವರಿಂದ ಡಾ ಪಿ ಕೆ ರಾಜಶೇಖರ ಅವರು ದೊಂಬಿದಾಸರ ಕುರಿತಾಗಿ ಒಂದು ಪುರಾಣಕಥೆ ಸಂಗ್ರಹಿಸಿದ್ದಾರೆ. ಅದು ಹೀಗಿದೆ.

"ಇದ್ದರು ಮೊಗೊಳ್ಳು ದಾವುಲೊ ವಸ್ತಾವುಂಡ್ರಿ ಭೂಲೋಕಮುಲೊ ಪಾರ್ವತಿ ಸಂಚರಣೆ ಸೇಸ್ತಾವಸ್ತಾವುಂಡೆ. ವಚ್ಚೆತಪ್ಪಡು ಇದ್ದರು ಮೊಗೊಳ್ಳು ಆಯಮ್ಮನಿ ಚೂಸಿರಿ. ಚಿನ್ನವಾಡು ಎಟ್ಲಾವುಂದಿ ಚೂಡ್ರಾ, ಇಟ್ಲಾ ದಾನ್ನಿ ಮನಮು ಪೆಂಡ್ಲೀಕಾವಾಲ. ಇಟ್ಲಾಅನಿಯನಕನೆ ವಸ್ತಾವುಂಡಾರು. ವಾಳ್ಳು ಇದ್ದರು ಚೂಸಿ ಮಾಟ್ಲಾಡುಕೋನಿ. ಅಪ್ಪುಡು ಪಾರ್ವತಿದೇವಿ ಎನಕ ತಿರುಗಿ ಚೂಸ್ತಿ, ಏಯ್ ಎವುರ್ರಾ ಮೀರೂ ಅನೆ.

ವಾಳ್ಳಿದ್ದರು ಎನಕ ಚೂಸಿ ಎವ್ವುರಾನಕಾನಿ ಪೋ ನೀ ಕ್ಯಾಲಾ, ವಾಳ್ಳು ಅಲ ಅನ್ನಾರು. ಅಪ್ಪುಡು ಈಳ್ಳ ನೋಟ್ಲ್ಲು ಮಾಟ ಚೂಸಿ, ಏಯ್ ಚೆಡ್ಡಮುಂಡ ಕೊಡುಕುಲಾಲ ಯಕ್ಕಡ ಪೋತಾರು ಇದ್ರು ನಿಲುಸ್ಕೊಂಡಿ? ಅನ್ನಾರು, ಅಪ್ಪುಡು ವಾಳಿದ್ರು ನಿಲುಸ್ಕೊನ್ನಾರು' ಅಮ್ಮ ಎವರ್ರೈನಾ ಏಮಿ? ಮಾಮಾಟ ಮಾದೆಪೋ, ನೀ ಪಾಡಿಕಿ ನೂವು ಪೋ, ಅಪ್ಪುಡು ಆಯಮ್ಮ, ವಾಳ್ಳನಿ ಚೂಸಿ ಏಯ್ ದೊಂಗಲ್ಲಾಲ ನನ್ನೀ ಚೂಸಿ ಭ್ರಮಿಸ್ತಾವುಂಡಾರಾ? ನೇನು ಎವ್ವುರು ಅನ್ನೆದಿ ತೆಲಿದಾ ಮೀಕಿ. ದೊಂಗಲಾರ. ಚೂಚಿನ ಆಡುವಾಳ್ಳನಿ ಕಾವಾಲಂಟಾರ ಅಂದುಕು ಮೀರು ನಪುಂಸಕರ್ರೈ ಪೊಂಡಿ. ಇಂಕಮಿಂದ ಮೀ ಪೆಂಡ್ಲಾಲು ಸೀರ ಕಟ್ಟುಕೊನಿ ರವಿಕ ತೊಟ್ಟುಕೋನಿ ವೀದಿವೀದಿಲೋ ಆಡ್ತು ಪಾಡ್ತು ಉಂಡಾಲ, ಮೀರು ಧರಣಿಲೋ ಆಡೋಳ್ಳು ವೇಷಮು ಧರಿಂಚಿ, ಕೊಟ್ಲ್ಯಾನು ಕೋಟಿ ಸಭನಿ ನರ್ತನಂಚೇಸಿ ಮೀರು ಒಪ್ಪಿಯಾಲ, ಮೀರು ನಾ ಲಾಗ ಆಡವಾಳ್ಳು ಕಾವಾಲ. ಇದಿ ನಾ ಶಾಪಂ ಇಂಕಮಿಂದ ಮೀರುದೊಂಗ ದಾಸೊಳ್ಳಾಗ ಪ್ರಸಿದ್ಧ ಪೊಂದಂಡಿ' ಅನ್ನಾರು. ಅಂದುಕು ವಾಳ್ಳು ಅಮ್ಮಾ ಮೋಮು ಚೇಸಿಂದಿ ತಪ್ಪಯ್ಯಿಂದಿ. ಮಮ್ಮಳ್ನಿ ನಪುಂಸಕರುಗ ಚೇಯದಂಡಿ ಮಮ್ಮಳ್ನಿ ಕ್ಷಮಿಂಚಿ ದಯಚೂಪಿಂಚಂಡಿ ವಾಳ್ಳು ಅಲಅನ್ನಾರು. ಅನ್ನಿ ಚೆಪ್ಪಿ ಪಾರ್ವತಿದೇವಿ ಕಾಲುಪೈನ ಪಡಿ ಎಡಿಚಿನ್ನಾರು. ಅಪ್ಪುಡು ಪಾರ್ವತಿ ಕರುಣಂಚೂಪಿಂಚಿ, ಮೀಕು ಕೊಂಚಂ ಕ್ಷಮಿಂಚಾನು, ಮೀರು ನಪುಂಸಕ ಕಾಕಪೋಯ್ನ್ನ ಮೀ ಪೆಂಡ್ಲಾಲ ಸೀರ ಕಟ್ಟುಕೋನಿ ರವಿಕ ತೊಟ್ಟುಕೋನಿ ವೀದಿ ವೀದಿಲೊ ಆಡುತೊ ಪಾಡುತೊ ಉಂಡಾಲ. ಮೀರು ಪೋಯಿನ ತೋಟ ಜನಂ ಗುಂಪು ಗುಂಪುಗ ಚೇರಾಲ. ಅಪ್ಪುಡು ಮೀರು ದೊಂಗದಾಸೊಳ್ಳು ಕಾದು; ಮೀರು ದೊಂಬಿದಾಸೊಳ್ಳು ಇಂಕಮಿಂದ ದೊಂಬಿ ದಾಸೊಳ್ಳುಗ ಪ್ರಸಿದ್ಧಿರಾವಂಡಿ' ಅನಿ ಚಪ್ಪಿ ಪಾರ್ವತಿ ದೇವಿ ಮಾಯಮ್ಮೆಯಿಂದಿ. ಆ ದೊಂಗದಾಸೊಳ್ಳೆ ಈ ದೊಂಬಿದಾಸೊಳ್ಳು (ಕುಪ್ಪೆ, ನಾಗರಾಜ: ೨೦೦೩:೮).

ದಾಸರಾಟದ ಜನಪ್ರಿಯತೆ ಎಷ್ಟಿತ್ತೆಂಬುದಕ್ಕೆ ಒಂದು ಕಥೆಯುಂಟು. ಕ್ರಿಶ. ೧೦೨೧ರಲ್ಲಿ ಬಿಜಾಪುರ ಜಿಲ್ಲೆಯಲ್ಲಿ ಅಕ್ಕಮ್ಮ ರಾಜ್ಯವಾಳುತ್ತಿದ್ದಳು. ಅನಂತರ ಹಾಳಾದ ಈ ಪಟ್ಟಣದಲ್ಲಿ ದೆವ್ವಗಳು ವಾಸವಾಗಿದ್ದವಂತೆ. ಒಮ್ಮೆ ಒಂದು ದಾಸರಾಟದ ತಂಡ ಅಲ್ಲಿಂದ ಹಾದು ಹೋಗುವಾಗ ಅಲ್ಲಿರುವ ದೆವ್ವಗಳು ಮನುಷ್ಯ ರೂಪ ತಾಳಿ ಆ ತಂಡದವರನ್ನು ಆಟವಾಡಲು ವಿನಂತಿಸಿದವಂತೆ. ಬೆಳಗಾಗುತ್ತಲೇ ನೋಡುತ್ತಾ ಕುಳಿತ ಮನುಷ್ಯರ ಮುಖಗಳು ವಿಕಾರ ಮುಖಗಳಾಗಿ ಮಾರ್ಪಡತೊಡಗಿದವಂತೆ. ಅದನ್ನು ಕಂಡ ಆಟದವರು ಮಡಿದರಂತೆ. ಆದರೆ, ಅಲ್ಲಿದ್ದ ದಾಸರಾಟದ ಮುಂದಾಳು ಹಾಗೂ ಒಬ್ಬ ನಟ ಬದುಕಿ ಉಳಿದುಬಂದರಂತೆ. ಆಟ ಆಡಲು ಕೇಳಿದವರು, ಆಟ ನೋಡಿದವರೂ ಮನುಷ್ಯರಾಗಿರದೇ ಭೂತವಾಗಿದ್ದರು. ಅಂದರೆ ಭೂತಪ್ರಪಂಚಕ್ಕೂ ದಾಸರಾಟ ಇಷ್ಟವಾಗಿತ್ತೆಂಬುದು ವೇದ್ಯವಾಗುತ್ತದೆ (ಜಾನಪದ ದರ್ಶನ:೯೬–೯೭).

ಒಟ್ಟು ದಾಸ ಸಮುದಾವನ್ನು ಕುರಿತಂತೆ ಅವರ ಮೂಲದ ಕುರಿತಂತೆ ಒಂದು

ನಿರ್ದಿಷ್ಟವಾದ ಅಭಿಪ್ರಾಯಕ್ಕೆ ಬರುವುದು ಕಷ್ಟ. ಒಂದೇ ಸಮುದಾಯವನ್ನು ಪ್ರಾಂತೀಯವಾಗಿ ಜನಪದರು ಒಂದೊಂದು ಹೆಸರಿನಿಂದ ಕರೆಯಲು ಪ್ರಾರಂಭಿಸಿದರು. ಬೇರೆಯವರು ಈ ಸಮುದಾಯವನ್ನು ಯಾವ ಯಾವ ಹೆಸರಿನಿಂದ ಕರೆಯ ತೊಡಗಿದರೋ ಅದೇ ಹೆಸರುಗಳು ಇವರುಗಳದ್ದಾದವು. ಈ ಯಾವ ಹೆಸರುಗಳನ್ನು ದಾಸರು ತಮಗೆ ತಾವೇ ಇಟ್ಟುಕೊಂಡಿದ್ದಲ್ಲ. ಬಯಲಾಟಗಳನ್ನು ಆಡುತ್ತಿದ್ದರಿಂದ ಇವರನ್ನು ಜನ ಆಟದಾಸರೆಂದರೆ, ಬಿಕ್ಷೆ ಬೇಡುತ್ತಿದ್ದ ಇವರನ್ನು ಇನ್ನೊಂದು ಕಡೆ ಕೇಳಿಕೆಯವರು (ಕೇಳಿಕೊಂಡು ತಿನ್ನುವವರು) ಎಂದು ಕರೆದರು. ಹಳ್ಳಿಗರಿಂದ ದಾನವಾಗಿ ಪಡೆದ ಹಸು ಎತ್ತುಗಳನ್ನು ಆಡಿಸಿ ರಾಮ ಸೀತೆ ಕಥೆ ಹೇಳಿ ಭಿಕ್ಷೆ ಬೇಡಿ ಬದುಕುತ್ತಿದ್ದವರನ್ನು ಗಂಗೆದ್ದು, ಕೋಲೆಬಸವ, ಕವಲೆತ್ತಿನವರು ಎಂದರು, ಗೋಪಾಳ ಬುಟ್ಟಿ ಶಂಖ ಜಾಗಟೆ ಗರುಡುಗಂಭ ಬಳಸಿ ಭಿಕ್ಷೆ ಬೇಡಿದವರನ್ನು ಗೋಪಾಳ ಬುಟ್ಟಿದಾಸರು, ಶಂಖದಾಸರು, ಚನ್ನದಾಸರ್, ಮಾಲದಾಸರು ಹೀಗೆ ಹಲವಾರು ಹೆಸರುಗಳಿಂದ ಕರೆಯತೊಡಗಿದರು. ಮೂಲದಲ್ಲಿ ಇವರೆಲ್ಲರೂ ಒಂದೇ ಮೂಲದಿಂದ ಬಂದ ಕವಲುಗಳಷ್ಟೆ.

ನಮ್ಮ ನಡುವಿನ ಸಾಹಿತಿ ಕಿರುತೆರೆಯ ನಟ, ಚಿತ್ರ ಸಾಹಿತಿ, ನಿರ್ದೇಶಕರು, ಆಗಿರುವ ಶ್ರೀ ಕಾಕೋಳು ರಾಮಯ್ಯನವರು ಹೇಳುವಂತೆ, ಮೂಲದಲ್ಲಿ ದಾಸರೆಲ್ಲ ಒಂದೇ, ಪ್ರಾದೇಶಿಕವಾಗಿ ಜನ ನಮ್ಮನ್ನು ತಮಗೆ ಇಷ್ಟ ಬಂದ ಹೆಸರಿನಿಂದ ಕರೆದಿದ್ದಾರೆ, ಇದಕ್ಕೆ ನಾವುಗಳು ಮಾಡುತ್ತಿದ್ದ ಹಲವು ಬಗೆಯ ವೃತ್ತಿಗಳು ಕಾರಣ ಇರಬಹುದು. ನಾವು ಕೃಷ್ಣದೇವರಾಯನ ಕಾಲದಲ್ಲಿ ಗೂಢಾಚಾರರಾಗಿ, ಕಲಾವಿದರಾಗಿ ದಂಡಿನ ಜೊತೆ ಹೋಗುತ್ತಿದ್ದ ಉಲ್ಲೇಖಗಳೂ ಉಂಟು ನೂರಾರು ವರ್ಷಗಳಿಂದ ಬೇರೆಯವರ ಶ್ರೇಯಸ್ಸಿಗಾಗಿ ದುಡಿದ ನಾವು ಮಾತ್ರ ಅತಂತ್ರ ಸ್ಥಿತಿಯಲ್ಲಿದ್ದೇವೆ ಎಂದು ನೋವು ತೋಡಿಕೊಳ್ಳುತ್ತಾರೆ.

**ಸಮುದಾಯದ ಜೀವನ ಪದ್ಧತಿಯ ಹಿನ್ನೆಲೆ**

ವೈಷ್ಣವ ಸಂಪ್ರದಾಯಸ್ಥರಾದ ಇವರನ್ನು ಜೀವನ ಪದ್ಧತಿಯ ಹಿನ್ನೆಲೆಯಿಂದ ನೋಡಿದರೂ ಬಿಕ್ಷಾವೃತ್ತಿಯೇ ಪ್ರಮುಖವಾಗಿ ಕಣ್ಣಿಗೆ ರಾಚುವಂತೆ ಕಾಣುತ್ತದೆ. ಇವರು ಊರೂರು ಅಲೆದು ಯಕ್ಷಗಾನದ ರಾಮಾಯಣ, ಮಹಾಭಾರತ, ಭಾಗವತ, ಸನ್ನಿವೇಷಗಳನ್ನು ಬಳಸಿಕೊಂಡು ಬಯಲಾಟಗಳನ್ನು ಪ್ರದರ್ಶಿಸುತ್ತಿದ್ದರು. ಜೊತೆಗೆ, ಪವಾಡ ಪುರುಷರ, ದಾಸಪರಂಪರೆಯ ಸಾಧು ಸಂತರು, ರಚಿಸಿರುವ ತತ್ವಪದಗಳನ್ನು ಕಲಿತು ಜನಸಾಮನ್ಯರಿಗೆ ಅರ್ಥವಾಗುವ ರೀತಿಯಲ್ಲಿ ಹಾಡಿ, ಸಂಸ್ಕೃತಿಯ ಪ್ರಚಾರಕರಾಗಿ ತಮ್ಮ ಜೀವನ ನಿರ್ವಹಣೆ ಮಾಡುತ್ತಿದ್ದರು, ಹಾಗೆಯೇ ಕೆಲವು ಲೌಖಿಕ ಜನಪದ ಕಾವ್ಯಗಳನ್ನು ಹಾಡುತ್ತಿದ್ದರು.

**ಸಾಮಾಜಿಕ ಮತ್ತು ಕೌಟುಂಬಿಕ ಸಂಬಂಧಗಳು**

ಒಂದು ಸಮಾಜ ಮೇಲು ನೋಟಕ್ಕೆ ಸರಳವಾಗಿ ಕಂಡರೂ ಅಂತರಂಗದಲಿ ಅದು ಸಂಕೀರ್ಣ ವ್ಯವಸ್ಥೆಯನ್ನು ಉಳ್ಳದಾಗಿರುತ್ತದೆ. ಸ್ವರಕ್ಷಣೆ, ಭದ್ರತೆ ಸುಗಮ

ಕಾರ್ಯನಿರ್ವಹಣೆ ಮುಂತಾದ ಉದ್ದೇಶಗಳಿಗಾಗಿ ಸಮಾಜದಲ್ಲಿ ಹಲವು ಘಟಕಗಳು ಇರುತ್ತವೆ. ಕುಟುಂಬ ಅದರಲ್ಲಿ ಒಂದು ಮುಖ್ಯ ಘಟಕ. ಮಾನವ ಸಮಾಜಕ್ಕೆ ಮೂಲಧಾರವಾದ ಪ್ರಾಥಮಿಕ ಘಟಕ. ಒಂದು ಕುಟುಂಬ ವ್ಯವಸ್ಥೆಯಲ್ಲಿ ತಂದೆ, ತಾಯಿ ಬಂದು ಬಳಗದವರಿರುತ್ತಾರೆ. ಸಾಮಾನ್ಯವಾಗಿ ಒಂದೇ ವಂಶದ ರಕ್ತಸಂಬಂಧಿಗಳು ಅದರ ಸದಸ್ಯರಾಗಿರುತ್ತಾರೆ. "ಕುಟುಂಬ ಸದಸ್ಯರ ಪರಸ್ಪರ ಸಂಬಂಧವೂ ಅವರು ಒಂದೇ ರಕ್ತ ಸಂಬಂಧ ಹೊಂದಿರುವ ಆಧಾರದಮೇಲೆ ನಿರ್ಧರಿತವಾಗಿರುತ್ತದೆ ಎಂದು ಡೀವಿಸ್‌ನು ತಿಳಿಸಿರುತ್ತಾನೆ". (Kingsley Devis)

ಕುಟುಂಬ ಯಾವಾಗಲೂ ಕೆಲವು ಆದರ್ಶಗಳ ಮೇಲೆ ನಿಂತಿರುತ್ತದೆ. ದಾಂಪತ್ಯ ಪ್ರೇಮ, ಸಂತಾನೋತ್ಪತ್ತಿ, ಮಾತೃ ಪ್ರೇಮ, ಪ್ರೀತಿ ವಾತ್ಸಲ್ಯ ಮಕ್ಕಳ ಪೋಷಣೆ ಮತ್ತು ಅಭಿವೃದ್ಧಿಯಲ್ಲಿ ಇವು ಕುಟುಂಬ ವ್ಯವಸ್ಥೆಯ ಮುಖ್ಯ ಲಕ್ಷಣಗಳಾಗಿರುತ್ತವೆ.

ದೊಂಬಿದಾಸ ಸಮುದಾಯವೂ ಸಹ ಈ ಕುಟುಂಬ ವ್ಯವಸ್ಥೆಗೆ ಪೂರಕವಾಗಿ ರೂಪುಗೊಂಡಿದೆ.

**ಇದುವರೆಗಿನ ಅಧ್ಯಯನಗಳು**

ಡಾ ಡಿ ಕೆ ರಾಜೇಂದ್ರ ಅವರು ದೊಂಬಿದಾಸರು ಪದಕ್ಕೆ, ಒಬ್ಬ ದೊಂಬಿದಾಸ ಗಾಯಕನು ತಿಳಿಸಿರುವಂತೆ ದಾಸರಿಗಳು ಯಕ್ಷಗಾನ ಬಯಲಾಟ ಪ್ರದರ್ಶನ ನೀಡುತ್ತಿರುವಾಗ ಜನರು ದೊಂಬಿ ಎದ್ದರು. ದೊಂಬಿಯನ್ನು ಲೆಕ್ಕಿಸದೆ ದಾಸರು ಆಟವನ್ನು ಮುಂದುವರಿಸಲು, ದೊಂಬಿಯಲ್ಲೂ ವೃತ್ತಿನಿರತರಾಗಿದ್ದು ಈ ಆಟದ ದಾಸಯ್ಯಗಳನ್ನು ದೊಂಬಿದಾಸರು ಎಂದು ಕರೆದರೆಂದು ಹೇಳಿದ್ದಾರೆ.

ರೆವರೆಂಡ್ ಎಫ್ ಕಿಟಲ್ ಅವರು ತಮ್ಮ A Kannada - English Dictionary (1894)ರಲ್ಲಿ ದೊಂಬಿದಾಸರಿ one of a company of stage player (my) ಎಂದು ಅವರ ವೃತ್ತಿಯನ್ನಾಧರಿಸಿದ ಅರ್ಥ ವಿವರಣೆ ನೀಡಿದ್ದಾರೆ.

ಹೆಚ್ ಎಲ್ ನಾಗೇಗೌಡರು ತಮ್ಮ 'ನನ್ನೂರು' ಕೃತಿಯಲ್ಲಿ ಯಕ್ಷಗಾನ ಬಯಲಾಟವನ್ನು ಕುರಿತು ಬರೆಯುತ್ತಾ ದೊಂಬಿಯಾಗಿ ಆಟ ಆಡುತ್ತಿದ್ದುದರಿಂದ ಯಕ್ಷಗಾನವನ್ನು ನನ್ನೂರಿನಲ್ಲಿ ದೊಂಬಿ ಆಟವೆಂದು ಆಟ ಆಡುವ ಜನರಿಗೆ ದೊಂಬಿದಾಸರೆಂದು ಕರೆಯುತ್ತಾರೆ, (ಪು. ೩೦೩) ಎಂದಿದ್ದಾರೆ.

ಸಂಕ್ಷಿಪ್ತ ಕನ್ನಡ ನಿಘಂಟು (ಪುಟ ೭೧೪)ವಿನಲ್ಲಿ ದೊಂಬಿದಾಸರು – ಊರೂರು ತಿರುಗುತ್ತ ಐತಿಹಾಸಿಕ, ಪೌರಾಣಿಕ ಕಥೆಗಳಿಗೆ ಸಂಬಂಧಿಸಿದ ಹಾಡುಗಳನ್ನು ಹಾಡುತ್ತಾ ರಾತ್ರಿ ಹೊತ್ತು ಬಯಲುಗಳಲ್ಲಿ ನಾಟಕ ಆಡುವ ವೃತ್ತಿಯವರು.

ದೊಂಬಿದಾಸರು ಯಕ್ಷಗಾನ ಬಯಲಾಟಗಳನ್ನು ಮಾಡುತ್ತಿದ್ದದರಿಂದಲೋ ಅಥವಾ ಗಂಗೆ–ಗೌರಿ ಜಗಳ ಎಂಬ ಸ್ತ್ರೀ ಪಾತ್ರ ಪ್ರಧಾನ ಕಥೆಯನ್ನು ಅಭಿನಯಸುತ್ತಿದ್ದರಿಂದಲೋ ಇವರನ್ನು ಹೆಣ್ಣು ವೇಷದವರು ಎಂದು ಕರೆಯುವುದು ರೂಢಿಯಲ್ಲಿದೆ(ಅರ್ಚಕ, ಬಿ ರಂಗಸ್ವಾಮಿ: ೧೯೩೩: ೮೧)ಎಂದು ಹುಟ್ಟಿದಹಳ್ಳಿ ಮತ್ತು ಹಳ್ಳಿಯ ಹಾಡು ಎಂಬ ಪುಸ್ತಕದಲ್ಲಿ ಹೇಳಲಾಗಿದೆ.

ಹೆಚ್ ನಂಜೇಗೌಡರು ಸಂಪಾದಿಸಿರುವ ಜಾನಪದ ಕೋಶದಲ್ಲಿ ದೊಂಬಿದಾಸ: ಊರೂರು ತಿರುಗುತ್ತಾ ಬಯಲಾಟ ಆಡುವ ಒಂದು ಕಲಾ ತಂಡ, ವೃತ್ತಿ ನಾಟಕದ ತಂಡದವರು ಎಂದಿದ್ದಾರೆ. ದಾಸರಾಟವನ್ನು ಮಾಡುವವರು ಪೆಣ್ಣು ದಾಸರು, ಹೆಣ್ಣು ದಾಸರು ಎಂಬುದು ದಾಸರಲ್ಲಿಯೇ ಒಂದು ಒಳ ಪಂಗಡ. ಇವರಾಡುವ ಈ ಆಟಕ್ಕೆ ಯಾವುದೇ ನಿಶ್ಚಿತ ಸಂಭಾಷಣೆ ಇಲ್ಲ ಹಾಡುಗಳಿಲ್ಲ. ಮಾತಾಡಿದ್ದೇ ಸಂಭಾಷಣೆ ಹಾಡಿದ್ದೇ ಹಾಡು. ಇವರ ಆಟಗಳಲ್ಲಿ ಶೃಂಗಾರ ಮತ್ತು ಹಾಸ್ಯ ದಾರಾಳವಾಗಿರುತ್ತಿತ್ತು. ಸೈನಿಕರ ಮನರಂಜನೆಗಾಗಿಯೇ ದಾಸರಾಟಗಳು ಜರುಗುತ್ತಿದ್ದುವು. ಇವರ ಮನರಂಜನೆಗಾಗಿಯೇ ಅನೇಕ ಕಲಾಮೇಳಗಳು ಇರುತ್ತಿದ್ದವು.

ಹೆಚ್ ಜೆ ಲಕ್ಕಪ್ಪಗೌಡರು ಸಂಪಾದಿಸಿರುವ "ಜಾನಪದ ಕೈಪಿಡಿ" (ಮುದ್ರಣ:೧೯೭೭: ೪೮೨)ರಲ್ಲಿ ದೊಂಬಿದಾಸರು: ಏಕತಾರಿ ಚಿಟಕೆತಾಳ ಮತ್ತು ದಮ್ಮಡಿಯನ್ನು ಪಕ್ಕವಾದ್ಯವಾಗಿ ಬಳಸುವ ಇವರು ಸಾಮಾನ್ಯವಾಗಿ ಬಿಳಿಪೇಟ ನಿಲುವಂಗಿ ಕಚ್ಚೆ ಪಂಚೆ ಧರಿಸುತ್ತಾರೆ... ಬಯಲು ಸೀಮೆಯ ಎಲ್ಲಾ ಪ್ರದೇಶಗಳಲ್ಲೂ ಕಂಡು ಬರುವ ಇವರು ಗೌರಮ್ಮ ವಿವಾಹ, ಗಂಗೆ–ಗೌರಿ ವಿವಾಹ, ಕೃಷ್ಣ ಕೊರವಂಜಿ... ಇತ್ಯಾದಿ ನಾಟಕಗಳನ್ನು ಹಾಡುತ್ತಾರೆ.

Encylopeadia-Asiatic-vol.I ರಲ್ಲಿ ದಾಸರಿಗಳನ್ನು ಕುರಿತು, Dasari-A Mendicant of caste in south of India, a worshipper of "Vishnu" (P.895) ಎಂದು ಹೇಳಿದ್ದಾರೆ.

ಕೆ ಎಸ್ ಸಿಂಗ್ ರವರ People of India - Karnataka ಕೃತಿಯಲ್ಲಿ ದೊಂಬಿದಾಸರ ಪದಕ್ಕೆ ಪದನಿಷ್ಪತ್ತಿ ಅರ್ಥ ಹೀಗಿದೆ. "Dombi" was prefixed to thier original name, because once while narrating Sri Vishnu Story a "Dombi" (Quarrel) broke out among them. Another version is that since, they sing melodiously like a Dumbi (Honey bee) they are called dombi dasaru (Paramashivaiah-1980).

ಹೆಚ್ ಎಲ್ ನಾಗೇಗೌಡರು ಸಂಪಾದಿಸಿರುವ ಕನ್ನಡ "ಜನಪದ ಕೋಶ"ದಲ್ಲಿ ದೊಂಬಿದಾಸ (ನಾ) ಊರೂರು ಸುತ್ತುತ್ತಾ ನಾಟಕವಾಡುವ ಅಲೆಮಾರಿ. ಏಕತಾರಿ ಹಿಡಿದು ಪೌರಾಣಿಕ ಮತ್ತು ಲೌಕಿಕ ಕಾವ್ಯಗಳನ್ನು ಹಾಡುವ ಜನಪದರ ವೃತ್ತಿಗಾಯಕ. ಮೂಲತಃ ಆಂಧ್ರದವರಾಗಿರಬೇಕು. ಎಂದು ಉಲ್ಲೇಖಿಸಿದ್ದಾರೆ.

Edgar Thurston ರವರ ಕ್ಯಾಸ್ಟ್ ಅಂಡ್ ಟ್ರೈಬ್ ಆಫ್ ಸೌತ್ ಇಂಡಿಯಾ ಕೃತಿಯಲ್ಲಿ ದಾಸರಿಗಳನ್ನು ವೈಷ್ಣವ ಮತಾವಲಂಬಿಗಳಾದ ವೈಷ್ಣವ ಬಿಕ್ಷುಕ ಸಮುದಾಯ ಎಂದಿದ್ದಾರೆ. ಮುಂದುವರಿದು They usually wander about singing rhymes to a monotonous accompainment upon a leather instrument called to-ppai (tabret) ಎಂದು ವಿವರಿಸಿದ್ದಾರೆ.

ಗೆಜೆಟ್ ಆಫ್ ಅನಂತಪುರ್ ಡಿಸ್ಟ್ರಿಕ್ಟ್‌ನಲ್ಲಿ ಡಬ್ಲ್ಯೂ ಫ್ರಾನ್ಸಿಸ್ ವಿವರಿಸುವಂತೆ, ಪ್ರಮುಖವಾಗಿ ಬಿಕ್ಷಾವೃತ್ತಿಯಿಂದ ಬದುಕುವವರು ದಾಸರಿಗಳು ಎಂದಿದ್ದಾನೆ. The beggers who are most in evidence are the dasaris.

ಹೆಚ್ ಎ ಸ್ಟೂವರ್ಟ್‌ರವರು Dasari is a Mendicant caste of Vishnava's ಎಂದಿದ್ದಾರೆ.

ದಾಸರಿ ಮೂಲ ಪುರುಷನ ಕುರಿತಂತೆ ಕೆ ಅನಂತಕೃಷ್ಣ ಅಯ್ಯರ್ ಮತ್ತು ಹೆಚ್ ವಿ ನಂಜುಂಡಯ್ಯನವರು, (ದಿ ಮೈಸೂರ್ ಟ್ರೈಬ್ ಅಂಡ್ ಕ್ಯಾಸ್ಟ್ Vol. -Iರಲ್ಲಿ) ದಾಸರಿ ಹಾಗೂ ದೊಂಬಿದಾಸರ ಮೂಲಪುರುಷನು "ಏಕಾಂಗ ಸ್ವಾಮಿ ಎಂಬ ವೈಷ್ಣವ ಗುರುವಿನ ಬಣಜಿಗ ಶಿಷ್ಯನಿಗೂ ಮತ್ತು ಕುರುಬ ಹೆಂಗಸೊಬ್ಬಳಿಗೂ ಹುಟ್ಟಿದವನೆಂದು" ತಿಳಿದು ಬರುತ್ತದೆ ಎಂದು ಉಲ್ಲೇಖಿಸಿದ್ದಾರೆ.

ಹೆಚ್ ಎ ಸ್ಟುವರ್ಟ್‌ರವರ ಮತ್ತೊಂದು ಅಭಿಪ್ರಾಯದಂತೆ, ದಾಸರು ಉತ್ತರ ಜಿಲ್ಲೆಗಳೊಂದರ ಸಿರಿವಂತ ಶೂದ್ರನ ಖ್ಯಾತ ವಂಶಜರು. ಅವರಲ್ಲಿ ಒಬ್ಬನಿಗೆ ಮಕ್ಕಳಿರುವುದಿಲ್ಲ. ತನಗೆ ಮಕ್ಕಳಾದರೆ, ಅವರಲ್ಲಿ ಒಬ್ಬರನ್ನು ದೇವರ ಸೇವೆಗೆ ಅರ್ಪಿಸುವೆನೆಂದು ಬೇಡಿಕೊಂಡ. ಅನಂತರ ತನಗೆ ಹುಟ್ಟಿದ ಹಲವು ಮಕ್ಕಳಲ್ಲಿ ಒಬ್ಬನನ್ನು ದೇವರ ಸೇವೆಗೆಂದು ದಾಸ(ಸೇವಕ) ಎಂದು ಹೆಸರಿಟ್ಟು ದೇವರ ಸೇವೆಗೆ ಒಪ್ಪಿಸಿದನು. ಅಂದಿನಿಂದ ದಾಸ ತನ್ನ ತಂದೆಯ ಆಸ್ತಿಯಲ್ಲಿ ತನ್ನ ಪಾಲನ್ನು ಕಳೆದು ಕೊಂಡನಲ್ಲದೆ, ಆತನ ಮಕ್ಕಳೂ ಆ ಹಕ್ಕಿಗೆ ಎರವಾಗಿ ಬಿಕ್ಷುಕರಾದರು. ಅವರೆ 'ದಾಸರೆಂದೆನಿಸಿದರು' ಎಂದು ಅಭಿಪ್ರಾಯ ಪಟ್ಟಿರುವರು.

Manual of Tanjore District ಪ್ರಕಾರ ಸಂಸ್ಕೃತ 'ದಾಸ' ಎಂಬ ಶಬ್ದಕ್ಕೆ ತಮಿಳ ವಿಭಕ್ತಿ ಅನ್ ಸೇರಿಸಿ 'ದಾಸನ್' ಆಗುತ್ತದೆ ಎಂದು ಹೇಳಿ, ವೈಷ್ಣವ ಬಿಕ್ಷುಕರಿಗೆ ಮಾತ್ರವೇ ಈ ಶಬ್ದ ಬಳಸಲಾಗುತ್ತೆಂದು ಹೇಳಿದೆ.

ಸಂಸ್ಕೃತ ಗ್ರಂಥಗಳಲ್ಲಿ ದಾಸರನ್ನು ದಸ್ಯುಗಳೆಂದು ಕರೆಯಲಾಗಿದೆ. ಆರ್ಯರನ್ನು ಪ್ರತಿಭಟಿಸಿದ ದ್ರಾವಿಡರೆ ದಸ್ಯುಗಳು ಎಂಬ ವಿವರಣೆ ಇದೆ. ಕ್ರೂಕ್ ಎಂಬ ವಿದ್ವಾಂಸ, 'ಇವರು ಜಿಪ್ಸಿಯಂತಹ ಒಂದು ಜನಾಂಗ, ನೃತ್ಯಗಾರರು, ಆಟಾಡುವ, ರೂಪ ಜೀವಿಗಳಾದ ಜನಾಂಗ. ಈ ಜನಾಂಗದ ಉಗಮ ಎಲ್ಲಿಯದೆಂಬುದಕ್ಕೆ ಇನ್ನೂ ನಿಶ್ಚಿತ ಅಭಿಪ್ರಾಯವಿಲ್ಲ'ವೆಂದು ಪ್ರಸ್ಥಾಪಿಸಿದ್ದಾರೆ. (ಜನಪದ ಸಾಹಿತ್ಯ ದರ್ಶನ:ಲೇ: ಬಿ ವಿ ಗುಂಜಶೆಟ್ಟಿ)

ಕನ್ನಡ ನಾಡಿನ ವೃತ್ತಿ ಗಾಯಕ ಕಥೋಪ ಜೀವಿಗಳ ಪ್ರಥಮ ವಿವರಗಳನ್ನು ಕಳೆದ ಶತಮಾನದ ಮಧ್ಯಭಾಗದಲ್ಲಿ ಪ್ರಕಟವಾದ ಗ್ರೋವರ್ ರವರ ದಕ್ಷಿಣ ಭಾರತದ ಜನಪದ ಗೀತೆಗಳು "The Folk Songs of South India" ಎಂಬ ಗ್ರಂಥದಲ್ಲಿ 'ದಾಸ' ಎನ್ನುವ ಗಾಯಕರನ್ನು ಗುರುತಿಸಿದ್ದಾರೆ. ಇವರು ಗಾಯನದ ಮೂಲಕ ಬಿಕ್ಷಾಟನೆ ಮಾಡುತ್ತಿದ್ದರು. ಹಾಡುವುದನ್ನು ಬಿಟ್ಟರೆ ಬೇರೆ ವೃತ್ತಿ ತಿಳಿದಿರಲಿಲ್ಲವೆಂದು

ಉಲ್ಲೇಖಿಸುತ್ತಾರೆ. ದಾಸರು ತಂತಿ ವಾದ್ಯವನ್ನು ಹಿಡಿದು ರಾಮಾಯಣ, ಮಹಾಭಾರತದ ಕಥೆಗಳನ್ನು ಹೇಳುತ್ತಿದ್ದದರು ಗ್ರೋವರ್ ಈ ವಾಧ್ಯವನ್ನು ವೀಣೆ ಎಂದು ಕರೆದಿದ್ದಾರೆ.

ಕಳೆದ ಶತಮಾನದ ಉತ್ತರಾರ್ಧದಲ್ಲಿ ಫ್ಲೀಟರ್ ಸಂಗ್ರಹಿಸಿದ್ದ 'Indian Antiqury' ಎಂಬ ಗ್ರಂಥದಲ್ಲಿ ದಾಸರನ್ನು ಜನಪದ ಗಾಯಕರು ಎಂದು ಗುರುತಿಸಿದ್ದಾರೆ. ಈ ದಾಸರು ಹೇಳುವ ಧಾರ್ಮಿಕ, ಐತಿಹಾಸಕ ಹಾಗೂ ಭಕ್ತಿ ಪ್ರಧಾನವಾದ ಕಥೆಗಳನ್ನು ಕೇಳಲು ಬಹುದೂರಗಳಿಂದ ಜನರು ಗುಂಪು ಗುಂಪಾಗಿ ಗಾಡಿಗಳಲ್ಲಿ ಬಂದು ಆಸಕ್ತಿಯಿಂದ ಕೇಳುತ್ತಿದ್ದರು. ಇದು ಅವರ ಜನಪ್ರಿಯತೆಗೆ ಸಾಕ್ಷಿ ಎಂದು ವಿವರಿಸಿದ್ದಾರೆ. ನರಗುಂದ ಬಂಡಾಯ, ಹಲಗಲಿಯ ಬೇಡರು ಮುಂತಾದ ಕೆಲವು ಲಾವಣಿಗಳನ್ನು ಫ್ಲೀಟರ್ "ದಾಸ"ರಿಂದ ಸಂಗ್ರಹಿರುವುದಾಗಿ ಹೇಳಿಕೊಂಡಿದ್ದಾರೆ.

ಉತ್ತರ ಕರ್ನಾಟಕದ ವೃತ್ತಿ ಗಾಯಕರ ಕಥಾ ಪ್ರಕಾರಗಳನ್ನು ಸಾಕಷ್ಟು ಕ್ರಮಬದ್ಧವಾಗಿ ಪರಿಚಯಿಸಿರುವ ಬಿ ಎ ಮಹಿಶವಾಡಿಯವರು ತಮ್ಮ ಕಿರುವತ್ತಿಗೆ "ಜಾನಪದ ಕಥಾ ಸೃಷ್ಟಿ" ಇಲ್ಲಿ ಈ ದಾಸರ ಕಥೆಗಳೇ (ಹರಿದಾಸ) ದೊಂಬಿ ದಾಸರ ಕಥೆಗಳು ಎಂಬುದನ್ನು ಮೊದಲ ಬಾರಿಗೆ ಸ್ಪಷ್ಟಪಡಿಸಿದ್ದಾರೆ.

ದೊಂಬಿದಾಸ ಶಬ್ದದಲ್ಲಿನ 'ದೊಂಬಿ' ಮತ್ತು 'ದಾಸ' ಎರಡು ಮುಖ್ಯ ಹಿನ್ನೆಲೆಗಳನ್ನು ಈ ಕಲಾವಿದರಿಗೆ ಸಂಬಂಧಿಸಿದಂತೆ ಒದಗಿಸುತ್ತದೆ. ದೊಂಬಿ ಯಾವುದೋ ಗದ್ದಲವನ್ನು ಪ್ರತಿನಿಧಿಸುವ ಪದವಾಗಿ ತೋರುತ್ತದೆ. ಇವರ ಬಯಲಾಟ ಗೊಂದಲಮಯವಾದುದು ಗದ್ದಲದಿಂದ ಕೂಡಿದ್ದು ಅದಕ್ಕಾಗಿ ಈ ಹೆಸರು ಬಂದಿತೆಂದು, ಕೆಲವು ಕಲಾವಿದರೇ ಹೇಳುತ್ತಾರೆ, ತಿರುಪತಿ ಕ್ಷೇತ್ರಕ್ಕೆ ನಡೆದು ಕೊಳ್ಳುತ್ತಿದ್ದ ಇವರು ಮೂರು ತಲೆಮಾರುಗಳ ವರೆಗೆ ಈ ಕ್ಷೇತ್ರಕ್ಕೆ ಹೋಗದೆ, ಸಲ್ಲಿಸಬೇಕಾದ ಕಾಣಿಕೆಯನ್ನು ಕೊಡದೆ ಕದ್ದು ತಿರುಗುತ್ತಿದ್ದರು. ಆದ್ದರಿಂದ ಇವರು "ದೊಂಗ" (ಕಳ್ಳ) ದಾಸರಾದರು. ತಿರುಪತಿಕ್ಷೇತ್ರಕ್ಕೆ ಇವರನ್ನು ಮತ್ತೆ ಸೇರಿಸದಂತೆ ಬಹಿಷ್ಕರಿಸಲಾಯಿತು ಎಂಬ ಸ್ವಾರಸ್ಯಕರ ಕಥೆಯೂ ಇದೆ. ದೊಂಗದಾಸ ಕ್ರಮೇಣ ದೊಂಬಿದಾಸ ಆಗಿರಬೇಕು (ಜಿಶಂಪ:೧೯೭೯:೨೬೧).

ಜೀಶಂಪರವರ ಅಭಿಪ್ರಾಯದಂತೆ ದೊಂಬಿದಾಸರು ಹೆಸರು ಸೂಚಿಸುವಂತೆ ವೈಷ್ಣವ ಸಂಪ್ರದಾಯಕ್ಕೆ ಸೇರಿದದವರು. ಆದರೆ ಅಷ್ಟು ಕಟ್ಟುನಿಟ್ಟಾಗಿ ಇವರು ವೈಷ್ಣವಧರ್ಮ ಪ್ರಸಾರಕ್ಕಾಗಿ ಮೀಸಲಾದವರಲ್ಲ. ಯಾವ ನಿರ್ಧಿಷ್ಟ ಕ್ಷೇತ್ರಕ್ಕೂ ಇವರು ಸಂಬಂಧ ಪಡುವುದಿಲ್ಲ. ಜನತೆಯ ಅಂತರ್ಯವನ್ನು ತಿಳಿದು ಅವರಿಗೆ ಪ್ರಿಯವಾದ ವಿಷಯ ಯಾವ ದೈವ ಅಥವಾ ಧರ್ಮದ ಹಿನ್ನೆಲೆಯುಳ್ಳದ್ದಾದರು ಇವರು ಹಾಡುತ್ತಾರೆ. ವೈಷ್ಣವ ಕಥೆಗಳಿಗಿಂತ ಇವರಿಗೆ ಶಿವ ಕಥೆಗಳಲ್ಲಿ ಒಲವು ಹೆಚ್ಚು ಅವುಗಳೇ ಇವರಿಗೆ ಹೆಚ್ಚು ಜನಪ್ರಿಯತೆಯನ್ನು ತಂದುಕೊಟ್ಟ ರಚನೆಗಳು ಎನ್ನುತ್ತಾರೆ(ಅವರೇ:೧೯೭೯:೨೬೨).

ಮತ್ತೊಬ್ಬ ಜಾನಪದ ವಿದ್ವಾಂಸ ಬಿ ಬಿ ಮಹಿಶವಾಡಿಯವರು ತಮ್ಮ ಕನ್ನಡ ಕಥಾಸೃಷ್ಠಿ (ಪು.೨೪)ಯಲ್ಲಿ "ದಾಸರು ಕಥೆ ಹೇಳಿ ಹೊಟ್ಟೆ ತುಂಬಿ ಕೊಳ್ಳುತ್ತ ಇಲ್ಲವೆ ಹಾಡನ್ನು ಹೇಳಿ ಬಿಕ್ಷೆ ಬೇಡುವ ಒಂದು ದಲಿತ ವರ್ಗಕ್ಕೆ ಸೇರಿದವರು. ಹರಿದಾಸರಲ್ಲ

ಇವರು "ದೊಂಬಿದಾಸರು" ಎಂದಿದ್ದಾರೆ. ಮುಂದುವರಿದು "ದಮ್ಮಡಿ ಬಾರಿಸುತ್ತ ಏಕತಾರಿ ಮಿಡಿಯುತ್ತಾ, ಅಭಿಮನ್ಯುವಿನ ಕತೆ, ರಾಮಲಕ್ಷ್ಮಣರ ಕತೆ, ಪಾಂಡವರ ಕಥೆ ಹೇಳುವುದರ ಜೊತೆಗೆ ಬಂಟರ ಕಥೆಗಳನ್ನು ಹೇಳುತ್ತಾರೆ... ಸಂಗೊಳ್ಳಿರಾಯಣ್ಣ, ಸಿಂದೂರ ಲಕ್ಷ್ಮಣ, ಕಟ್ಟಿಚೆನ್ನ, ಚಾವುಂಡರಾಯ ಮುಂತಾದ ಕನ್ನಡ ನಾಡಿನ ಸಾಮಾನ್ಯ ಜನತೆಯ ಮುಂದೆ ಅಸಮಾನ್ಯ ಸಾಹಸಮಾಡಿ ಮೆರೆದ ಬಂಟರ ಹಾಡುಗಳನ್ನು ಹೇಳುತ್ತಾರೆ. ಕಿತ್ತೂರು ಚೆನ್ನಮ್ಮ, ಮುಂಡರಗಿ ಭೀಮರಾಯ, ನರಗುಂದ ಬಂಡಾಯ, ಹಡಗಲಿ ಜಿಡಗಬಾಯಿ ಕಥೆಗಳನ್ನು ಸುಂದರವಾಗಿ ವೀರರಸ ಉಕ್ಕುವಂತೆ, ಮೈ ರೋಮಾಂಚನಗೊಳ್ಳುವಂತೆ, ಹಾಡಿ ತೋರಿಸುತ್ತಾರೆ.

ಬಿ ಜಿ ಶ್ರೀನಿವಾಸಯ್ಯನವರು ಹೇಳುವಂತೆ, ಆಂಧ್ರ ಪ್ರದೇಶದ ಕಡಪ ಜಿಲ್ಲೆಯ ಮುದೆನೂರಿನಿಂದ ಕರ್ನಾಟಕಕ್ಕೆ ವಲಸೆ ಬಂದರು. ಇವರ ಪೂರ್ವಿಕರು ಮುದೆನೂರು ಸಂಸ್ಥಾನದಲ್ಲಿ ಅಮಾತ್ಯ(ಮಂತ್ರಿ)ರಾಗಿದ್ದರು, ಹಾಗೂ ಸಂಸ್ಥಾನದಲ್ಲಿ ಸ್ವತಃ ಸೈನ್ಯಾಧಿ ಪತಿಯೂ ಆಗಿದ್ದರೆಂದು, ಒಂದು ಯುದ್ಧ ಸಂದರ್ಭಲ್ಲಿ ಯುದ್ಧ ಮಾಡುವಾಗ ಮೃತರಾದರು. ಆ ಸಂಸ್ಥಾನದ ಪತನದ ನಂತರ ಮುದೆನೂರಿನಲ್ಲಿ ವಾಸವಾಗಿದ್ದ ಇವರು ಕರ್ನಾಟಕಕ್ಕೆ ವಲಸೆ ಬಂದರಂತೆ. ಮೊದಲು ಈ ಸಮುದಾಯವನ್ನು ದಾಸರೆಂದೇ ಕರೆಯುತ್ತಿದ್ದರಂತೆ.

ಒಮ್ಮೆ ಇವರಿಗೆ ಮೈಸೂರು ಅರಮನೆ ಆವರಣದಲ್ಲಿ ನಾಟಕ ಮಾಡುವ (ಬಯಲಾಟ) ಅವಕಾಶ ಸಿಕ್ಕಿತು. ಸಹಜವಾಗಿ ಇವರು ಕಲಾವಿರಾಗಿದ್ದರಿಂದ ಹೆಂಡ, ಬಂಗಿಸೊಪ್ಪು ಸೇವನೆ ಅಭ್ಯಾಸವಿತ್ತು. ನಾಟಕ ನಡೆಯುತ್ತಿದ್ದಂತೆಯೇ ಪರದೆ ಹಿಂದೆ ಇವರ ಗಲಾಟೆ ಶುರುವಾಯಿತು. ಆಗ ಮಹರಾಜರು ಇದೇನು ದೊಂಬಿ ಗಲಾಟೆ ಎಂದು ವಿಚಾರಸಿದರು. ಅವರಲ್ಲಿ ಒಬ್ಬರು 'ದಾಸರು' ಅವರವರೊಳಗೆ ಗಲಾಟೆ ಮಾಡಿಕೊಳ್ಳುತ್ತಿದ್ದಾರೆ. ಎಂದು ತಿಳಿಸಿದರು ಆಗ ಮಹಾರಾಜರು ಇವರು 'ದಾಸರು' ಅದೊಂದು 'ದೊಂಬಿ' ಎಂದರೆಂತೆ ಅಲ್ಲಿಂದ ಈ ಸಮುದಾಯವನ್ನು ಜನರು 'ದೊಂಬಿದಾಸ'ರೆಂದು ಕರೆದರಂತೆ.

"ಇನ್ನೊಬ್ಬ ಕಲಾವಿದ ಕೃಷ್ಣಪ್ಪದಾಸ್ ವಯಸ್ಸು ೭೬, ಇವರು ಸ್ವತಃ ಕಲಾವಿದರು ಇವರು ಹೇಳುವಂತೆ ಒಮ್ಮೆ ಈ ದಾಸರು ಒಂದು ಭಕ್ತಿ ಪ್ರಧಾನವಾದ ನಾಟಕ ಮಾಡುತ್ತಿದ್ದರು. ಆ ಸಂದರ್ಭದಲ್ಲಿ ಒಂದು ಗಲಬೆ ಶುರುವಾಯಿತು ಈ ಗಲಭೆಯನ್ನು ಲೆಕ್ಕಿಸದೆ "ದಾಸರು" ನೀತಿ ಪ್ರಧಾನವಾದ ಕಥೆಯನ್ನು ಅಂಜದೆ ಮುಂದುವರಿಸಿದ್ದರು. ಇವರ ನೀತಿ ಕತೆ ಕೇಳಿದ ಜನ ಶಾಂತರಾದರು ದೊಂಬಿಯನ್ನು ಲೆಕ್ಕಿಸದೆ ಆಟ ಆಡಿದುದಕ್ಕೆ ಇವರನ್ನು ದೊಂಬಿದಾಸರೆಂದು ಕರೆದರೆಂದು ಹೇಳುತ್ತಾರೆ".

ಈ ಎಲ್ಲಾ ಅಭಿಪ್ರಾಯಗಳ ಹಿನ್ನೆಲೆಯನ್ನು ಗಮನಿಸಿದಾಗ ದಾಸರಿ ಎನ್ನುವುದು ಯಾವುದೇ ಒಂದು ವಿಶಿಷ್ಟ ಜಾತಿಯನ್ನು ಸೂಚಿಸದೆ, ಕೆ ಅನಂತಕೃಷ್ಣಅಯ್ಯರ್ ಹೇಳುವಂತೆ, 'ಬ್ರಾಹ್ಮಣೇತರ ಯಾವುದೇ ಜಾತಿಯವರು ದಾಸರಿಗಳಾಗಬಹುದು.

ಬಣಜಿಗ, ಕುರುಬ, ಒಕ್ಕಲಿಗ ಸಾಲೆ, ತಿಗಳ, ಗೊಲ್ಲ, ಬೇಡ, ಬೆಸ್ತ, ಒಡ್ಡ, ಹೊಲೆಯ, ಮಾದಿಗ ಮೊದಲಾದ ಜಾತಿಗಳಿಂದ ಬಂದವರೂ ದಾಸರಿಗಳಾದಂತಿದೆ.

**ಭೌಗೋಳಿಕ ಪ್ರಸಾರ ಮತ್ತು ಜನಸಂಖ್ಯೆ**

ದಾಸರಿ ಮೂಲದ ಈ ಸಮುದಾಯವನ್ನು ಆಂಧ್ರ ಪ್ರದೇಶ, ತಮಿಳುನಾಡು, ಮಹಾರಾಷ್ಟ್ರ ರಾಜ್ಯಗಳಲ್ಲಿ ಬೇರೆ ಬೇರೆ ಹೆಸರುಗಳಿಂದ ಕರೆಯಲಾಗುತ್ತದೆ. ೧೮೮೧ರ ಜನಗಣತಿಯಲ್ಲಿ ಮುಂಬೈ ಪ್ರಾಂತ್ಯದಲ್ಲಿ ಕೇವಲ ಒಬ್ಬ (೧) ದೊಂಬಿದಾಸರು ದಾಖಲಾಗಿರುವುದು ಕಂಡುಬರುತ್ತದೆ. ಕನ್ನಡ ಪುಸ್ತಕ ಪ್ರಾಧಿಕಾರದ ೨೦೦೭ರ ಸಮೀಕ್ಷೆಯ ಪ್ರಕಾರ ಕರ್ನಾಟಕ ರಾಜ್ಯದಲ್ಲಿ ದೊಂಬಿದಾಸರ ಹೆಸರಿನಲ್ಲಿ ಕಾಣಸಿಗುವವರ ನೆಲೆಗಳು ಹೀಗಿವೆ.

**ಕೋಷ್ಟಕ : ೨.೧ ದೊಂಬಿದಾಸರ ಜಿಲ್ಲಾವಾರು ಕೌಟುಂಬಿಕ ಮತ್ತು ಲಿಂಗವಾರು ಜನಸಂಖ್ಯೆ (೨೦೦೭)**

| ಜಿಲ್ಲೆ | ಕುಟುಂಬ | ಗಂಡು | ಹೆಣ್ಣು | ಒಟ್ಟು |
|---|---|---|---|---|
| ಬೆಂಗಳೂರು | ೧೭೫ | ೩೫೨ | ೩೨೬ | ೬೭೮ |
| ಬೆಂಗಳೂರು ಗ್ರಾಮೀಣ | ೨೫ | ೭೧ | ೮೫ | ೧೫೬ |
| ಚಿಕ್ಕಮಗಳೂರು | ೧೦೫ | ೨೮೪ | ೨೭೬ | ೫೬೦ |
| ಚಿತ್ರದುರ್ಗ | ೬೩ | ೧೩೮ | ೧೧೦ | ೨೪೮ |
| ದಾವಣಗೆರೆ | ೨೯೦ | ೭೧೨ | ೬೪೧ | ೧೩೫೩ |
| ಹಾಸನ | ೧೭೯ | ೪೦೬ | ೩೬೨ | ೭೬೮ |
| ಕೋಲಾರ | ೩೬ | ೯೨ | ೯೧ | ೧೮೩ |
| ಮಂಡ್ಯ | ೧೪೪ | ೩೨೦ | ೨೮೬ | ೬೦೬ |
| ಮೈಸೂರು | ೧೪೩ | ೩೨೧ | ೨೫೩ | ೫೭೪ |
| ರಾಮನಗರ | ೬೮ | ೧೫೬ | ೧೭೫ | ೩೩೧ |
| ಶಿವಮೊಗ್ಗ | ೨೫೪ | ೫೨೧ | ೪೮೬ | ೧೦೦೭ |
| ತುಮಕೂರು | ೩೭೨ | ೭೭೦ | ೬೮೯ | ೧೪೮೯ |
| ಒಟ್ಟು | ೧೮೫೨ | ೪೧೪೩ | ೩೭೮೦ | ೭೯೨೩ |

ಕರ್ನಾಟಕದ ದಕ್ಷಿಣ ಭಾಗದಲ್ಲಿ ದೊಂಬಿದಾಸರು ಕೇಂದ್ರಿಕರಿಸಿದ್ದಾರೆ. ಕ್ರಮವಾಗಿ ತುಮಕೂರು, ದಾವಣಗೆರೆ, ಶಿವಮೊಗ್ಗ, ಹಾಸನ, ಬೆಂಗಳೂರು, ಮಂಡ್ಯ, ಮೈಸೂರು, ಚಿಕ್ಕಮಗಳೂರು, ರಾಮನಗರ, ಚಿತ್ರದುರ್ಗ, ಕೋಲಾರ ಮತ್ತು ಬೆಂಗಳೂರು ಗ್ರಾಮೀಣ ಜಿಲ್ಲೆಗಳಲ್ಲಿ ಇಳಿಕೆ ಕ್ರಮದಲ್ಲಿ ಕಾಣಸಿಗುವರು (ಕೋಷ್ಟಕ:೨.೧). ಇವರು ಅಲೆಮಾರಿಗಳಾಗಿರುವುದರಿಂದ ಹಲವು ಕುಟುಂಬಗಳು ಸಮೀಕ್ಷೆಯಿಂದ ಹೊರಗುಳಿದಿರುವ ಸಾಧ್ಯತೆಗಳಿವೆ. ಆದರೆ, ಅಂತಹವರ ಸಂಖ್ಯೆ ಗೌಣವೆಂದು ಹೇಳಬಹುದು.


ಕರ್ನಾಟಕ
ದೊಂಬಿದಾಸ ಸಮುದಾಯದ ನೆಲೆಗಳು
ಬೀದರ
ಗುಲಬರ್ಗಾ
ಬಿಜಾಪುರ
ಬಾಗಲಕೋಟೆ
ರಾಯಚೂರು
ಬೆಳಗಾವಿ
ಕೊಪ್ಪಳ
ಧಾರವಾಡ
ಗದಗ
ಬಳ್ಳಾರಿ
ಉತ್ತರ ಕನ್ನಡ
ಹಾವೇರಿ
ದಾವಣಗೆರೆ
ಶಿವಮೊಗ್ಗ
ಚಿತ್ರದುರ್ಗ
ಕೋಲಾರ
ಉಡುಪಿ
ಚಿಕ್ಕಮಗಳೂರು
ತುಮಕೂರು
ಚಿಕ್ಕಬಳ್ಳಾಪುರ
ಬೆಂಗಳೂರು ನಗರ
ಹಾಸನ
ದಕ್ಷಿಣ ಕನ್ನಡ
ಮಂಡ್ಯ
ರಾಮನಗರ
ಕೊಡಗು
ಮೈಸೂರು
ಚಾಮರಾಜನಗರ
ಕುಟುಂಬಗಳು
೫೦ರ ಒಳಗೆ
೫೧ – ೧೦೦
೧೦೧ – ೨೦೦
೨೦೧ – ೩೦೦
೩೦೧ – ೪೦೦
೪೦೧ – ೫೦೦
೫೦೧ ರ ಮೇಲ್ಪಟ್ಟು

ಕೋಷ್ಟಕ :೨.೨ ದೊಂಬಿದಾಸರ ಗ್ರಾಮೀಣ ಮತ್ತು ನಗರ ಜನಸಂಖ್ಯೆ (೨೦೦೭)

| ಕ್ರ.ಸಂ. | ವಿವರ | ಕುಟುಂಬ | ಗಂಡು | ಹೆಣ್ಣು | ಒಟ್ಟು |
|---|---|---|---|---|---|
| ೧. | ಗ್ರಾಮೀಣ | ೧೬೮೮ | ೩೭೯೧ | ೩೪೬೦ | ೭೨೫೧ |
| ೨. | ನಗರ | ೧೬೪ | ೩೫೨ | ೩೨೦ | ೬೭೨ |
| | ಒಟ್ಟು | ೧೮೫೨ | ೪೧೪೩ | ೩೭೮೦ | ೭೯೨೩ |

ಕರ್ನಾಟಕ ರಾಜ್ಯದ ಒಟ್ಟು ಜನಸಂಖ್ಯೆಯಲ್ಲಿ ಶೇಕಡ ೯೧.೫೨ ರಷ್ಟು ಜನ ಗ್ರಾಮೀಣ ಪ್ರದೇಶದಲ್ಲಿ ವಾಸವಾಗಿರುವುದು ಈ ಸಮೀಕ್ಷೆಯಿಂದ ವೇದ್ಯವಾಗುತ್ತದೆ(ವೃತ್ತ ಚಿತ್ರ :೨.೧).

ವೃತ್ತಚಿತ್ರ :೨.೧ ದೊಂಬಿದಾಸರ ಗ್ರಾಮೀಣ ಮತ್ತು ನಗರ ಜನಸಂಖ್ಯೆ (೨೦೦೭)




ಕೋಷ್ಟಕ: ೨.೩

ದೊಂಬಿದಾಸರ ವಯೋಗುಂಪುವಾರು ಲಿಂಗವಾರು ಜನಸಂಖ್ಯೆ (೨೦೦೭)

| ವಯಸ್ಸು | ಗಂಡು | ಹೆಣ್ಣು | ಒಟ್ಟು |
|---|---|---|---|
| ೦-೪ | ೨೬೧ | ೨೨೫ | ೪೮೬ |
| ೫-೧೭ | ೧೦೩೨ | ೯೦೭ | ೧೯೩೯ |
| ೧೮-೪೦ | ೧೮೯೭ | ೧೮೭೩ | ೩೭೭೦ |
| ೪೧-೬೦ | ೭೦೨ | ೫೪೩ | ೧೨೪೫ |
| ೬೧ ಕ್ಕಿಂತ ಮೇಲ್ಪಟ್ಟು | ೨೫೧ | ೨೩೨ | ೪೮೩ |
| ಒಟ್ಟು | ೪೧೪೩ | ೩೭೮೦ | ೭೯೨೩ |

ಕರ್ನಾಟಕ ರಾಜ್ಯದ ಒಟ್ಟು ಜನಸಂಖ್ಯೆಯಲ್ಲಿ ೦-೪ ವಯೋಗುಂಪಿನವರು ಶೇಕಡ ೬.೧೩ರಷ್ಟು, ೫-೧೭ ವಯೋಗುಂಪಿನವರು ೨೪.೪೭ ರಷ್ಟು, ೧೮-೪೦

ವಯೋಗುಂಪಿನವರು ೪೭.೫೮ ರಷ್ಟು, ೪೧–೬೦ ವಯೋಗುಂಪಿನವರು ೧೪.೭೧ ರಷ್ಟು ಮತ್ತು ೬೦ ರ ಮೇಲ್ಪಟ್ಟವರು ೬.೦೯ ರಷ್ಟಿರುವರು. ಅಂದರೆ ಇವರ ಒಟ್ಟು ಜನಸಂಖ್ಯೆಯಲ್ಲಿ ಶೇಕಡ ೩೬.೬೯ರಷ್ಟು ಆಶ್ರಿತ ಗುಂಪಿನವರಿದ್ದಾರೆ. ಇವರಲ್ಲಿ ಶೇಕಡ ೬೨.೨೯ರಷ್ಟು ಜನ ಕಾಯಕಾರ್ಹ ಗುಂಪಿರುವುದು.

## ಲಿಂಗ ಅನುಪಾತ

ಪ್ರತಿ ೧೦೦೦ ಪುರುಷರಿಗೆ ಮಹಿಳೆಯರ ಸಂಖ್ಯೆ ಎಷ್ಟೆಂಬುವುದನ್ನು ಗುರುತಿಸುವುದೇ ಲಿಂಗ ಅನುಪಾತವಾಗಿರುತ್ತದೆ. ೨೦೦೧ ರ ಜನಗಣತಿಯ ಪ್ರಕಾರ ಕ್ರಮವಾಗಿ ಲಿಂಗ ಅನುಪಾತವು ಭಾರತದಲ್ಲಿ ೯೩೩, ಕರ್ನಾಟಕದಲ್ಲಿ ೯೬೫ ಇದ್ದರೆ ಕರ್ನಾಟಕದ ದೊಂಬಿದಾಸ ಸಮುದಾಯದ ಸರಾಸರಿ ಲಿಂಗ ಅನುಪಾತ ೯೧೨ ಇರುವುದು ಚಿಂತನೀಯವಾಗಿದೆ (ಕೋಷ್ಟಕ:೨.೪).

**ಕೋಷ್ಟಕ : ೨.೪ ದೊಂಬಿದಾಸರ ಜಿಲ್ಲಾವಾರು ಲಿಂಗ ಅನುಪಾತ (೨೦೦೭)**

| ಸಂ | ಜಿಲ್ಲೆ | ಗಂಡು | ಹೆಣ್ಣು | ಲಿಂಗಾನುಪಾತ |
|---|---|---|---|---|
| ೧ | ಬೆಂಗಳೂರು | ೩೫೨ | ೩೨೬ | ೯೨೬ |
| ೨ | ಬೆಂಗಳೂರು ಗ್ರಾಮೀಣ | ೭೧ | ೮೫ | ೧೧೯೭ |
| ೩ | ಚಿಕ್ಕಮಗಳೂರು | ೨೮೪ | ೨೭೬ | ೯೭೧ |
| ೪ | ಚಿತ್ರದುರ್ಗ | ೧೩೮ | ೧೧೦ | ೭೯೭ |
| ೫ | ದಾವಣಗೆರೆ | ೭೧೨ | ೬೪೧ | ೯೦೦ |
| ೬ | ಹಾಸನ | ೪೦೬ | ೩೬೨ | ೮೯೧ |
| ೭ | ಕೋಲಾರ | ೯೨ | ೯೧ | ೯೮೯ |
| ೮ | ಮಂಡ್ಯ | ೩೨೦ | ೨೮೬ | ೮೯೩ |
| ೯ | ಮೈಸೂರು | ೩೨೧ | ೨೫೩ | ೭೮೮ |
| ೧೦ | ರಾಮನಗರ | ೧೫೬ | ೧೭೫ | ೧೧೨೧ |
| ೧೧ | ಶಿವಮೊಗ್ಗ | ೫೨೧ | ೪೮೬ | ೯೩೨ |
| ೧೨ | ತುಮಕೂರು | ೭೭೦ | ೬೮೯ | ೮೯೪ |
| | ಒಟ್ಟು | ೪೧೪೩ | ೩೭೮೦ | ೯೧೨ |

ದೊಂಬಿದಾಸರ ಲಿಂಗ ಅನುಪಾತವನ್ನು ಸರಿದೂಗಿಸಲು ವಿಶೇಷ ಯೋಜನೆಗಳನ್ನು ರೂಪಿಸಿ ಅನುಷ್ಠಾನಗೊಳಿಸುವುದು ಅಗತ್ಯವಾಗಿದೆ.

೩

# ಸ್ಥಳಾವರಣ ಮತ್ತು ಬ್ರಹ್ಮಾಂಡದ ಪರಿಕಲ್ಪನೆ

## ಬ್ರಹ್ಮಾಂಡ ಸೃಷಿ

ಒಂದು ಮೂಲದ ಪ್ರಕಾರ ಧರೆಗೆ ದೊಡ್ಡವರೆಂಬ ಗುರುಗಳು ಕತ್ತಲ ರಾಜ್ಯವನ್ನು ಪ್ರವೇಶ ಮಾಡಿ ತಮ್ಮ ಶಕ್ತಿಯಿಂದ ಆದಿಶಕ್ತಿಯನ್ನು ಸೃಷ್ಟಿಸುತ್ತಾರೆ. ಅಂತೆಯೇ ಜಾಂಬುಲಿಂಗಯ್ಯನೆಂಬ ಗಂಡು ಜೀವವನ್ನು ಸೃಷ್ಟಿಸುತ್ತಾನೆ. ಆಗ ಆದಿಶಕ್ತಿಯು ಜಾಂಬುಲಿಂಗಯ್ಯನನ್ನು ಮೋಹಿಸಿ ಮದುವೆಯಾಗಲು ಕೇಳುತ್ತಾಳೆ. ಆದರೆ ಜಾಂಬು ಲಿಂಗಯ್ಯ ನಾವಿಬ್ಬರೂ ಒಂದೇ ತಂದೆಯ ಮಕ್ಕಳಾದ್ದರಿಂದ ನಾವು ದಂಪತಿಗಳಾಗುವುದು ತಪ್ಪು ಎಂದು ನಿರಾಕರಿಸುತ್ತಾನೆ. ಆದರೆ ಆದಿಶಕ್ತಿ ನವಿಲಾಗಿ ರೂಪಾಂತರಗೊಂಡು ಜಾಂಬುಲಿಂಗಯ್ಯನ ಕಣ್ಣೀರನ್ನು ಸ್ವಾಹ ಮಾಡಿ ಗರ್ಭಧರಿಸಿ ಮೊಟ್ಟೆಗಳನ್ನಿಡುತ್ತಾಳೆ. ಇದನ್ನು ಸಹಿಸದ ಜಾಂಬುಲಿಂಗಯ್ಯನು ಅವಳಿಗೆ ಶಾಪ ನೀಡಿದಾಗ ಆದಿಶಕ್ತಿ ಬೂದಿ ಯಾಗುತ್ತಾಳೆ. ಧರೆಗೆ ದೊಡ್ಡವರು ಇದನ್ನು ಅರಿತು ನವಿಲಿನ ಮೊಟ್ಟೆಗಳಿಂದ ಬ್ರಹ್ಮ, ವಿಷ್ಣು, ಈಶ್ವರ ಎಂಬ ತ್ರಿಮೂರ್ತಿಗಳನ್ನು ಸೃಷ್ಟಿಸುತ್ತಾರೆ. ಆದಿಶಕ್ತಿಯ ಬೂದಿ ರಾಶಿಯನ್ನು ಮೂರು ಭಾಗ ಮಾಡಿ ಸರಸ್ವತಿ, ಲಕ್ಷ್ಮಿ, ಪಾರ್ವತಿಯರನ್ನಾಗಿ ಸೃಷ್ಟಿಸುತ್ತಾರೆ. ಇವರ ಸಮ್ಮಿಲನದಿಂದ ಇಡೀ ಜಗತ್ತು ಸೃಷ್ಟಿಯಾಯಿತು ಎಂದು ತಿಳಿದುಬರುತ್ತದೆ.

ಮಡಬಕೊಪ್ಪಲು ಕಲಾವಿದರಾದ ವೆಂಕಟರಾಮುರವರು ಹೇಳಿದ ಪ್ರಕಾರ ಆದಿಶಕ್ತಿ ಮಯಂಬೀಜಂ ಬೀಜಶಕ್ತಿ ಮಯಂ ಸೃಷ್ಟಿ, ವಿಷ್ಣುಶಕ್ತಿ ಮಯಂ ಜಗತ್ತು. ಅಂದರೆ ತ್ರಿಮೂರ್ತಿಗಳ ಸೃಷ್ಟಿಯಾದ ನಂತರ ಆದಿಶಕ್ತಿಯು ಮದು–ಕೈಟವ ಎಂಬ ರಾಕ್ಷಸರನ್ನು ಸೃಷ್ಟಿಸುತ್ತಾಳೆ. ಇವರು ದುಷ್ಟರಾಗಿದ್ದು ಬ್ರಹ್ಮನ ಪೀಡಿಸುತ್ತಾರೆ. ಆಗ ಬ್ರಹ್ಮನು ಮೂರ್ಛೆ ಯಾಗುತ್ತಾನೆ. ಆಗ ಈ ರಾಕ್ಷಸರು ಇವನು ಸತ್ತನೆಂದು ತಿಳಿದು ಮುಂದೆ ಹೋಗುತ್ತಾರೆ. ಅಲ್ಲಿಂದ ತಪ್ಪಿಸಿಕೊಂಡು ಬಂದು ಬ್ರಹ್ಮನು ದೇವಿಯನ್ನು ಕುರಿತು ತಪಸ್ಸನ್ನು ಮಾಡುತ್ತಾನೆ. ದೇವಿ ಪ್ರತ್ಯಕ್ಷಳಾದಾಗ ನೀನು ಸೃಷ್ಟಿಸಿದ ರಾಕ್ಷಸರು ನಮಗೆ ಕಾಟ ನೀಡುತ್ತಿದ್ದಾರೆ ಎಂದು ಹೇಳಿದಾಗ ಇಬ್ಬರೂ ಕ್ಷೀರಸಾಗರಕ್ಕೆ ಹೋಗಿ ವಿಷ್ಣುವನ್ನು ಪ್ರಾರ್ಥಿಸುತ್ತಾರೆ. ಅವರನ್ನು ಕೊಲ್ಲಲು ದೇವಿ ಕೇಳಿಕೊಳ್ಳುತ್ತಾಳೆ. ಆಗ ವಿಷ್ಣುವು ಅವರು ನಿನ್ನ ವರದ ಬಲದಿಂದ ಜನಿಸಿದರಿಂದ ನಿನ್ನ ಅರ್ಧಶಕ್ತಿಯನ್ನು ನನಗೆ ನೀಡಿದರೆ ಅವರನ್ನು ಕೊಲ್ಲುವುದಾಗಿ ಹೇಳಿದಾಗ ದೇವಿ ತನ್ನ ಅರ್ಧ ಶಕ್ತಿ ನೀಡುತ್ತಾಳೆ. ವಿಷ್ಣು ಅವರನ್ನು

ಕೊಲ್ಲುತ್ತಾನೆ. ಆ ರಾಕ್ಷಸರ ಚರ್ಮವೇ ಭೂಮಂಡಲವಾಗಿ, ಅವರ ದೇಹದ ಮೂಳೆಗಳೇ ಗುಡ್ಡ, ಗೋಪುರಗಳಾಗುತ್ತವೆ. ಅವರ ದೇಹದಿಂದ ಹರಿದ ರಕ್ತವೇ ನದಿ ಸರೋವರಗಳಾಗಿ ಹರಿಯುತ್ತವೆ. ಅವರಲ್ಲಿದ್ದ ಅಹಂಕಾರವೇ ಕ್ರಿಮಿ ಕೀಟಗಳಾಗುತ್ತವೆ.

ಈ ತ್ರಿಮೂರ್ತಿಗಳೂ ಸೇರಿ ಅಂದರೆ, ವಿಷ್ಣುವಿನ ಕಾಲಂಶ, ಈಶ್ವರ ಅರ್ಧಅಂಶ, ಬ್ರಹ್ಮನ ಕಾಲಂಶವನ್ನು ಸೇರಿಸಿ ಈ ಬಹ್ಮಾಂಡವನ್ನು ಸೃಷ್ಟಿಸುತ್ತಾರೆ. ಈ ಬ್ರಹ್ಮಾಂಡಕ್ಕೆ ದೇವೇಂದ್ರನನ್ನು ಒಡೆಯನಾಗಿ ನೇಮಿಸುತ್ತಾರೆ.

ಇನ್ನೊಂದು ಮೂಲದ ಪ್ರಕಾರ ಭೂಮಿ ಆಕಾಶ, ಗಾಳಿ, ಬೆಳಕುಗಳಿಲ್ಲದ ಓಂಕಾರ ದೊಂದಿಗೆ ಒಂದು ಶಂಖು ಹುಟ್ಟಿತು. ಆ ಶಂಖುವಿನಿಂದಲೇ ತಾತ ಆದಿ ಜಾಂಬು ಲಿಂಗಯ್ಯ ಹುಟ್ಟಿ ಬಂದರು. ಇವರು ತಾವರೆ ಎಲೆಯ ಮೇಲೆ ಕುಳಿತು ತಪಸ್ಸನ್ನು ಆಚರಿಸಿದ ಆರು ಗಳಿಗೆಯಲ್ಲಿಯೇ ಅದೇ ಶಂಖದಿಂದ ಆದಿಶಕ್ತಿಯು ಹುಟ್ಟಿ ಬಂದಳು. ಆಕೆ ತಾತನ ಬಳಿ ಬಂದು ನನ್ನ ಕಾಮವನ್ನು ತೀರಿಸು ಎಂದು ಕೇಳಿದಳು. ಆಗ ತಾತ ಈ ರೂಪದಲ್ಲಿ ಸಾಧ್ಯವಿಲ್ಲ ಇಬ್ಬರೂ ನವಿಲುಗಳಾಗಿ ರೂಪ ಬದಲಾಯಿಸಿಕೊಳ್ಳೋಣ ಎಂದು ರೂಪ ಬದಲಾಯಿಸಿ ಕೂಡಿದರು.

ಕೂಡಿದ ಪರಿಣಾಮದಿಂದ ಹೆಣ್ಣು ನವಿಲು ನಾಲ್ಕು ಮೊಟ್ಟೆಗಳನ್ನು ಇಟ್ಟಿತು. ಎಷ್ಟು ಕಾವು ಕೊಟ್ಟರೂ ಒಡೆದು ಮರಿಯಾಗಲಿಲ್ಲ. ಆಗ ತಾತ ಒಂದು ಮೊಟ್ಟೆಯನ್ನು ಒಡೆದು ಅದರ ಮೇಲಿನ ಭಾಗವನ್ನು ಆಕಾಶ ಮಾಡಿದ, ಕೆಳಗಿನ ಭಾಗವನ್ನು ಭೂಮಿ ಮಾಡಿದ. ಇನ್ನೊಂದು ಮೊಟ್ಟೆಯನ್ನು ಒಡೆದು ಒಂದು ಭಾಗವನ್ನು ಸೂರ್ಯ ಮಾಡಿದ, ಇನ್ನೊಂದು ಭಾಗವನ್ನು ಚಂದ್ರ ಮಾಡಿದ ಮೂರನೆಯ ಮೊಟ್ಟೆಯಿಂದ ನಕ್ಷತ್ರಲೋಕ ಸೃಷ್ಟಿಸಿದ ನಾಲ್ಕನೆಯ ಮೊಟ್ಟೆಯಿಂದ ಬ್ರಹ್ಮ, ವಿಷ್ಣು, ಈಶ್ವರ ಈ ಮೂರ್ತಿಗಳು ಹುಟ್ಟಿದರು. ಇವರು ಬೆಳೆದು ದೊಡ್ಡವರಾದ ಮೇಲೆ ಇವರನ್ನು ಕಂಡು ಆದಿಶಕ್ತಿಗೆ ಮತ್ತೇ ಕಾಮಾತುರವಾಯಿತು. ಮದುವೆಯಾಗಲು ಒತ್ತಾಯಿಸಿದಳು. ವಿಷ್ಣು, ಬ್ರಹ್ಮ, ಒಪ್ಪಲಿಲ್ಲ. ಶಿವ ತಾತ ಹೇಳಿಕೊಟ್ಟ ಉಪಾಯದಂತೆ ಹಣೆಯಲ್ಲಿನ ಉರಿಗಣ್ಣು, ಮತ್ತು ಕೈಯಲ್ಲಿನ ಉರಿಅಸ್ತ್ರ ಕೊಡುವುದಾದರೆ ಮದುವೆಯಾಗುತ್ತೇನೆ ಅಂದ. ಆದಿಶಕ್ತಿ ಆನಂದದಿಂದ ಕೊಟ್ಟಳು. ಶಿವ ಉರಿಗಣ್ಣನ್ನು ನೆತ್ತಿಯಲ್ಲಿಟ್ಟು ಕೊಂಡು ಅವಳನ್ನು ದಿಟ್ಟಿಸಿದ ಅವಳು ಉರಿದು ಬೂದಿಯಾದಳು. ಆ ಬೂದಿ ಗುಡೆಯಾಕಾರದ ಮೂರು ಭಾಗವಾಗಿ ಮಾಡಿ ಮೂರು ಜನ ಸುಂದರಿಯರಾದ ಲಕ್ಷ್ಮಿ, ಸರಸ್ವತಿ ಮತ್ತು ಪಾರ್ವತಿಯರು ಜನಿಸಿದರು. ಇವರನ್ನು ತ್ರೀಮೂರ್ತಿಗಳು ಮದುವೆಯಾಗಿ ಜಗತ್ತಿನ ಸೃಷ್ಟಿಗೆ ಕಾರಣರಾದರು. ನಂತರ ವಿಷ್ಣು ಶಕ್ತಿಯಿಂದ ಅಂಡದಿಂದ ೨೧ ಲಕ್ಷ ಜೀವರಾಶಿ ಯನ್ನು, ಪಿಂಡದಿಂದ ೨೧ ಲಕ್ಷ ಜೀವರಾಶಿಯನ್ನು, ರೂಚ್‌ಬೀಜದಿಂದ ೨೧ ಲಕ್ಷ ಜೀವರಾಶಿಯೂ ಮತ್ತು ಜೆರಾಯುಜ ಬೀಜದಿಂದ ೨೧ ಲಕ್ಷ ಜೀವರಾಶಿ ಹೀಗೆ ಒಟ್ಟು ೮೪ ಲಕ್ಷ ಜೀವರಾಶಿ ಸೃಷ್ಟಿಯಾಯಿತೆಂದು ಪ್ರತೀತಿ.

**ವಸತಿ :** ದೊಂಬಿದಾಸರು ಮೂಲತಃ ಅಲೆಮಾರಿಗಳಾಗಿದ್ದು ನೆಲೆ ಇಲ್ಲದ ಜನ.

ಎತ್ತಕಡೆ ಬೆಳೆ–ಮಳೆ ಚೆನ್ನಾಗಿರುತ್ತೋ ಅತ್ತ ಕಡೆ ತಮ್ಮ ಪ್ರಯಾಣ ಬೆಳೆಸುತ್ತಿದ್ದರು. ಇಂತಹದೇ ಮನೆ, ಊರು, ಕೇರಿ ಅಂತ ಇರುತ್ತಿರಲಿಲ್ಲ. ಪಾಳು ಗುಡಿ, ಮಂಟಪ, ಕೆರೆಯ ಬಯಲಿನ ದೊಡ್ಡ ಮರಗಳು, ಪರಿಚಯವಿದ್ದ ರೈತರ ಮನೆಯ ಪಡಸಾಲೆ, ಜಗಲಿ ಇವು ವಾಸಸ್ಥಾನಗಳಾಗಿದ್ದವು. ಒಂದು ಕಡೆ ನೆಲೆ ನಿಲ್ಲುವ ಜಾಯಮಾನ ಇವರದಲ್ಲ. ನಿರಂತರ ಸಂಚರಿಸುತ್ತಾ ತಮ್ಮ ಸಾಂಸ್ಕೃತಿಕ ಜ್ಞಾನವನ್ನು ಹಾಡು–ನಾಟಕಗಳ ಮೂಲಕ ಗ್ರಾಮೀಣ ಜನತೆಗೆ ತಲುಪಿಸುವುದರ ಮೂಲಕ ತಮ್ಮ ತುತ್ತಿನ ಚೀಲ ತುಂಬಿಸಿಕೊಳ್ಳುತ್ತಿದ್ದರು. ಆಕಾಶ ಕವಿಚಿಕೊಂಡು ಭೂಮಿ ತಾಯನ್ನು ತಬ್ಬಿಕೊಂಡು ಬದುಕಿದವರು. ಎಂದೂ ಮನೆ, ಮಠ, ಆಸ್ತಿ ಎಂಬ ವ್ಯಾಮೋಹಕ್ಕೆ ಒಳಗಾದವರಲ್ಲ. ಎಲ್ಲಿಯೂ ಸ್ಥಾವರವಾಗದ ಜೀವನ ಕ್ರಮ ಇವರದಾಗಿತ್ತು.

ನಾಗರೀಕತೆ ಬೆಳೆದಂತೆ ದೊಂಬಿದಾಸರ ಸಮುದಾಯ ಅಲ್ಲಲ್ಲಿ ನೆಲೆನಿಲ್ಲಲ್ಲು ಪ್ರಾರಂಭಿಸಿತು. ಊರಹೊರಗಿನ ಪಾಳು ಭೂಮಿ ಅಥವಾ ಅವಕಾಶ ಸಿಕ್ಕಕಡೆ ಸರ್ಕಾರಿ ಜಮೀನಿನಲ್ಲಿ ಹುಲ್ಲಿನ ಜೋಪಡಿಗಳನ್ನು ಕಟ್ಟಿಕೊಂಡು ಜೀವಿಸುತ್ತಿದ್ದಾರೆ. ಒಂದು ಕಡೆ ನೆಲೆನಿಲ್ಲಲ್ಲುಪ್ರಾರಂಭಿಸಿದ ಮೇಲೆ ತೆಂಗಿನಗರಿ, ಹುಲ್ಲಿನ ಚಾಪೆ, ಭತ್ತದ ಹುಲ್ಲು, ಬಿದಿರಿನ ಗಳಗಳನ್ನು ಉಪಯೋಗಿಸಿ ಮನೆಗಳು ನಿರ್ಮಿಸಿಕೊಳ್ಳತೊಡಗಿದರು. ಕಾಡಿನಲ್ಲಿ ಸಿಗುವ ಬರಲಿನ ಜಾತಿಯ ಸಸ್ಯಗಳನ್ನು ತಂದು ನೆರಕೆ ಕಟ್ಟುತ್ತಿದ್ದರು. ಆ ನೆರಕೆಯ ಎರಡೂ ಬದಿಗೆ ಮಣ್ಣನ್ನು ಕಲಸಿ ಮೆತ್ತುತ್ತಿದ್ದರು. ಇದು ಗೋಡೆಯಾಗುತ್ತಿತ್ತು. ಬಾಗಿಲಿಗೆ ತೆಂಗಿನ ಗರಿಗಳನ್ನೂ ಕೈಯಿಂದ ಹೆಣೆದು ನಾಲ್ಕೈದು ಎಲೆಗಳನ್ನು ಹಾಕಿ ಎರಡೂ ಕಡೆ ಬಿದಿರಿನ ದಬ್ಬೆಗಳನ್ನು ಬಿಗಿದು ಬಾಗಿಲುಗಳನ್ನು ಮಾಡುತ್ತಿದ್ದರು. ನೆಲವನ್ನು ಸಮತಟ್ಟು ಮಾಡಿ ಸಗಣಿ ಮತ್ತು ಗಂಜಲದಿಂದ ಸಾರಿಸುತ್ತಿದ್ದರು. ಇವರು ವಾಸಿಸುವ ಗ್ರಾಮಗಳಿಗೆ ದಾಸರ ಹಟ್ಟಿಗಳು, ದಾಸರ ಓಣಿಗಳು, ದಾಸರ ಪಾಳ್ಯಗಳು, ಹೆಣ್ಣು ವೇಷದವರ ಗುಡ್ಲು ಮುಂತಾಗಿ ಕರೆಯುತ್ತಾರೆ.

ಇವರ ವಸತಿ ನಿರ್ಮಾಣದಲ್ಲಿ ಪ್ರಾದೇಶಿಕ ಭಿನ್ನತೆಯನ್ನು ಕಾಣಬಹುದು. ಈಗಲೂ ರಾಜ್ಯದ ಕೆಲವು ಭಾಗಗಳಲ್ಲಿ ಹೊರಗೆ, ಡೇರೆಗಳನ್ನು ಹಾಕಿಕೊಂಡು ತೀರಾ ನಿಕೃಷ್ಟವಾಗಿ ಬದುಕುತ್ತಿದ್ದಾರೆ. ಮಾಹಿತಿ ಸಂಗ್ರಹಣೆಗಾಗಿ ಕ್ಷೇತ್ರ ಕಾರ್ಯ ನಡೆಸಿದ ಸಂದರ್ಭಗಳಲ್ಲಿ ಈ ಮಾಹಿತಿಗಳು ಲಭ್ಯವಾಗಿವೆ. ಶಿವಮೊಗ್ಗ ಜಿಲ್ಲೆಯ ಹೊಳೆ ಹೊನ್ನೂರು, ಆನವೇರಿ, ಮೈಸೂರು ಜಿಲ್ಲೆಯ ಏಕಲವ್ಯ ನಗರ, ಮತ್ತು ರಾಜ್ಯದ ಹಲವು ಭಾಗದಲ್ಲಿ ಈ ಸಮುದಾಯ ಈಗಲೂ ಟೆಂಟು ಮತ್ತು ಗುಡಿಸಲುಗಳಲ್ಲಿ ಜೀವನ ನಡೆಸುತ್ತಿದೆ. ಇತ್ತೀಚೆಗೆ ಕೆಲವು ಕಡೆ ಸರ್ಕಾರ ಇವರ ವಾಸಕ್ಕಾಗಿ ಮನೆಗಳನ್ನು ಕಟ್ಟಿಸಿಕೊಟ್ಟಿದೆ. ಆಶ್ರಯ ಮನೆಗಳು ಇವರ ವಾಸಕ್ಕೆ ಉಪಯೋಗವಾಗುತ್ತಿವೆ.

**ಸಾಮಾಜಿಕ ಸ್ಥರವಿನ್ಯಾಸದ ಹಿನ್ನೆಲೆಯಲ್ಲಿ ವಾಸದ ಮನೆಗಳು**

ಅಲೆಮಾರಿಗಳಾಗಿದ್ದ ದೊಂಬಿದಾಸರು ಅಲ್ಲಲ್ಲಿ ನೆಲೆನಿಲ್ಲಲ್ಲು ಪ್ರಾರಂಬಿಸಿದಂತೆ ಇತರೆ ಜನಸಮುದಾಯದ ಜೊತೆ ವಾಸಿಸಲು ಪ್ರಾರಂಭಿಸಿದರು. ಮೂಲಭೂತವಾಗಿ

ಕಲಾವಿದರಾದ ಇವರು ಹಳ್ಳಿಗಾಡಿನ ಜನರ ಪ್ರೀತಿಗಳಿಸಿದ್ದರ ಪರಿಣಾಮವಾಗಿ ಇತರೆ ಸಮುದಾಯದ ನಡುವೆ ಅಲ್ಲಲ್ಲಿ ನೆಲೆ ನಿಂತಿರುವುದುನ್ನು ಕಾಣಬಹುದು.

ಸಾಮಾನ್ಯವಾಗಿ ಈ ಸಮುದಾಯದ ಜನರು ವಾಸಿಸುವ ಮನೆಗಳಿಗೆ ಕಾಂಪೌಂಡ್ ಇರುತ್ತಿರಲಿಲ್ಲ. ಬಾಗಿಲುಗಳು ಉತ್ತರ ಮತ್ತು ಪೂರ್ವ ದಿಕ್ಕಿನಲ್ಲಿ ಇರುತ್ತಿದ್ದವು. ನೀರಿಗಾಗಿ ಕೆರೆ, ತೊರೆ, ನೆಲಬಾವಿಗಳನ್ನು ಆಶ್ರಯಿಸುತ್ತಿದ್ದರು. ಇತ್ತೀಚೆಗೆ ಕೊಳವೆ ಬಾವಿಗಳನ್ನು ಉಪಯೋಗಿಸುತ್ತಾರೆ.

## ಕ್ರಿಯಾವಿಧಿಯ ಸ್ಥಳಾವರಣ

ಸಮುದಾಯ ತಾವು ವಾಸಿಸಲು ನಿರ್ಮಿಸಿಕೊಂಡ ಮನೆಗಳನ್ನು ಪ್ರಮುಖವಾಗಿ ನಡುಮನೆ (ಅಜಾರ) ಅಡಿಗೆ ಕೋಣೆ, ಸಾಕುಪ್ರಾಣಿಗಳಿಗಾಗಿ ಕೊಟ್ಟಿಗೆ, ಅದರ ಪಕ್ಕದಲ್ಲಿ ಸ್ನಾನದ ಮನೆ ನಿರ್ಮಿಸಿಕೊಳ್ಳುತ್ತಿದ್ದರು. ಈ ಮನೆಗಳನ್ನು ಯೋಜನಾಬದ್ಧವಾಗಿ ನಿರ್ಮಿಸಿಕೊಂಡಿರುತ್ತಿರಲಿಲ್ಲ. ಮನೆ ಪ್ರವೇಶಿಸಲು ಬಾಗಿಲು ಇರುತ್ತಿತ್ತು. ಬಾಗಿಲಿನ ತಳಭಾಗವನ್ನು ಹೊಸ್ತಿಲು ಅಥವಾ ಗಡಪ ಎನ್ನುತ್ತಾರೆ. ಇದು ಮನೆಯ ಪವಿತ್ರವಾದ ಸ್ಥಾನ ಪ್ರತಿದಿನ ಇದನ್ನು ತೊಳೆದು ರಂಗೋಲಿ ಇಟ್ಟು ಅರಿಶಿನ ಕುಂಕುಮ ಹಚ್ಚಿ ಪೂಜೆ ಮಾಡಿ ನಮಸ್ಕರಿಸುತ್ತಾರೆ. ಹೊಸ್ತಿಲಿನ ಮಧ್ಯೆ ಹಳೆಯ ನಾಣ್ಯಕ್ಕೆ ಮೊಳೆ ಹೊಡೆದು ಬಂದಿಸುತ್ತಾರೆ, ಹಾಗೂ ಇದರ ಜೊತೆ ಕುದುರೆ ಲಾಳವನ್ನು ಮೊಳೆ ಹೊಡೆದು ಬಿಗಿದಿರುತ್ತಾರೆ. ಹೊಸ್ತಿಲಿನ ಮೇಲೆ ಕೂರುವುದು, ಕಾಲಿನಿಂದ ತುಳಿದು ಮೇಲೆ ನಿಲ್ಲುವುದು ನಿಷಿದ್ಧ.

ಹೊಸ್ತಿಲು ದಾಟಿದ ನಂತರ ಒಳಗೆ ನಡುಮನೆ, ಮೂಲೆಯಲ್ಲಿ ಅಡುಗೆ ಕೋಣೆ ಒಂದು ಭಾಗದಲ್ಲಿ ಸಾಕು ಪ್ರಾಣಿಗಳಿಗೆ ಕೊಟ್ಟಿಗೆ ಇರುತ್ತದೆ. ನಡುಮನೆ ಮತ್ತು ಅಡುಗೆ ಕೋಣೆ ನಡುವೆ ಒಂದು ಸಾಧಾರಣವಾದ ೩-೪ ಅಡಿ ಎತ್ತರ ಗೋಡೆ ಹಾಕಿ ಗೋಡೆಯ ಮೇಲೆ ಚಿಮಣಿ ದೀಪ ಇಟ್ಟು ಅದರ ಬೆಳಕು ನಡುಮನೆ ಮತ್ತು ಕೋಣೆ ಎರಡೂ ಕಡೆ ಪಸರಿಸವಂತೆ ಮಾಡಿಕೊಳ್ಳುತ್ತಾರೆ. ಒಂದು ಮೂಲೆಯಲ್ಲಿ ಸ್ನಾನಕ್ಕಾಗಿ ಸುತ್ತ ಚಿಕ್ಕ ಗೋಡೆ ಹಾಕಿ ಮರೆಮಾಡಿಕೊಂಡಿತ್ತಾರೆ.

ನಡುಮನೆ ಶುಭ ಅಶುಭ ಎಲ್ಲಾ ಸಂದರ್ಭಗಳಲ್ಲೂ ಹೆಚ್ಚು ಬಳಕೆಯಾಗುವ ಸ್ಥಳ. ಮನೆ ಸದಸ್ಯರು, ನೆಂಟರಿಷ್ಟರು, ಅಥವಾ ಹೊರಗಿನವರು ಬಂದು ಕೂರುವುದು ಈ ಸ್ಥಳದಲ್ಲೇ. ಇವರು ಪೂಜಿಸುವ ದೇವರ ಪಟಗಳನ್ನು ಈ ನಡುಮನೆಯ ಗೋಡೆಗೆ ಮೊಳೆ ಮತ್ತು ಮರದ ಪಟ್ಟಿ ಹೊಡೆದು ನೇತುಹಾಕಿರುತ್ತಾರೆ. ಹಬ್ಬ ಹರಿದಿನಗಳಲ್ಲಿ ಪೂಜೆ ಕೋಣೆ, ಸಾವು, ಮದುವೆಗಳಲ್ಲಿ ಎಡೆಹಾಕುವ, ಹರಿವೇಣೆ ಪೂಜೆ ಮಾಡುವ, ಸದಸ್ಯರು ಮಲಗುವ, ಊಟ ಮಾಡುವ ಹೀಗೆ ಸಕಲೆಂಟು ಕ್ರಿಯಾವಿಧಿಗಳನ್ನು ನೆರವೇರಿಸುವ ಪ್ರಮುಖ ಸ್ಥಳ.

# ೪

# ಬಂಧುತ್ವ ಮತ್ತು ವಿವಾಹ

ಬಂಧುತ್ವವು ವ್ಯಕ್ತಿ ಮತ್ತು ಕುಟುಂಬಗಳು ಒಟ್ಟಿಗೆ ಬಾಳುವೆ ನಡೆಸಲು ಅನುಕೂಲ ಮಾಡಿಕೊಡುವಂತಹ ಒಂದು ವ್ಯವಸ್ಥೆಯನ್ನು ಕಲ್ಪಿಸುತ್ತದೆ. ಬಂದುತ್ವವು ಕುಟುಂಬದ ಹಾಗೆ ಸಾಮಾಜಿಕ ರಚನೆಯ ಮೂಲಭೂತ ಮತ್ತು ಪ್ರಾಚೀನ ತಳಹದಿಯಲ್ಲಿ ಒಂದಾಗಿದೆ. ತಲೆಮಾರುಗಳ ಅಂತರ ಮತ್ತು ಭೌಗೋಳಿಕ ಅಂತರಗಳು ಬಂಧುತ್ವದ ಮೇಲೆ ನಿರ್ಣಾಯಕ ಪಾತ್ರ ವಹಿಸುತ್ತವೆ. ವೈವಾಹಿಕ ಸಂದರ್ಭದಲ್ಲಿ ಬೆಡಗು, ಬಳಿ ಬಗೆಗಿನ ತಿಳುವಳಿಕೆ ಕೂಡ ಮುಖ್ಯವಾದದ್ದು. ದೊಂಬಿದಾಸ ಸಮುದಾಯ ಈ ಬಂಧುತ್ವದ ಆಧಾರದ ಮೇಲೆಯೇ ರೂಪುಗೊಂಡಿದೆ. ಒಂದೇ ಬೆಡಗು ಅಥವಾ ಬಳಿ ಒಳಗೆ ವಿವಾಹಸಂಬಂಧಗಳು ನಡೆಯುವುದಿಲ್ಲ.

**ಕುಟುಂಬ ಗಾತ್ರ :** ಸಾಮಾನ್ಯವಾಗಿ ದೊಂಬಿದಾಸ ಸಮುದಾಯದಲ್ಲಿ ೧೦-೧೫ ಜನ ಇರುತ್ತಿದ್ದರು. ಗಂಡ-ಹೆಂಡತಿ, ಅಣ್ಣ-ತಮ್ಮ, ಅಜ್ಜಿ-ಅಜ್ಜ ಮತ್ತು ಬಂದುಗಳು ಸೇರಿರುತ್ತಿದ್ದರು. ಕುಟುಂಬ ದೊಡ್ಡದಿದ್ದರೂ ಅವರವರ ಹೊಟ್ಟೆಯನ್ನು ಅವರವರೇ ಹೊರಿದುಕೊಳ್ಳುತ್ತಿದ್ದುದು ವಿಶೇಷ. ಈ ಸಮುದಾಯ ಬಯಲಾಟದ ಕಲಾವಿದರಾದ್ದರಿಂದ ಒಂದು ಕುಟುಂಬವೇ ಒಂದು ತಂಡವಾಗಿ ರೂಪುಗೊಂಡಿದ್ದು ಹೆಚ್ಚು ಸದಸ್ಯರ ಅಗತ್ಯ ಕೂಡ ಇರುತ್ತಿತ್ತು. ಈ ಕಾರಣದಿಂದಾಗಿ ಹೆಚ್ಚು ಜನರು ಕುಟುಂಬದಲ್ಲಿ ಬದುಕುತ್ತಿದ್ದುದು ಸಹಜವೇ. ಈ ಸಮುದಾಯದಲ್ಲಿ ಕುಳಿತು ತಿನ್ನುವ ಅವಕಾಶವಿರಲಿಲ್ಲ. ಜೋಳಿಗೆ ಹೆಗಲಗೇರಿಸಿ ಹೊಟ್ಟೆ ತುಂಬಿಸಿಕೊಳ್ಳುವುದು ಪ್ರತಿದಿನದ ಕಾಯಕವಾಗಿರುತ್ತಿತ್ತು. ಕುಟುಂಬ ಚಿಕ್ಕದಿರಲಿ ದೊಡ್ಡದಿರಲಿ ವ್ಯತ್ಯಾಸವೇನೂ ಇರುತ್ತಿರಲಿಲ್ಲ. ಅವರವರ ದುಡಿಮೆ ಅವರದೇ ಆಗಿರುತ್ತಿತ್ತು. ಕನ್ನಡ ಪುಸ್ತಕ ಪ್ರಾಧಿಕಾರದ ೨೦೦೭ರ ಸಮೀಕ್ಷೆಯ ಪ್ರಕಾರ ಕರ್ನಾಟಕ ರಾಜ್ಯದಲ್ಲಿ ದೊಂಬಿದಾಸರ ೧೮೫೨ ಕುಟುಂಬಗಳ ಸರಾಸರಿ ಗಾತ್ರ ೪.೨೭ ಇರುವುದು.

**ಕುಟುಂಬದ ವಿಧಗಳು :** ಕುಟುಂಬ ವ್ಯವಸ್ಥೆಯನ್ನು ಪ್ರಮುಖವಾಗಿ ಎರಡು ವಿಧಗಳಾಗಿ ವರ್ಗೀಕರಿಸಬಹುದು. ೧. ಅವಿಭಕ್ತ ಕುಟುಂಬ ೨. ವಿಭಕ್ತ ಕುಟುಂಬ. ದೊಂಬಿದಾಸ ಸಮುದಾಯ ಹಲವು ಕಾರಣದಿಂದಾಗಿ ಅವಿಭಕ್ತ ಕುಟುಂಬ ವ್ಯವಸ್ಥೆಯನ್ನು ಅನುಸರಿಸುತ್ತಿತ್ತು. ಬಯಲಾಟದ ಕಲಾವಿದರಾಗಿದ್ದರಿಂದ ಬಯಲಾಟಗಳನ್ನು ಪ್ರದರ್ಶಿಸಲು

೧೦-೧೫ ಜನರ ಒಂದು ಸಮೂಹ ಬೇಕಾಗಿರುತ್ತಿತ್ತು. ಈ ಕಾರಣದಿಂದಾಗಿ ಎಲ್ಲರೂ ಒಟ್ಟಿಗೆ ವಾಸಿಸುತ್ತಿದ್ದರು.

ಅವಿಭಕ್ತ ಕುಟುಂಬದಲ್ಲಿ ಯಜಮಾನ, ಹೆಂಡತಿ, ಮತ್ತು ಮಕ್ಕಳು, ಮೊಮ್ಮಕ್ಕಳು, ಸಹೋದರರು, ಅವರ ಮಡದಿಯರು ಮಕ್ಕಳು ಇರುತ್ತಿದ್ದರು. ದೊಂಬಿದಾಸ ಸಮುದಾಯದಲ್ಲಿಯೂ ಕೂಡ ಯಜಮಾನನೇ ಕುಟುಂಬದ ಮುಖ್ಯಸ್ಥನಾಗಿರುತ್ತಿದ್ದ. ಇವನ ನಂತರದ ಪೂರ್ಣಜವಾಬ್ದಾರಿಯನ್ನು ಹಿರಿಯಮಗ ವಹಿಸಿಕೊಳ್ಳುತ್ತಿದ್ದ. ಸ್ತ್ರೀಯರಿಗೆ ಆಸ್ತಿಯ ಮೇಲೆ ಅಧಿಕಾರವಿರುತ್ತಿರಲಿಲ್ಲ, ಈ ಸಮುದಾಯದ ಕುಟುಂಬಗಳಿಗೆ ಅಲ್ಪ ಸ್ವಲ್ಪ ಆಸ್ತಿಯೇನಾದರೂ ಇದ್ದರೆ ಅದು ಸಹಭಾಗಿಗಳು ಅಥವಾ ದಾಯಾದಿಗಳಿಗೆ ಮಾತ್ರ ಹಕ್ಕುಳ್ಳದ್ದಾಗಿತ್ತು. ನಾಟಕದಲ್ಲಿ ಹತ್ತುಹಲವು ಪಾತ್ರಗಳ ನಿರ್ವಹಣೆಗೆ ವಾದ್ಯ ಪರಿಕರಗಳನ್ನು ನುಡಿಸಲು ಮಾನವ ಸಂಪತ್ತು ಅಗತ್ಯವಾಗಿತ್ತು. ಕಂಪನಿ ನಾಟಕಗಳು, ಸಿನಿಮಾ, ರೇಡಿಯೋ ತರದ ವಿಧ್ಯುನ್ಮಾನ ಮಾಧ್ಯಮಗಳು ಜಾರಿಗೆ ಬಂದಂತೆ ಇವರ ಬಯಲಾಟ ಗಾಯನಗಳನ್ನು ಕೇಳುವವರಿಲ್ಲದೆ ನಿರುದ್ಯೋಗ ಸಮಸ್ಯೆ ಕಾಡತೊಡಗಿತು. ಈ ಹಂತದಲ್ಲಿ ಸಮುದಾಯ ಜೀವನೋಪಯಾಕ್ಕಾಗಿ ಬೇರೆ ಬೇರೆ ಕಸುಬುಗಳನ್ನು ಮಾಡಬೇಕಾದ್ದು ಅನಿವಾರ್ಯವಾಗುತ್ತಬಂದಂತೆ ಅವಿಭಕ್ತ ಕುಟುಂಬ ವ್ಯವಸ್ಥೆ ಛಿದ್ರ ವಾಗುತ್ತಾ ಬಂದಿತು. ಅನಿವಾರ್ಯವಾಗಿ ಚಿಕ್ಕ ಕುಟುಂಬಗಳು ರೂಪು ಗೊಳ್ಳುತ್ತಾ ಬಂದು ಸಣ್ಣ ಪುಟ್ಟ ಕಸುಬುಗಳನ್ನು ಹುಡುಕುತ್ತಾ ಚಲಿಸತೊಡಗಿದಂತೆ ಅವಿಭಕ್ತ ಕುಟುಂಬ ವ್ಯವಸ್ಥೆಗೆ ದಕ್ಕೆ ಉಂಟಾಗಿ, ಕುಟುಂಬಗಳು ಚದುರಿ ಹೋಗಿ ವಿಭಕ್ತ ಕುಟುಂಬಗಳು ರಚನೆಯಾದುವು.

**ಕುಟುಂಬದಲ್ಲಿ ಸ್ತ್ರೀಯರ ಪಾತ್ರ :** ದೊಂಬಿದಾಸರದು ಪಿತೃ ಪ್ರಧಾನ ಕುಟುಂಬ. ಆ ಕುಟುಂಬದ ಸ್ತ್ರೀಗೆ, ಮಕ್ಕಳ, ಗಂಡ, ಅತ್ತೆ ಮಾವ ಮತ್ತು ಮೈದುನರ ಯೋಗಕ್ಷೇಮ ಊಟೋಪಚಾರಗಳಂಥ ಕಾರ್ಯಗಳ ನಿರ್ವಹಣೆ ಪ್ರಮುಖವಾಗಿರುತ್ತಿತ್ತು. ಅಲ್ಲದೆ ಸ್ತ್ರೀ ಕೂಡ ಗಂಡಸಿಗೆ ಸರಿಸಮನಾಗಿ ದುಡಿಯುವುದು ಅನಿವಾರ್ಯವಾಗಿ ಕುಟುಂಬದ ನಿರ್ವಹಣೆಯಲ್ಲಿ ಪ್ರಮುಖ ಪಾತ್ರ ವಹಿಸುತ್ತಿದ್ದಳು. ಈ ಕಾರಣಕ್ಕಾಗಿ ಕುಟುಂಬದಲ್ಲಿ ಸ್ತ್ರೀಯರಿಗೆ ಗೌರವ ಇತ್ತು.

**ವಿವಾಹದ ನಂತರದ ವಾಸ :** ಸಾಮಾನ್ಯವಾಗಿ ಇವರು ವಾಸಿಸುತ್ತಿದ್ದುದು ಪಾಳು ಗುಡಿಗಳಲ್ಲಿ, ಶಾಲೆ ಜಗಲಿಗಳಲ್ಲಿ, ಟೆಂಟುಗಳಲ್ಲಿ ಕೆಲವೊಮ್ಮೆ ವಿಶಾಲವಾದ ಕೆರೆಯಂಗಳದ ದೊಡ್ಡ ಮರಗಳ ಕೆಳಗೆ ಹಾಗಾಗಿ ನವದಂಪತಿಗಳು ತಮ್ಮ ದಾಂಪತ್ಯ ಜೀವನ ನಿರ್ವಹಿಸುವುದು ಕಷ್ಟವಾಗುತ್ತಿತ್ತು. ನೆಲೆನಿಂತನಂತರ ಇವರ ವಿವಾಹ ನಂತರದ ವಾಸಗಳು ಸುಗುಮವಾಗ ತೊಡಗಿದವು ಆದರೂ ಇನ್ನೂ ನೆಲೆನಿಲ್ಲದೆ ಇರುವವರ ಪರಿಸ್ಥಿತಿಯಂತೂ ಶೋಚನೀಯವಾಗಿಯೇ ಇದೆ.

**ಬದಲಾಗುತ್ತಿರುವ ಕುಟುಂಬದ ಕಾರ್ಯಗಳ ಸ್ವರೂಪ**

ತಮ್ಮ ಸಾಂಪ್ರದಾಯಕ ವೃತ್ತಿ ಬದುಕಿನ ನೆಲೆಗಳು ಕಳಚಿದಂತೆಲ್ಲ ಈ ಸಮುದಾಯದ

ಜೀವನ ಕ್ರಮವೇ ಬದಲಾಗುತ್ತಾ ಬಂದಂತೆ ಅವಿಭಕ್ತ ಕುಟುಂಬ ವಿಭಕ್ತ ಕುಟುಂಬ ಗಳಾದವು.

ಈ ಸಮುದಾಯದ ಸಾಂಪ್ರದಾಯಿಕ ಕಸುಬು ನೇಪಥ್ಯಕ್ಕೆ ಸರಿದಂತೆ ಜೀವನ ನಿರ್ವಹಣೆಗಾಗಿ ಒಬ್ಬೊಬ್ಬರು ತಮಗೆ ತೋಚಿದ ಉದ್ಯೋಗಗಳನ್ನು ಅರಸುತ್ತ ನಗರ ಪ್ರದೇಶಕ್ಕೆ ವಲಸೆ ಹೋಗಿ ಕೊಳಚೆ ಪ್ರದೇಶಗಳಲ್ಲಿ ನೆಲೆನಿಂತು ಸಣ್ಣಪುಟ್ಟ ವ್ಯಾಪಾರ ಮಾಡತೊಡಗಿದರು. ಟೇಪು, ತಲೆಪಿನ್ನು ಕೊಟ್ಟು ತಲೆಕೂದಲನ್ನು ಸಂಗ್ರಹಿಸಿ ಮಾರಾಟ ಮಾಡಿದರೆ ಗಂಡಸರು ಬೀಗರಿಪೇರಿ, ಹಳೆ ಛತ್ರಿ ರಿಪೇರಿ ಮಾಡಿ ಜೀವನ ನಿರ್ವಹಿಸುತ್ತಾ ಸಣ್ಣ ಸಣ್ಣ ಕುಟುಂಬಗಳಾಗಿ ರೂಪಾಂತರಗೊಂಡವು.

**ಕುಟುಂಬ ಬಂಧುತ್ವ :** ಪ್ರಾಥಮಿಕ ರಕ್ತ ಸಂಬಂಧವುಳ್ಳ ಬಳಗದಲ್ಲಿ ತಂದೆ ಮತ್ತು ಮಕ್ಕಳು ಕಂಡುಬಂದರೆ, ವಿವಾಹದ ಅನಂತರ ಗಂಡ ಮತ್ತು ಹೆಂಡತಿ ಇವರ ಜೊತೆ ಅಜ್ಜ ಅಜ್ಜಿ ಹಾಗೂ ಕುಟುಂಬದ ಇತರ ಸದಸ್ಯರನ್ನೊಳಗೊಂಡಂತೆ ಕೌಟುಂಬಿಕ ಬಂಧುತ್ವ ರೂಪುಗೊಂಡಿದೆ.

**ಸಮುದಾಯಿಕ ಬಂಧುತ್ವ :** ಸಂಬಂಧಗಳು ಮುಂದೆ ದೂರದೂರ ಸಾಗುತ್ತಾ ಹೋದಂತೆ ಅಪ್ಪನ ತಮ್ಮ ಚಿಕ್ಕಪ್ಪನಾಗುತ್ತಾನೆ. ಅಮ್ಮನ ತಂಗಿ ಚಿಕ್ಕಮ್ಮಳಾಗುತ್ತಾಳೆ. ಹೆಂಡತಿಯ ಸೋದರ ಭಾವನಾಗುತ್ತಾನೆ. ಚಿಕ್ಕಪ್ಪನ ಮಗ ಸೋದರನಾಗುತ್ತಾನೆ. ಚಿಕ್ಕಪ್ಪನ ಮಗಳು ತಂಗಿಯಾತ್ತಾಳೆ. ಮಗನ ಹೆಂಡತಿ ಸೊಸೆಯಾಗುತ್ತಾಳೆ. ಮಗನ ಮಕ್ಕಳು ಮೊಮ್ಮಕ್ಕಳಾಗುತ್ತಾರೆ ಹೀಗೆ ಸಾಮುದಾಯಿಕ ಬಂಧುತ್ವ ಬೆಳೆಯುತ್ತಾ ಹೋಗುತ್ತದೆ.

**ಮಾತೃ ವಂಶೀಯ ಬಂಧುತ್ವ :** ತಾಯಿಯ ಮುಖಾಂತರ ವಂಶ ನಿರ್ಧಾರವಾದರೆ ಅಂತಹ ಬಂಧುತ್ವವನ್ನು ಮಾತೃವಂಶೀಯ ಬಂಧುತ್ವ ಎಂದು ಕರೆಯುತ್ತೇವೆ. ಆದರೆ ದೊಂಬಿದಾಸರಲ್ಲಿ ಪಿತೃವಂಶೀಯ ಬಂಧುತ್ವ ಮಾತ್ರ ಇದೆ.

**ಪಿತೃವಂಶೀಯ ಬಂಧುತ್ವ :** ನಿರ್ಧಾರವಾಗುವುದು ತಂದೆಯ ಕಡೆಯಿಂದ. ತಂದೆಯ ವಂಶವೇ ಪ್ರಧಾನವಾಗಿದ್ದು ತಂದೆ ಯಾವ ಬೆಡಗಿಗೆ ಸೇರಿರುತ್ತಾನೋ, ಅವನ ವಂಶವಸ್ಥರನ್ನೂ ಆ ಬೆಡಗಿನಿಂದಲೇ ಗುರುತಿಸುತ್ತಾರೆ.

**ನಿರ್ಭಂದಿಸುವ ಸಂಬಂಧ :** ಪ್ರತಿ ಸಮುದಾಯ ಬಂಧುತ್ವದಲ್ಲಿ ಕೆಲವು ನಿರ್ಭಂದಿತ ರೂಢಿಗಳನ್ನು ಇಟ್ಟುಕೊಂಡಿರುತ್ತದೆ. ಅದರಂತೆ ಈ ಸಮುದಾಯದಲ್ಲಿಯೂ ಅಣ್ಣ ತಂಗಿಯರ ಲೈಂಗಿಕ ಸಂಬಂಧವನ್ನು ನಿರ್ಭಂದಿಸಿದೆ. ಒಂದೇ ಬೆಡಗಿಗೆ ಸೇರಿದವರ ನಡುವೆಯೂ ವಿವಾಹಸಂಬಂಧಗಳನ್ನು ನಿರ್ಬಂಧಿಸಿದೆ.

ಆಕಸ್ಮಿಕವಾಗಿ ಈ ರೀತಿಯ ಸಂಬಂಧಗಳೇನಾದರೂ ನಡೆದರೆ ಅಂತಹ ಕುಟುಂಬವನ್ನು ಕುಲದಿಂದಲೇ ಬಹಿಷ್ಕರಿಸುವಂತಹ ಕಠಿಣಕ್ರಮ ಈ ಸಮುದಾಯದಲ್ಲಿ ಜಾರಿಯಲ್ಲಿದೆ.

**ಬೆಡಗುಗಳು**

ಒಂದು ಸಮುದಾಯದಲ್ಲಿರುವ ವಿಶಿಷ್ಟ ಘಟಕಗಳಿಗೆ ಬೆಡಗುಗಳು ಎನ್ನಬಹುದು. ನೂರಾರು ಬೆಡಗುಗಳು ಇವರಲ್ಲಿ ಕಾಣಸಿಗುತ್ತವೆ. ಈ ಸಮುದಾಯವು ಸಾಂಸ್ಕೃತಿಕ ಹಾಗೂ ಭೌಗೋಳಿಕ ಕಾರಣಗಳಿಗಾಗಿ ಬೇರೆ ಬೇರೆ ಕಡೆ ವಾಸಿಸಲು ಪ್ರಾರಂಭಿಸಿದಾಗ, ಬುಡಕಟ್ಟು ಲಕ್ಷಣಗಳುಳ್ಳ ಈ ಸಮುದಾಯದ ಒಂದೊಂದು ಗುಂಪು ಒಂದೊಂದು ಬೆಡಗುಗಳಾಗಿ ರೂಪುಗೊಂಡಿರಲೂಬಹುದು. ಮದುವೆ ಸಂದರ್ಭಗಳಲ್ಲಿ ಇವುಗಳನ್ನು ಕಟ್ಟುನಿಟ್ಟಾಗಿ ಪಾಲಿಸುತ್ತಾರೆ. ಏಕೆಂದರೆ ಒಂದೇ ಬೆಡಗಿನವರು ಸೋದರ ಸಂಬಂಧಿಗಳಾಗುತ್ತಾರೆ ಹಾಗಾಗಿ ಒಂದೇ ಬೆಡಗಿನಲ್ಲಿ ವಿವಾಹ ಸಂಬಂಧಗಳು ಏರ್ಪಡದೇ ಬೇರೆ ಬೆಡಗುಗಳೊಂದಿಗೆ ಬೆಳೆಸಲಾಗುವುದು. ಪ್ರತಿ ಬೆಡಗಿಗೂ ತನ್ನದೇ ಆದ ಮನೆದೇವರುಗಳು ಇರುತ್ತವೆ.

ದೊಂಬಿದಾಸರ ಸಮೀಕ್ಷೆಯಲ್ಲಿ ಕಂಡುಬಂದ ಬೆಡಗುಗಳು (ಕೋಷ್ಟಕ:೪.೧) ಕೆಳಗಿನಂತಿವೆ

**ಕೋಷ್ಟಕ : ೪.೧ ದೊಂಬಿದಾಸರ ಬೆಡಗುಗಳು (೨೦೦೭)**

| ಸಂ. | ಬೆಡಗು | ಸಂಖ್ಯೆ |
|---|---|---|
| ೦೧ | ಅಂದಾವೊಳ್ಳು | ೧೪ |
| ೦೨ | ಅಂಬಿ (ಅಪ್ಪ) ಶೆಟ್ಟೊಳ್ಳು | ೬ |
| ೦೩ | ಅಕ್ಕಿನ ಪಲ್ಲೊಳ್ಳು | ೬೫ |
| ೦೪ | ಅಮಲ ಶೆಟ್ಟೊಳ್ಳು | ೧೦ |
| ೦೫ | ಅರವೊಳ್ಳು | ೩೧ |
| ೦೬ | ಆಚಾರಿವೊಳ್ಳು | ೩೩ |
| ೦೭ | ಬಂಗಲೊಳ್ಳು | ೭ |
| ೦೮ | ಬಂಗಾರೊಳ್ಳು | ೮ |
| ೦೯ | ಬಟ್ಟೊಳ್ಳು | ೬೯ |
| ೧೦ | ನಬಿಂಗೊಳ್ಳು | ೧೨ |
| ೧೧ | ಬೆಲಪ ಕೊಂಡೊಳ್ಳು | ೧೧ |
| ೧೨ | ಬೊಮ್ಮನ ಪಲ್ಲೊಳ್ಳು | ೨ |
| ೧೩ | ದಂಡೊಳ್ಳು | ೨ |
| ೧೪ | ದ್ಯಾವರ ಕೊಂಡೊಳ್ಳು | ೨೦ |
| ೧೫ | ದ್ಯಾವರ ಪಲ್ಲೊಳ್ಳು | ೧೪ |
| ೧೬ | ದೊಂತರ ಬೈನೊಳ್ಳು | ೩೬ |
| ೧೭ | ಇಂಗೊಳ್ಳು | ೩೧ |
| ೧೮ | ಇರಗಂಟೋಳು | ೧೭ |

೧೯ ಗದ್ದೆವೊಳ್ಳೂ ೩೦
೨೦ ಗ್ವಾದಾವೊಳ್ಳು ೨
೨೧ ಗ್ವಾಗಾವೊಳ್ಳೂ (ಗ್ವಾಗಸಾನೋಳ್ಳು) ೧೦
೨೨ ಗ್ವಾಲೊಳ್ಳು ೨೦
೨೩ ಗುಡೆಗಾಳ್ಳು ೬೭
೨೪ ಗುರುಮೊಳ್ಳು ೯
೨೫ ಗೊರಮುಚ್ಚೊಳ್ಳು ೫
೨೬ ಹಲ್ಲೊಳ್ಳು ೧೨
೨೭ ಜಂಗಾಲೊಳ್ಳು ೧೦
೨೮ ಜಂಬಲೊಳ್ಳು ೧೪
೨೯ ಜಟ್ಟೊಳ್ಳು ೧೪
೩೦ ಜಾರಪಲ್ಲೊಳ್ಳು ೨೩
೩೧ ಜೋಗಲೊಳ್ಳು ೨೮
೩೨ ಕುಂದೂರೊಳ್ಳು ೫೮
೩೩ ಕೊಂಡಾವೊಳ್ಳು ೧೭
೩೪ ಕಠಾರೊಳ್ಳು ೪೨
೩೫ ಕ್ವಾಮಟೊಳ್ಳು ೩೮
೩೬ ಕುರುಪಟ್ಟೊಳ್ಳು ೩
೩೭ ಕೇಶಪ್ಪೆನೊಳ್ಳು ೧೦
೩೮ ಮಲ್ಲಿಶೆಟ್ಟೊಳ್ಳು ೭೧
೩೯ ಮಾಗ(ವ)ನೂರೊಳ್ಳು ೩
೪೦ ಮ್ಯಾಡಾವೊಳ್ಳು ೫
೪೧ ಮಿರಾಲೊಳ್ಳು ೨೪
೪೨ ಮುದೆನೂರೊಳ್ಳು ೧೭
೪೩ ಮುತ್ಯಾಲೋಳು ೩
೪೪ ಮುತ್ತಿಮಶೆಟ್ಟೊಳ್ಳು ೧೩
೪೫ ಮೈಲಾರೊಳ್ಳು ೬೬
೪೬ ಮೊಗಸಾಲೊಳ್ಳು ೯೮
೪೭ ನಂದ್ಯಾಲೊಳ್ಳು ೧೫
೪೮ ನಕ್ಕಲೊಳ್ಳು ೬
೪೯ ನರಾಲೊಳ್ಳು ೩೭
೫೦ ನಾಮಾವೊಳ್ಳು ೫

| | | |
|---|---|---|
| ೫೧ | ನೇಚಪ್ಯೆನೊಳ್ಳು | ೨೩ |
| ೫೧ | ಪಡುತ್ಲೊಳ್ಳು | ೯೩ |
| ೫೨ | ಪಲ್ಲೇಟೊಳ್ಳು | ೭ |
| ೫೩ | ಪಶುಲ್ಯಾಟೊಳ್ಳು | ೩೬ |
| ೫೪ | ಪಾಕಲೊಳ್ಳು | ೬ |
| ೫೫ | ಪಾಯಲೊಳ್ಳು | ೧೩೨ |
| ೫೬ | ಪಾ(ರೊ)ರ್ಲೊಳ್ಳು | ೬ |
| ೫೭ | ಪಿನ್ನಮೊಳ್ಳು | ೭ |
| ೫೮ | ಪುಲಿಯೋಳು | ೭ |
| ೫೯ | ಪೂ(ವ)ಲೊಳ್ಳು | ೧೨ |
| ೬೦ | ಪೋಲಬ್ಬೆನೊಳ್ಳು | ೫೦ |
| ೬೧ | ರಾಘಮೊಳ್ಳು | ೯ |
| ೬೨ | ಸಂಗಮೊಳ್ಳು | ೧ |
| ೬೩ | ಸಿಂತಲೊಳ್ಳು | ೩೫ |
| ೬೪ | ಸ್ವಾಲಾವೊಳ್ಳು | ೫೮ |
| ೬೫ | ಶ್ರೀರಾಮೊಳ್ಳು | ೧೦ |
| ೬೬ | ಸೀದಾವೊಳ್ಳು | ೪ |
| ೬೭ | ಸೆರಪಲ್ಲೊಳ್ಳು | ೧೨ |
| ೬೮ | ಸೋಗಲೋಳು | ೬ |
| ೬೯ | ತಮಟಮೊಳ್ಳು | ೭೧ |
| ೭೦ | ತಿಪ್ಪೊಳ್ಳು | ೪೨ |
| ೭೧ | ಉಪ್ಪೊಳ್ಳು | ೧೫ |
| ೭೨ | ವಾಟೊಳ್ಳು | ೨ |
| ೭೩ | ವೇದಮೊಳು | ೧೯ |
| ೭೪ | ಯಂಟಪಲ್ಲೊಳ್ಳು | ೧೫ |
| ೭೫ | ಯರಗುಂಟೊಳ್ಳು | ೪ |
| | ಬೆಡಗು ಹೇಳದವರು | ೭ |
| | ಒಟ್ಟು | ೧೮೫೨ |

ಈ ಬೆಡಗುಗಳೊಂದಿಗೆ ಅಂಬಲೊಳ್ಳು, ಆಕಲೋಳ್ಳು, ಬಂಡೊಳ್ಳು, ಬೋಡಾವೊಳ್ಳು, ದತ್ತಾತ್ರಯೊಳ್ಳು, ದ್ವಾರ ನಾರೊಳ್ಳು, ಇಮ್ಮಡಿ ಶೆಟ್ಟೊಳ್ಳು, ಗೂಡದಾಸರೊಳ್ಳು, ಗೊಳಮೊಳ್ಳು, ಗೋವಿಂದೊಳ್ಳು, ಹಂದ್ಯಾವೊಳ್ಳು, ಹೆಂಡಪಲ್ಲೊಳ್ಳು, ಕಂಚಕಮೊಳ್ಳು,ಕುಂಚುವೊಳ್ಳು, ಕೊಂಡಕಾರೊಳ್ಳು, ಕಮಲೊಳು, ಕುವಾಕಲೊಳ್ಳು, ಕೊಯ್ಯಲ ಕೊಂಡೊಳ್ಳು,ಮಕರ

ವಂಶವೊಳ್ಳು, ಮನಕಲ್ಲೊಳ್ಳು, ಮಾಡಬ್ಬೆನೊಳ್ಳು, ಮ್ಯಾಳಾವೊಳ್ಳು, ಮ್ಯೆಲಗಾನೊಳ್ಳು, ಮೊಸಲೊಳ್ಳು, ಓಬಳ ದಾರೊಳ್ಳು, ಪನಾಲೊಳ್ಳು, ಪೂಲಬುಗೊಳ್ಳು, ಪೆನಗಂಟೊಳ್ಳು, ಸಿಂಹಲೊಳ್ಳು, ಸಿಲಿಮಿಶೆಟ್ಟೊಳ್ಳು ಎಂಬೀ ಬೆಡಗುಗಳು ಅಲ್ಲಲ್ಲಿ ಕಾಣಸಿಗುವವು.

ಕರ್ನಾಟಕ ರಾಜ್ಯದಲ್ಲಿ ಕ್ಷೇತ್ರಕಾರ್ಯ ಮಾಡುವ ಸಂದರ್ಭದಲ್ಲಿ ಈ ಮೇಲಿನ ಬೆಡಗುಗಳು ದೊರೆತಿವೆ. ಆಂಧ್ರ ಪ್ರದೇಶದಲ್ಲಿರುವ ಹೊಲೆಯ ದಾಸರಿ ಸಮುದಾಯದಲ್ಲಿ ಕೂಡ ಈ ತರಹದ ಬೆಡಗಗಳನ್ನು ಕಾಣಬಹುದಾಗಿದೆ. The Mysore Tribes and Castes VIIರಲ್ಲಿ ಎಲ್ ಕೆ ಅನಂತಕೃಷ್ಣ ಅಯ್ಯರ್ ಮತ್ತು ಎಚ್ ವಿ ನಂಜುಂಡಯ್ಯರವರೂ ಸಹ ಕೆಲವು ಬೆಡಗುಗಳನ್ನು ಗುರುತಿಸಿದ್ದಾರೆ. ಅವುಗಳೆಂದರೆ ಏಡುಮಲ್ಲಿಸೆಟ್ಟೋಳ್ಳು, ಏಡುಕ್ವಾಮಟಿಮೋಡು, ಬೊಮ್ಮನಪಲ್ಲೋಳ್ಳು, ಏಡುಪಡುತ್ಲೋಳ್ಳು, ಸ್ವಾಮ್‌ರಕಟ್ಟೋಡು, ತಿರುಮ್ಲೋಡು, ಗ್ವಾದಾವ್ಲೋಡು ಮುಂತಾದ ಬೆಡಗುಗಳಿವೆ.ಇದರಲ್ಲಿ ದೊಂಬಿದಾಸರು ಏಡುಪಡತ್ಲೋಳ್ಳು ಗುಂಪಿಗೆ ಸೇರಿದವರು ಎಂದು ಅಭಿಪ್ರಾಯ ಪಟ್ಟಿದ್ದಾರೆ. ಇವುಗಳಿಂದ ಅವರುಗಳಲ್ಲಿರುವ ಸಾದೃಶ್ಯ-ವೈದೃಶ್ಯಗಳನ್ನು ತಿಳಿಯಲು ಅನುಕೂಲಕರವಾಗಿದೆ.

**ಬೆಡಗುಗಳ ಅರ್ಥ**

ಒಂದು ಸಮುದಾಯದ ಒಳಗೆ ಇರುವ ಬೇರೆಬೇರೆ ಗುಂಪುಗಳನ್ನು ಬೆಡಗುಗಳ ಹೆಸರಿನಿಂದ ಗುರುತಿಸುತ್ತೇವೆ. ಈ ಗುರುತಿಸುವಿಕೆಯಿಂದ ಒಂದೇ ರಕ್ತ ಸಂಬಂಧದಲ್ಲಿ ವಿವಾಹವಾಗವುದನ್ನು ತಪ್ಪಿಸವ ಉದ್ದೇಶವಿದೆ. ಈ ರೀತಿಯ ವಿಶೇಷ ಬೆಡಗುಗಳ ಉಗಮ ಮತ್ತು ಅದರ ಅರ್ಥದ ವಿವರಗಳನ್ನು ಕೆಳಕಂಡಂತೆ ವಿಶ್ಲೇಷಿಸಲಾಗಿದೆ:

೧. **ಮುತ್ತಿಮಶೆಟ್ಟಿ** : ಹಿರಿಯರೊಬ್ಬರು ಹೇಳುವಂತೆ ಇವರು ವಿಜಯನಗರ ಸಾಮ್ರಾಜ್ಯದಲ್ಲಿ ಮುತ್ತುರತ್ನಗಳನ್ನು ವ್ಯಾಪಾರ ಮಾಡುತ್ತಿದ್ದ ಮನೆತನವಾಗಿದ್ದು ವಿಜಯನಗರ ಪಥನಾನಂತರ ಇವರು ಭಿಕಾರಿಗಳಾದರು. ಆದರೆ ಇವರ ಮನೆತನದ ಹೆಸರು ಮಾತ್ರ ಮುತ್ತಿಮಶೆಟ್ಟೊಳು ಆಗಿಯೇ ಉಳಿಯಿತು.

೨. **ಮುದೆನೂರೋಳ್ಳು** : ಮುದೆನೂರ ಎನ್ನುವುದು ಆಂಧ್ರ ಪ್ರದೇಶದ ಒಂದು ಹಳ್ಳಿ, ಈ ದಾಸರು ಅಲ್ಲಿಂದ ವಲಸೆ ಬಂದರು. ಕರ್ನಾಟಕದಲ್ಲಿ ಇವರು ಮುದೆನೂರೋಳ್ಳು ಬೆಡಗಿನವರೆಂದೆ ಗುರುತಿಸಿಕೊಂಡರು.

೩. **ಕೊಂಡಾವೊಳ್ಳು** : ತೆಲುಗಿನ "ಕೊಂಡ" ಎನ್ನುವ ಪದ ಕನ್ನಡದ ಬೆಟ್ಟ ಎಂದಾಗುತ್ತದೆ. ಕೊಂಡ ಸೀಮೆ ಅಥವಾ ಬೆಟ್ಟ ಸೀಮೆಯಿಂದ ಬಂದವರು ಕೊಂಡಾವೊಳ್ಳು ಎಂದಾದರು.

೪. **ಗೊಳ್‌ಮೊಳ್ಳು** : ಗೋಳಳ್ಳಿ ಎಂಬುದು ಆಂಧ್ರ ಪ್ರದೇಶದಲ್ಲಿನ ಒಂದು ಗ್ರಾಮ. ಈ ಗ್ರಾಮದಿಂದ ವಲಸೆಬಂದವರಾದ್ದರಿಂದ ಇವರು ತಮ್ಮನ್ನು ಗೊಳ್‌ಮೊಳ್ಳು ಎಂಬ ಬೆಡಗಿನಿಂದ ಕರೆದುಕೊಂಡರು. ಹೀಗೆ ಒಂದೊಂದು ಬೆಡಗಿಗೂ ಒಂದೊಂದು ಉಗಮದ ಕಥೆ ಇರುವುದನ್ನು ಕಾಣಬಹುದು.

ಕರ್ನಾಟಕದ ದೊಂಬಿದಾಸ, ಚೆನ್ನದಾಸ ಸಮುದಾಯದ ಬೆಡಗಗಳು ಮತ್ತು ಆಂಧ್ರ ಪ್ರದೇಶದ ಹೊಲೆಯದಾಸರ ಬೆಡಗಗಳ ನಡುವಿನ ಸಾಮ್ಯತೆಗಳನ್ನು ಈ ರೀತಿ ಗುರುತಿಸಬಹುದು.

| ಕರ್ನಾಟಕ | ಅಂಧ್ರ ಪ್ರದೇಶ |
|---|---|
| ವಾಟಮೊಳ್ಳು | ವಾಟಂವಾರು |
| ಟಮಟಮೊಳ್ಳು | ಟಮಟಂವಾರು |
| ಆಕಲೊಳ್ಳು | ಆಕಲವಾರು |
| ಯಂಡಪಲೊಳ್ಳು | ಯಂಡಪಲ್ಲಿವಾರು |
| ಕುವ್ವಾಕಲೊಳ್ಳು | ಕೊವ್ವಾಕಲವಾರು |
| ಪಸುಲೊಳ್ಳು | ಪಸಲವಾರು |

ವೈವಾಹಿಕ ಸ್ಥಾನಮಾನ

ಪ್ರಸ್ತುತ ಅಧ್ಯಯನದ ಪ್ರಕಾರ ಒಟ್ಟು ಜನಸಂಖ್ಯೆಯ ಪೈಕಿ ಶೇ. ೬೫.೦೪ ರಷ್ಟು ಜನರು ವಿವಾಹಿತರಾಗಿದ್ದು, ಅವರ ಪೈಕಿ ಶೇ. ೬೮.೩೬ ರಷ್ಟು ಮಹಿಳೆಯರಾಗಿದ್ದಾರೆ. ಅವಿವಾಹಿತರು ೩೧.೮ರಷ್ಟಿರುವರು. ಇವರಲ್ಲಿ ಶೇ. ೬೦.೨೬ ರಷ್ಟು ಪುರುಷರು ಕಂಡು ಬಂದರೆ, ಶೇ. ೫೯.೭೩ ರಷ್ಟು ಮಹಿಳೆಯರು ಕಂಡು ಬರುತ್ತಾರೆ. ಈ ಅಧ್ಯಯನದಿಂದ ಕಂಡು ಬರುವುದೇನೆಂದರೆ ಲಿಂಗವಾರು ವಿಷಯಗಳಲ್ಲಿ ಪುರುಷರಿಗಿಂತ ಮಹಿಳೆಯರಲ್ಲಿ ಹೆಚ್ಚು ಜನರು ವಿವಾಹಿತರಾಗಿದ್ದಾರೆ. ಕಾರಣವೆಂದರೆ ಬುಡಕಟ್ಟು ಸಮುದಾಯಗಳಲ್ಲಿ ಹೆಣ್ಣು ಮಕ್ಕಳನ್ನು ಬೇಗ ಮದುವೆ ಮಾಡುತ್ತಾರೆ. ಹಾಗೆಯೇ ಇದಕ್ಕೆ ತದ್ವಿರುದ್ಧವಾಗಿ ಅವಿವಾಹಿತರಲ್ಲಿ ಪುರುಷರೇ ಮಹಿಳೆಯರಿಗಿಂತ ಅಧಿಕ ವಾಗಿರುವುದು ಪುರುಷರು ತಡವಾಗಿ ಮದುವೆಯಾಗುವುದನ್ನು ತೋರಿಸುತ್ತದೆ.

**ಕೋಷ್ಟಕ: ೪.೨ ದೊಂಬಿದಾಸರ ಶೇಕಡಾವಾರು ವೈವಾಹಿಕ ಸ್ಥಾನಮಾನ (೨೦೦೭)**

| ಸಂ | ವೈವಾಹಿಕ | ಗಂಡು | ಹೆಣ್ಣು | ಒಟ್ಟು |
|---|---|---|---|---|
| ೧ | ಅವಿವಾಹಿತ | ೩೬.೬೫ | ೨೭.೭೧ | ೩೧.೮ |
| ೨ | ವಿವಾಹಿತ | ೬೧.೯೯ | ೬೮.೩೬ | ೬೫.೦೪ |
| ೩ | ವಿಧುರ/ ವಿಧವೆ | ೧.೨೯ | ೪.೭೯ | ೩.೦೫ |
| ೪ | ಬೇರ್ಪಡೆ | ೦.೦೭ | ೦.೧೪ | ೦.೧೧ |
| | ಒಟ್ಟು | ೧೦೦.೦೦ | ೧೦೦.೦೦ | ೧೦೦.೦೦ |

ವಿವಾಹ

ದೊಂಬಿದಾಸರು ವೈವಾಹಿಕ ಸಂಬಂಧಗಳನ್ನು ತಮ್ಮ ಸಂಬಂಧಿಕರಲ್ಲಿಯೇ ಬೆಳೆಸುವರು. ಗಂಡು ತನ್ನ ಅಕ್ಕ ಅಥವಾ ಸೋದರಮಾವನ ಮಗಳನ್ನು ಮದುವೆ ಯಾಗುವುದು ರೂಢಿ. ಈ ರೀತಿ ಸಂಬಂಧಗಳು ದೊರೆಯದಿದ್ದಾಗ ತಮ್ಮದೇ

ಜಾತಿಯಲ್ಲಿ ವರಸೆ (ಸಾಲಾವಳಿ) ಇರುವ ಬೆಡಗುಗಳನ್ನು ಹುಡುಕುತ್ತಾರೆ. ಕುಲ, ಬೆಡಗು, ಸಾಲಾವಳಿ ಎಲ್ಲವೂ ಸರಿಹೊಂದಿದ ಮೇಲೆ ಆ ಮನೆಗೆ ಹೆಣ್ಣು ಕೇಳಲು ಹೋಗುತ್ತಾರೆ. ಹೋಗುವ ಮುನ್ನ ಒಳ್ಳೆಯ ದಿನ ನಿಗದಿ ಪಡಿಸಿಕೊಳ್ಳುತ್ತಾರೆ. ಇದಕ್ಕೆಲ್ಲ ಮಾರ್ಗದರ್ಶನ ನೀಡಲು ತಮ್ಮಲ್ಲೇ ಜೋತಿಷ್ಯ ಬಲ್ಲವರನ್ನು ಆಶ್ರಯಿಸುತ್ತಾರೆ. ಇಲ್ಲದಿದ್ದರೆ ಬೇರೆ ಜೋಯಿಸರನ್ನು ವಿಚಾರಿಸಿ ದಿನ ನಿಗದಿಪಡಿಸುತ್ತಾರೆ. ಅಂದು ಗಂಡಿನ ಬಳಗದ ಕಡೆಯಿಂದ ಐದು ಅಥವಾ ಒಂಭತ್ತು ಜನ, ಅದರಲ್ಲಿ ಮೂರು ಜನ ಮುತ್ತೈದೆಯರು ಸೇರಿರಬೇಕು. ಕುಲದ ಯಜಮಾನರೊಬ್ಬರು ಜೊತೆ ಇರುತ್ತಾರೆ. ಹುಡುಗಿ ಮನೆಯವರು ಸಿಹಿ ಅಡುಗೆ ಮಾಡಿ ಬಂದವರನ್ನು ಸಿಹಿ ಪಾನಕ ನೀರು ಕೊಟ್ಟು ಉಪಚರಿಸುತ್ತಾರೆ. ಗಂಡು ಹೆಣ್ಣು, ಒಪ್ಪಿಗೆಯಾಗಿ ಎರಡೂ ಮನೆಯವರು ಒಪ್ಪಿದ ನಂತರ ನಿಶ್ಚಿತಾರ್ಥ (ವಕ್ಕಾಕು ಶಾಸ್ತ್ರ) ನೆರವೇರುತ್ತದೆ. ಶೃಂಗರಿಸಿದ ಹೆಣ್ಣು ಮಗಳನ್ನು ಹಸೆಮಣೆಯ ಮೇಲೆ ಕೂರಿಸಿ ಮುತ್ತೈದೆಯರು ಹೆಣ್ಣಿಗೆ ಸೋಗಲು ಹುಯ್ಯುತ್ತಾರೆ. ಕಳಸಕಂಬವಿಟ್ಟು ಎಲೆ, ಅಡಿಕೆ, ಹೂವು ಹಣ್ಣುಗಳನ್ನು ಹಸೆಮಣೆಯ ಮುಂದೆ ಇಡುತ್ತಾರೆ. ಗಂಡಿನ ಮನೆಯವರು ತಮಗೆ ಹೆಣ್ಣು ಒಪ್ಪಿಗೆಯಾದುದನ್ನು ಸೂಚಿಸಲು ಚಿನ್ನ ಅಥವಾ ಬೆಳ್ಳಿಯ ವಸ್ತುವನ್ನು ನೀಡುತ್ತಾರೆ. ಇದನ್ನು "ಈಡು" ಹಾಕುವುದು ಎನ್ನುತ್ತಾರೆ. ಅಲ್ಲಿಗೆ ಮದುವೆ ನಿಶ್ಚಿತಾರ್ಥವಾದಂತೆ.

**ತೆರಪದ್ಧತಿ :** ಸಮುದಾಯದಲ್ಲಿ ತೆರಕೊಡುವ ಪದ್ಧತಿ ಇತ್ತು. ಹಿಂದೆ ಗಂಡಿನ ಮನೆಯವರು ಮದುವೆ ಸಂಬಂಧವಾಗಿ ಹೆಣ್ಣಿನ ಮನೆಯವರಿಗೆ ೨೫ವರ ಬೆಳ್ಳಿನಾಣ್ಯಗಳನ್ನು 'ತೆರ' ಎಂದು ನೀಡುತ್ತಿದ್ದರು. ಈಗಲೂ ಈ ಪದ್ಧತಿ ಚಾರಿಯಲ್ಲಿದ್ದು ಬೆಳ್ಳಿ ನಾಣ್ಯಗಳಿಗೆ ಬದಲಾಗಿ ಈಗ ಹಣದ ರೂಪದಲ್ಲಿ ೧೦೧ ರೂಪಾಯಿಗಳನ್ನು ತೆರ ಕಟ್ಟುತ್ತಾರೆ.

**ವರದಕ್ಷಿಣೆ :** ಈ ಸಮುದಾಯದಲ್ಲಿ ಬಹಳ ಹಿಂದೆ ವರದಕ್ಷಿಣೆ ಪದ್ಧತಿ ಇರಲಿಲ್ಲ. ಕಾಲ ಬದಲಾದಂತೆ ಈ ಪದ್ಧತಿಗಳಲ್ಲಿ ಪರಿವರ್ತನೆಯಾಗಿ ಈಗ ವರದಕ್ಷಿಣೆ ಕೊಡುವ ಪದ್ಧತಿ ಈ ಸಮುದಾಯದಲ್ಲೂ ಚಾಲ್ತಿಯಲ್ಲಿದೆ.

**ವಿವಾಹದ ಬಗೆಗಳು**

ತುಂಬಾ ಹಿಂದೆ ಇವರಲ್ಲಿ ೫ ದಿನಗಳ ಮದುವೆ ನಡೆಯುತ್ತಿತ್ತು. ಈಗ ಇದನ್ನು ೨ ದಿನಕ್ಕೆ ಸೀಮಿತಗೊಳಿಸಿಕೊಂಡಿದ್ದಾರೆ. ಮೊದಲ ದಿನ ಚಪ್ಪರ, ಎರಡನೇ ದಿನ ಮೂಹೂರ್ತ.

**ಚಪ್ಪರದ ಶಾಸ್ತ್ರ :** ಚಪ್ಪರದ ಶಾಸ್ತ್ರ ವಿಶಿಷ್ಟವಾಗಿರುತ್ತದೆ ಮದುವೆ. ಸಮಾರಂಭವು ಕೆಲವು ಕಡೆ ಗಂಡಿನ ಮನೆಯ ಮುಂದೆಯೂ ನಡೆಯುವುದುಂಟು. ಸಾಮಾನ್ಯವಾಗಿ ಹೆಣ್ಣಿನ ಮನೆಯ ಮುಂದೆ ಚಪ್ಪರ ಹಾಕಿ ಮದುವೆ ಮಾಡುವುದು ಸಾಮನ್ಯ. ೯ ಕಂಬಗಳುಳ್ಳ ಚಪ್ಪರ ಹಾಕುತ್ತಾರೆ. ಇದರಲ್ಲಿ ಕೋಡುಗಳ್ಳಿ ಮರದ ರೆಂಬೆಯನ್ನು ಹಾಲು ಗಂಬ ಎಂದು ನೆಡುತ್ತಾರೆ. ಚಪ್ಪರದ ಎಲ್ಲಾ ದಿಕ್ಕುಗಳಿಗೂ ೧೨ ಗುಂಬ(ಮಣ್ಣಿನ

ಮಡಿಕೆ)ಗಳನ್ನು ಇಡುತ್ತಾರೆ. ಚಪ್ಪರದಲ್ಲಿ 'ಹಸೆಜಗುಲಿ'ಯನ್ನು ಮಣ್ಣಿನಿಂದ ತಯಾರು ಮಾಡುತ್ತಾರೆ. ಇದನ್ನು ಮಂಟಪ ಎನ್ನುತ್ತಾರೆ. ಇಲ್ಲಿ 'ತಾಯಿಹರಿಣೆ' ಜೊತೆಗೆ ಒಟ್ಟು ೧೨ ಮಣ್ಣಿನ ಮಡಿಕೆ (ಗಡಿಗೆ) ಇಟ್ಟು ಅದರಲ್ಲಿ ನೀರನ್ನು ತುಂಬಿರುತ್ತಾರೆ. ಅವಕ್ಕೆ ಮೂರ ಪಟ್ಟಿ ಬಿಳಿನಾಮ ಮತ್ತು ಕುಂಕುಮ ಹಚ್ಚುತ್ತಾರೆ. ರಾತ್ರಿ ಈ ಮಂಟಪದಲ್ಲಿ ಹಸೆಮಣೆಹಾಕಿ ಹೆಣ್ಣನ್ನು ಕೂರಿಸಿ ಬಳೆತೊಡಿಸುವ ಶಾಸ್ತ್ರ ಮಾಡುತ್ತಾರೆ. ಇದನ್ನು 'ಬಳಗದ ಬಳೆ' ಶಾಸ್ತ್ರ ಎಂದು ಕರೆಯುತ್ತಾರೆ. ಮದುವೆಯಲ್ಲಿ ಭಾಗವಹಿಸಲು ಬಂದಿರುವ ಮುತ್ತೈದೆಯರೆಲ್ಲರಿಗೂ ಕಪ್ಪು ಬಳೆ ತೊಡಿಸುತ್ತಾರೆ. ಈ ಬಳೆ ಶಾಸ್ತ್ರಕ್ಕಾಗಿ ೯ ತಟ್ಟೆಗಳನ್ನು ತುಂಬುತ್ತಾರೆ. ಕಳಸ, ಸೀರೆ, ರವಿಕೆ, ಎಲೆ, ಅಡಿಕೆ, ತೆಂಗಿನಕಾಯಿ, ಬಾಳೆಹಣ್ಣು, ತಿಂಡಿಪದಾರ್ಥಗಳು ಒಳಗೊಂಡಿರುತ್ತವೆ. ೫ ಜನ ಮುತ್ತೈದೆಯರು ಶಾಸ್ತ್ರಮಾಡಿ ಹುಡುಗಿಗೆ ಸೋಗಲು ಹುಯ್ಯುತ್ತಾರೆ. ಪ್ರತಿ ತಟ್ಟೆಯನ್ನು ಹುಡುಗಿಗೆ ಮುಟ್ಟಿಸಿ ಕೆಳಕ್ಕಿಡುತ್ತಾರೆ. ಈ ಸಂದರ್ಭದಲ್ಲಿ ಸೋಬಾನೆ ಪದಗಳನ್ನು ಹಾಡುತ್ತಾರೆ.

ಸೋಬಾನ ಎನ್ನಿರಿ
ಸೋಬಾನ ಎನ್ನಿರಿ ಶಿವನಿಗೆ
ನಾನೇನು ಬಲ್ಲೇನು ಶ್ರೀರಾಮನ ಚರಿತೆ ಶಿವನೇ ಬಲ್ಲ
ಕಮಲಾಕ್ಷಿ ಬಾರೈ ಕಮಲದಾ ಹಸೆಗೀಗ
ದಂತ ದಾಳಿಂಬೆಗಳು ಕುಂಕುಮದ ನಾಸಿಕವು
ಪಂಕ ಜಾಕ್ಷಿಯೆ ನಿನಗೆ ಕುಂಕುಮ ಹಚ್ಚುವೆ ಬಾ ॥
ಹಸಿರು ಸೀರೆಯ ಕೊಡುವೆ ಜಂತ ಜಾಕೀಟು ಕೊಡುವೆ
ಹರಳು ಓಲೆಯ ಕೊಡುವೆ ಬೆರಳಿಗುಂಗುರ ಕೊಡುವೆ
ದುಂಡು ಮಲ್ಲಿಗೆ ಮೊಗ್ಗು ಸುರಗಿ ಸಂಪಿಗೆಹಾರ
ನಗುತ ನಲಿಯುತಲಿ ಸುಕುಲರ ಕೊರಳಿಗೆಯು ॥

ಹೀಗೆ ಪ್ರತಿಯೊಂದು ಸಂಪ್ರದಾಯಕ್ಕೂ ಇವರು ದನಿಗೂಡಿಸುತ್ತಾರೆ.

**ಮುಹೂರ್ತ :** ಮುಹೂರ್ತದ ದಿನ ಮೊದಲಿಗೆ 'ಹರಣಿ ಶಾಸ್ತ್ರ' ನೆರವೇರುತ್ತದೆ. ಓಲಗದ ಸಮೇತ ಗಂಗಾ ಸ್ಥಾನಕ್ಕೆ ಹೋಗಿ ಮುತ್ತೈದೆಯರು ಹರಿಣಿಗಳನ್ನು ನೀರಿನಿಂದ ತುಂಬಿಸಿ ಪೂಜಿಸಿ ತರುತ್ತಾರೆ. ಒಂದೇ ಉದ್ದನೆಯ ಪಂಚೆಯನ್ನು ಎರಡು ಸಿಂಬಿಮಾಡಿ ಈಗಾಗಲೆ ಮದುವೆಯಾಗಿರುವ ದಂಪತಿಗಳು ಒಬ್ಬರ ಹಿಂದೆ ಒಬ್ಬರು ಹರಿಣೆ ಹೊತ್ತುಕೊಂಡು ನಡುಮುಡಿ (ಅಗಸರು ಹಾಸುವ ಮಡಿಬಟ್ಟೆ) ಮೇಲೆ ನಡೆದು ಬಂದು ಮದುವೆ ಮಂಟಪದ ಹತ್ತಿರ ಇಡುತ್ತಾರೆ.

ಹೆಣ್ಣಿಗೆ ಸೋದರ ಮಾವನಿಂದ ಕಾಲುಂಗರ ತೊಡಿಸುವ ಶಾಸ್ತ್ರ ನಡೆಯುತ್ತದೆ. ಸೋದರಮಾವ ಹಣ್ಣುಕಾಯಿ, ಹಾಲು-ತುಪ್ಪ, ಗರಿಕೆ ಪತ್ರೆ ಇಟ್ಟು ಪೂಜೆ ಮಾಡಿ ಕಾಲುಂಗುರ ತೊಡಿಸುತ್ತಾನೆ. ಇದಾದ ನಂತರ ಗಂಡು ಮತ್ತು ಹೆಣ್ಣನ್ನು ಹಸೆಮಣೆಯ ಮೇಲೆ ಕೂರಿಸಿ ಅರಿಶಿಣ, ಎಣ್ಣೆ ಹಚ್ಚಿ ಬಿಸಿನೀರಿನ ಸ್ನಾನ ಮಾಡಿಸಿ ಹೊಸ ಬಟ್ಟೆಯನ್ನು

ತೊಡಿಸುತ್ತಾರೆ. ಗಂಡನ್ನು ಹತ್ತಿರ ಇರುವ ದೇವಸ್ಥಾನದಲ್ಲಿ ಕೂರಿಸಿ ಹೆಣ್ಣಿನ ತಂದೆ ತಾಯಿಯಿಂದ ಕಾಶಿಯಾತ್ರೆ ಶಾಸ್ತ್ರ ಮಾಡಿಸುತ್ತಾರೆ "ಅಳೀಮಯ್ಯ ನೀನು ಕಾಶಿಯಾತ್ರೆಗೆ ಹೋಗಬೇಡ ನನ್ನ ಮಗಳನ್ನು ನಿನಗೆ ಕೊಟ್ಟು ಮದುವೆ ಮಾಡಿಕೊಡುತ್ತೇವೆ ಬಾರಪ್ಪ" ಎಂದು ಕರೆದು ಪಾದ ತೊಳೆದು ಹರಿಶಿಣ ಕುಂಕುಮ ಇಟ್ಟು ವಾದ್ಯ ಸಮೇತ ಕರೆತಂದ ಗಂಡನ್ನು ಹಸೆಮಣೆಯ ಮೇಲೆ ನಿಲ್ಲಿಸಿ ಮಧ್ಯ ಒಂದು ಪರದೆ ಹಿಡಿಯುತ್ತಾರೆ. ಹೆಣ್ಣಿನ ಸೋದರ ಮಾವ ಮದುವೆ ಹೆಣ್ಣನ್ನು ಕರೆತಂದು ಗಂಡಿನ ಎದುರು ಹಸೆಮಣೆಯ ಮೇಲೆ ನಿಲ್ಲಿಸುತ್ತಾನೆ. ಕುಲದ ಹಿರಿಯರೊಬ್ಬರು ಗಂಡು ಮತ್ತು ಹೆಣ್ಣಿನ ಕೈಯಲ್ಲಿ ಎಲೆ ಇಡುತ್ತಾರೆ. ಆ ಎಲೆಯಲ್ಲಿ ಎಳ್ಳು ಮತ್ತು ಜೀರಿಗೆಯನ್ನು ಹಾಕಿ ಅವನ್ನು ಹೆಣ್ಣಿನಿಂದ ಗಂಡಿನ ತಲೆಯ ಮೇಲೆ ನಂತರ ಗಂಡಿನಿಂದ ಹೆಣ್ಣಿನ ತಲೆಯ ಮೇಲೆ ಹಾಕಿಸುತ್ತಾರೆ. ಇದಾದ ನಂತರ ಸಮನ್ಮಾಲೆ ಹಾರವನ್ನು ಹಾಕಿಸುತ್ತಾರೆ. ಹೆಣ್ಣಿನ ಕೈಗೆ ಹಣ್ಣನ್ನು, ಗಂಡಿನ ಕೈಗೆ ತೆಂಗಿನಕಾಯಿಯನ್ನು ಕೊಟ್ಟು ನಿಲ್ಲಿಸಿ ತುಪ್ಪ ಬೆರೆಸಿದ ಹಾಲನ್ನು ಮೊದಲಿಗೆ ಗಂಡು ಹೆಣ್ಣಿನ ತಂದೆ ತಾಯಂದಿರು ದಾರೆಯೆರೆಯುತ್ತಾರೆ. ತದನಂತರ ಕುಲಬಾಂಧವರು ಬಂದು ಅಕ್ಷತೆ ಹಾಕಿ ಹಾಲು ಬಿಡುತ್ತಾರೆ. ಇದಕ್ಕೂ ಮೊದಲೇ ತಟ್ಟೆ ಒಳಗೆ ಬೆಲ್ಲದ ಅಚ್ಚು ಇಟ್ಟು ಅರಿಸಿಣದ ದಾರಕ್ಕೆ ಚಿನ್ನದ ತಾಳಿ ಕಟ್ಟಿ ಅದರಲ್ಲಿಟ್ಟು ಅಲ್ಲಿ ನೆರೆದ ಸಮಸ್ಥರ ಕೈಯಿಂದ ಮುಟ್ಟಿಸಿ ಆಶೀರ್ವಾದ ಪಡೆಯುತ್ತಾರೆ. ನಿಗದಿಪಡಿಸಿದ ಸಮಯಕ್ಕೆ ಸರಿಯಾಗಿ ಗಂಡಿನ ಕೈಯಿಂದ ಹೆಣ್ಣಿಗೆ ತಾಳಿ ಕಟ್ಟಿಸುತ್ತಾರೆ. ಗಟ್ಟಿಮೇಳ ಭಾರಿಸಿದ ತಕ್ಷಣ ತಾಳಿ ಕಟ್ಟಿದ ಸೂಚನೆ ದೊರೆತು ಎಲ್ಲರೂ ವಧುವರರ ಮೇಲೆ ಅಕ್ಷತೆ ಹಾಕಿ ಆಶೀರ್ವಾದ ಮಾಡುತ್ತಾರೆ. ಹಿಂದೆ ಬ್ರಾಹ್ಮಣ ಪೂಜಾರಿ ಈ ಸಮುದಾಯದ ಧಾರಾಮಹೂರ್ತದಲ್ಲಿ ಭಾಗವಹಿಸುತ್ತಿರಲಿಲ್ಲ. ಕುಲದ ಪಿನ್ನಪೆದ್ದ ಅಥವಾ ಹಿರಿಯರೊಬ್ಬರು ಮಂತ್ರಹೇಳಿ ತಾಳಿ ಕಟ್ಟಿಸುವ ಶಾಸ್ತ್ರ ಮಾಡುತ್ತಿದ್ದರು. ಇತ್ತೀಚೆಗೆ ಮದುವೆ ಮಾಡಿಸುವಲ್ಲಿ ಬ್ರಾಹ್ಮಣರ ಪ್ರವೇಶ ಆಗಿದೆ.

**ದೇವಲಾಡೋ ಶಾಸ್ತ್ರ** : ದಾರಾಮುಹೂರ್ತದ ನಂತರ ಮಣ್ಣಿನ ಪರಿಣೆ (ಮಡಿಕೆ) ಒಳಗೆ ಒಂದು ಉಂಗುರ ಮತ್ತು ಒಂದು ಮೂಗುಬಟ್ಟು ಹಾಕಿ ನೀರು ಸುರಿಯುತ್ತಾರೆ. ಹೆಣ್ಣು ಗಂಡಿನ ಕೈಯಿಂದ ಹುಡುಕಿಸುತ್ತಾರೆ. ಈ ಸಂದರ್ಭದಲ್ಲಿ ಮಡಿಕೆಯಿಂದ ಉಂಗುರ ತೆಗೆದರೆ ಹುಟ್ಟುವ ಮಗುವು ಗಂಡೆಂದೂ, ಮೂಗುತಿಯನ್ನು ತೆಗೆದರೆ ಹೆಣ್ಣೆಂದು ನಂಬುತ್ತಾರೆ.

**ಸಿಂಹಾಸನ ವಕ್ಕಾಕುಶಾಸ್ತ್ರ** : ಧಾರಾ ಮುಹೂರ್ತದ ನಂತರ ಎಲ್ಲರೂ ಊಟ ಮುಗಿಸಿದ ಮೇಲೆ ಚಪ್ಪರದ ದಿನ ಕಟ್ಟಿದ 'ಗೋದಮುಡಮು' (ಬೆಳ್ಳುಳ್ಳಿ-೧೨, ಹರಿಶಿನಕೊನೆ-೧೨, ಬಟ್ಟ ಅಡಿಕೆ ೨ ಸೇರು, ಒಂದು ಚಿನ್ನದ ಉಂಗುರ ಸೇರಿಸಿ ಕಟ್ಟಿರುವ ಗಂಟು) ಗಂಟನ್ನು ಕರಿ ಕಂಬಳಿ ಗದ್ದಿಗೆ ಹಾಸಿ ಅದರ ಮೇಲೆ ಇಟ್ಟು ಗಂಡಿನ ಕೈಯಿಂದ ಪೂಜೆ ಮಾಡಿಸಿ ಕುಲದ ಮುಖ್ಯಸ್ಥರಾದ ಸಮೇದಾಸರಿ, ಗೂಡದಾಸರಿ, ಪಿನ್ನಪೆದ್ದ, ಕೊಂಡ ಕಾಡು, ಗುಡಿಗಾಡು ಗ್ರಾಮದ ದೊಡ್ಡ ಯಜಮಾನ

ಚಿಕ್ಕ ಯಜಮಾನ ಮತ್ತು ಅಲ್ಲಿ ನೆರೆದವರ ಸಮ್ಮುಖದಲ್ಲಿ ಬಿಚ್ಚಿ ಅಡಿಕೆಯನ್ನು ಹರಡಿ ಅದರ ಮೇಲೆ ಒಂದು ವೀಳ್ಯದೆಲೆಯನ್ನು ಹಾಕಿ ಆ ಎಲೆಯ ಮೇಲೆ ಮದುಮಗನ ಕೈಯಿಟ್ಟು ತನಗೆ ಎಷ್ಟು ಸಾಧ್ಯವೋ ಅಷ್ಟು ಅಡಿಕೆಯನ್ನು ಬಾಚಿಕೊಳ್ಳಬೇಕು. ನಂತರ ಆ ಗೊಡ ಮುಡುಪಿನ ಜೊತೆಗೆ ಮತ್ತಷ್ಟು ಅಡಿಕೆ ಮತ್ತು ಎಲೆಯನ್ನು ಸೇರಿಸಿ ನೆರೆದ ಕುಲದ ಪ್ರಮುಖರೆಲ್ಲರಿಗೂ, ಮ್ಯಾಳಂ (ನಾಟಕದ ಗುಂಪು) ಮದುವೆಯಲ್ಲಿ ಭಾಗವಹಿಸಿದ ಅಕ್ಕಪಕ್ಕದ ಊರಿನ ಕುಲಬಾಂಧವರೆಲ್ಲರಿಗೂ ಹಂಚುತ್ತಾರೆ. ಇದು ತೀರಾ ಗೌರವ ಮತ್ತು ಮರ್ಯಾದೆಯ ಪ್ರಶ್ನೆಯಾಗಿದ್ದು ಯಾರಿಗೂ ತಪ್ಪಿಸುವಂತಿಲ್ಲ. ಒಂದು ಪಕ್ಷ ಮದುವೆಯ ಊಟ ಸಿಗದಿದ್ದರೂ ಪರವಾಗಿಲ್ಲ, ಆದರೆ ಈ ಮರ್ಯಾದೆ ಎಂಬ ಎಲೆ–ಅಡಿಕೆ ಕಡ್ಡಾಯವಾಗಿ ಹಂಚಿಕೆಯಾಗಲೇಬೇಕು.

ಶಿವಮೊಗ್ಗ ಜಿಲ್ಲೆ ಶಿಕಾರಿಪುರ ತಾಲೂಕಿನಲ್ಲಿ ಮದುವೆ ಇಳಿವುಶಾಸ್ತ್ರ ಪದ್ಧತಿ ಹೀಗಿದೆ.

೧. ಆಚಾರ್ಯಲೊಳ್ಳು ಗುರು ವಿಳ್ಯಾಮಿನಿ ಪೂಜಸೇಸಿ ಅನ್ನಿ ಇಳ್ಯಾಲುಕು ಪಂಚಿಯಿಯ್ಯಾಲಿ.

೨. ನೆಚಪ್ಯೆನೊಳ್ಳು ಕಟ್ಟಾ ಇಂಟಿ ಆಚಾರ್ಯಲೊಳ್ಳು ವಿಳ್ಯಾಮಿನಿ ಎತ್ತಿ ಇಯ್ಯಾಲಿ.

೩. ಕಟ್ಟಿಇಂಟಿ ಆಚಾರ್ಯಲೊಳ್ಳು ವಕ್ಕ ವೀಳ್ಯಾಮಿನಿ ನೇಚಿಪ್ಯೆನೊಳ್ಳುಕಿ ಎತ್ತಿ ಇಯ್ಯಾಲಿ.

೪. ಆಚಾರ್ಯಲೊಳ್ಳು ಮ್ಯೆಲಗಾನೊಳ್ಳುಕಿ ೧೨ ಆಕಲು ೧೨ ವಕ್ಕಲು ಎತ್ತಿ ಇಯ್ಯಾಲಿ.

೫. ಮ್ಯೆಲಗಾನೊಳ್ಳುಕಿ ೬ ಆಕಲು ೬ ವಕ್ಕಲು ಪಾಯಲೊಳ್ಳುಕಿ ಎತ್ತಿ ಇಯ್ಯಾಲಿ.

(ಮಾಹಿತಿದಾರರು: ವೆಂಕಟೇಶ್, ಕೆಂಗಟ್ಟೆ, ಶಿಕಾರಿಪುರ ತಾ.)

ಈ ಎಲ್ಲಾ ಶಾಸ್ತ್ರಗಳು ಮುಗಿದ ನಂತರ ಗಂಡು ಮತ್ತು ಹೆಣ್ಣನ್ನು ಬೀಳ್ಕೊಡುವ ಕಾರ್ಯಕ್ರಮ ನಡೆಯುತ್ತದೆ. ಹೆಣ್ಣಿನ ಕಡೆಯವರು ಆ ಊರಿನ ಅಂಕದಲ್ಲಿ ನೆರೆದು ಹೆಣ್ಣಿನ ಕೈ ಹಿಡಿದು 'ಇವಳು ನಮ್ಮ ಮಗಳಲ್ಲ ನಿಮ್ಮ ಮಗಳು' ಎಂದು ಹೇಳಿ ಗಂಡಿನ ಕಡೆಯವರಿಗೆ ಒಪ್ಪಿಸುತ್ತಾರೆ. ಮದುವೆಯಾದ ೫ ಅಥವಾ ೯ ದಿನಗಳಿಗೆ ಗಂಡಿನ ಮನೆಯಲ್ಲಿ ಬೀಗರ ಔತಣ ನಡೆಯುತ್ತದೆ. ಅಂದು ಹೆಣ್ಣಿನ ಕಡೆಯವರಿಗೆ ವಿಶೇಷವಾದ ಮಾಂಸದಡಿಗೆ ಮಾಡಿ ಉಣಬಡಿಸುತ್ತಾರೆ. ನಂತರ ಹೆಣ್ಣು ಮತ್ತು ಗಂಡನ್ನು ಹುಡುಗಿಯ ತವರು ಮನೆಗೆ ಕರೆದುಕೊಂಡು ಹೋಗುತ್ತಾರೆ. ೩ನೇ ಅಥವಾ ೫ನೇ ದಿನಕ್ಕೆ ಹೆಣ್ಣಿನ ಮನೆಯಲ್ಲಿ ಪ್ರಸ್ಥ ಅಥವಾ ನೆರವಿ ಶಾಸ್ತ್ರ ಮಾಡುತ್ತಾರೆ.

**ಏಕಪತ್ನಿತ್ವ :** ಏಕಪತ್ನಿಯನ್ನು ಹೊಂದುವುದು ಈ ಸಮುದಾಯದ ಆದರ್ಶ ಆಗಿತ್ತು. ಒಂದು ಸಮಾಜವು ಏಕಪತ್ನಿತ್ವವನ್ನು ಆದರ್ಶವಾಗಿಟ್ಟುಕೊಂಡರೆ ಇನ್ನೊಂದು ಸಮಾಜ ಬಹುಪತ್ನಿತ್ವಕ್ಕೆ ಮನ್ನಣೆ ಕೊಡುತ್ತದೆ. ರಾಜಮಹಾರಾಜರ ಕಾಲದಿಂದಲೂ ಈ ಬಹುಪತ್ನಿತ್ವ ವ್ಯವಸ್ಥೆ ಅಸ್ತಿತ್ವದಲ್ಲಿದ್ದದನ್ನು ಭಾರತೀಯ ಸಮಾಜದಲ್ಲಿ ಕಾಣಬಹುದು. ದೊಂಬಿದಾಸ ಸಮುದಾಯದಲ್ಲಿ ವಿರಳವಾಗಿ ಬಹುಪತ್ನಿತ್ವ ಜಾರಿಯಲ್ಲಿತ್ತು.

**ಅಂತರ್ಜಾತಿ ವಿವಾಹ :** ಜ್ಯಾತ್ಯಾತೀತ ಮನೋಭಾವದ ಈ ಸಮುದಾಯದಲ್ಲಿ

ಅಂತರ್ಜಾತಿ ವಿವಾಹಕ್ಕೆ ಅವಕಾಶವಿದೆ. ಆದರೆ ಕುಲಪದ್ಧತಿಯಂತೆ ಬೇರೆ ಜಾತಿಯ ಗಂಡು ಅಥವಾ ಹೆಣ್ಣನ್ನು ಮದುವೆಯಾದರೆ ಜಾತಿ (ಕುಲ) ಒಳಕ್ಕೆ ತೆಗೆದುಕೊಳ್ಳುವ ಸಂಪ್ರದಾಯ ಇದೆ. ಇದನ್ನು 'ಕುಲಕ್ಕೆ ತೆಗೆದುಕೊಳ್ಳುವುದು' ಎನ್ನುತ್ತಾರೆ. 'ಗೋಷ್ಠಿ' ಮಾಡುವ ಮೂಲಕ ಜಾತಿಗೆ ಸೇರಿಸಿಕೊಳ್ಳುತ್ತಾರೆ. ಈ ಗೋಷ್ಠಿ ಶಾಸ್ತ್ರವನ್ನು 'ಗೂಡದಾಸರಿ' ನೇತೃತ್ವದಲ್ಲಿ ನೆರವೇರಿಸುತ್ತಾರೆ. ಜಾತಿಗೆ ಸೇರಿಸಿಕೊಳ್ಳ ಬೇಕಾದ ಹೆಣ್ಣು ಅಥವಾ ಗಂಡನ್ನು ಪಂಚತೀರ್ಥ(ತುಳಸಿ ಬೇವಿನಕಡ್ಡಿ, ಗಂಧೋಧಕ, ಚಿನ್ನ, ಗೋಮೂತ್ರ)ದಿಂದ ಶುದ್ಧೀಗೊಳಿಸಿ ಚಿನ್ನ ಅಥವಾ ಬೇವಿನ ಕಡ್ಡಿಯನ್ನು ಬೆಂಕಿಯಲ್ಲಿ ಸುಟ್ಟು ನಾಲಿಗೆಗೆ ಮುಟ್ಟಿಸುತ್ತಾರೆ. ಚಕ್ರಾಂಕಿತ ಮುದ್ರೆಯನ್ನು ಬೆರಣಿಯ ಕುರುಳಲ್ಲಿ ಕಾಯಿಸಿ ಬುಜದ ಮೇಲೆ ಮುದ್ರೆ ಒತ್ತುವುದರ ಮೂಲಕ ಘೋಷ್ಠಿ ಮಾಡುತ್ತಾರೆ. ಈ ಸಮಾರಂಭದಲ್ಲಿ 'ಕಟ್ಟೆ ಮನೆಯ' ಮುಖ್ಯಸ್ಥರೆಲ್ಲರೂ ಸೇರಿರುತ್ತಾರೆ. ಅಂದು ಕುಲಸ್ಥರೆಲ್ಲರಿಗೂ ಮಾಂಸದ ಊಟದ ವ್ಯವಸ್ಥೆ, ಹೆಂಡ, ಭಂಗಿಸೊಪ್ಪಿನ ವ್ಯವಸ್ಥೆ ಮಾಡಬೇಕಾಗಿರುತ್ತದೆ. ಈ ವಿಧಿವಿಧಾನಗಳು ಮುಗಿದ ನಂತರ ಇವರಿಗೆ ಸಮುದಾಯದ ಒಳಗೆ ಸಲ್ಲುವ ಎಲ್ಲಾ ಗೌರವ ಮರ್ಯಾದೆಗಳು ದೊರೆಯುತ್ತವೆ.

**ವಿಧವಾ ವಿವಾಹ**

ಸಮುದಾಯದಲ್ಲಿ 'ಕೂಡಿಕೆ' ಎಂಬ ವಿವಾಹ ಪದ್ಧತಿಯುಂಟು. ಹೆಂಡತಿ ಸತ್ತವನು ಅಥವಾ ಗಂಡಸತ್ತವಳು ಬೇರೆ ಮದುವೆಯಾಗಬಹುದು. ಇದಕ್ಕೆ 'ಕೂಡಿಕೆ' ಎಂದು ಕರೆಯುತ್ತಾರೆ. ಈ ರೀತಿ ಕೂಡಿಕೆ ಮಾಡಿಕೊಂಡವನು ಕುಲ ಪಂಚಾಯಿತಿಗೆ ೨೪ವರ (೧ ವರಕ್ಕೆ ೩ ೧/೨ ರೂಪಾಯಿ) ಈಡು ಕಟ್ಟಿ ಕೊಡಬೇಕು. ಸ್ವಜಾತಿಯಾದರೆ ಈಡು ಕಟ್ಟುವ ಅಗತ್ಯವಿಲ್ಲ. ಈ ಕೂಡಿಕೆ ಮದುವೆ ಸಂಪ್ರದಾಯದಲ್ಲಿ ಬಹಳ ಹಿಂದೆ ಹೆಣ್ಣಿಗೆ ಗಂಡು ತಾಳಿ ಕಟ್ಟುವಂತಿರಲಿಲ್ಲ. ಬದಲಾಗಿ ಬೇರೊಬ್ಬ ವಿಧವೆಯಿಂದ ಈಗ ಮರು ವಿವಾಹವಾಗುತ್ತಿರುವ ವಧುವಿನ ಕೊರಳಿಗೆ ಬಾಗಿಲ ಹಿಂದೆ ನಿಲ್ಲಿಸಿ ತಾಳಿಕಟ್ಟಿಸುತ್ತಿದ್ದರು. ನಂತರ ಅಲ್ಲಿ ಭಾಗವಹಿಸಿದ ಕುಲಸ್ಥರಿಗೆ ಊಟ ಮತ್ತು ಹೆಂಡದ ಸಂತರ್ಪಣೆ ಇರುತ್ತಿತ್ತು.

**ವಿವಾಹ ವಿಚ್ಛೇದನ**

ಪತಿ ಹಾಗೂ ಪತ್ನಿಯ ದುರ್ನಡತೆಗಾಗಿ ವಿಚ್ಛೇದನಗಳು ನಡೆಯುತ್ತವೆ. ಪತ್ನಿ ಬೇರೆಯವರ ಜೊತೆ ಅನ್ಯೆತಿಕ ಸಂಬಂಧ ಇಟ್ಟುಕೊಂಡಿದ್ದರೆ ದುರ್ನಡತೆ ಪ್ರದರ್ಶಿಸಿದರೆ ಪತಿ ಆಕೆಯ ಕುತ್ತಿಗೆಗೆ ಕಟ್ಟಿರುವ ತಾಳಿ ಕಿತ್ತುಕೊಂಡು ಕುಲಸ್ಥರಿಗೆ ದಂಡ ನೀಡುತ್ತಾನೆ. ಕುಲಕ್ಕೆ ದಂಡ ನೀಡಿದರೆ ವಿಚ್ಛೇದನವಾದಂತೆ ಆಕೆ/ಆತ ಇಷ್ಟಪಟ್ಟರೆ ಪುನರ್ ವಿವಾಹವಾಗಬಹುದು. ಇದನ್ನು ಸಹ 'ಕೂಡಿಕೆ' ಎನ್ನುತ್ತಾರೆ.

# ೫

# ಆರಾಧನೆ ಆಚರಣೆ ನಂಬಿಕೆ

## ಜನನ

ಹುಟ್ಟು ಆಕಸ್ಮಿಕವಾದ ಒಂದು ಘಟನೆ. ಯಾರು ಸಹ ಇಂತಹದೇ ಜನಾಂಗದಲ್ಲಿ ಹುಟ್ಟಬೇಕೆಂದು ಬಯಸಿ ಹುಟ್ಟುವುದಿಲ್ಲ. ಈ ಸಮುದಾಯ ಜನನ ಕ್ರಿಯೆಯನ್ನು ತುಂಬಾ ಸಂತೋಷದಿಂದ ಸ್ವಾಗತಿಸುತ್ತದೆ. ಗರ್ಭವತಿಯಾದ ಹೆಣ್ಣುಮಗಳ ಸುಖ ಪ್ರಸವಕ್ಕಾಗಿ ಕೆಲವು ಮುನ್ನೆಚ್ಚರಿಕೆ ಕ್ರಮಗಳನ್ನು ತೆಗೆದು ಕೊಳ್ಳುತ್ತಾರೆ. ಗರ್ಭವತಿಯ ಪತಿ ತನ್ನ ಹೆಂಡತಿಯ ಸುಖ ಪ್ರಸವಕ್ಕಾಗಿ ಆರೈಸುತ್ತಾನೆ. ಈ ಸಮುದಾಯದಲ್ಲಿರುವ ನಂಬಿಕೆಯಂತೆ ಗರ್ಭಾವಸ್ಥೆಯ ಅವಧಿಯಲ್ಲಿ ಪತಿಯು ಯಾವುದೇ ಪ್ರಾಣಿಯನ್ನು ಕೊಲ್ಲುವುದು, ಕತ್ತರಿಸುವುದು, ಸತ್ತವರನ್ನು ಸಾಗಿಸುವುದು, ಗಡ್ಡ, ಮೀಸೆ, ಹಾಗೂ ತಲೆ ಕೂದಲನ್ನು ತೆಗೆಸುವುದನ್ನು ಮಾಡುವುದಿಲ್ಲ. ಗರ್ಭಿಣಿಯ ಬಯಕೆ, ಆಸೆ, ಆಕಾಂಕ್ಷೆಗಳನ್ನು ತಪ್ಪದೇ ಪೂರೈಸಲಾಗುತ್ತದೆ. ಸುಖ ಪ್ರಸವಕ್ಕೆ ಪೂರ್ವಭಾವಿಯಾಗಿ ಆಕೆಯ ಮನೋಸ್ಥಿತಿ ಆರೋಗ್ಯ ಪೂರ್ಣವಾಗಿ, ಉಲ್ಲಾಸಭರಿತವಾಗಿ ಇರುವಂತೆ ನೋಡಿ ಕೋಳ್ಳಲಾಗುತ್ತದೆ. ಚೊಚ್ಚಲು ಹೆರಿಗೆಯನ್ನು ಸಾಮಾನ್ಯವಾಗಿ ತಾಯಿಯ ಮನೆಯಲ್ಲಿ ಆಗುವಂತೆ ನೋಡಿಕೊಳ್ಳುತ್ತಾರೆ. ಈ ಸಂದರ್ಭದಲ್ಲಿ ತಾಯಿ ಜೊತೆಯಲ್ಲಿರ ಬೇಕೆಂದು ಹೆಣ್ಣು ಮಕ್ಕಳು ಬಯಸುವುದು ಸಹಜ.

ದಿನ ತುಂಬಿ ಜನನದ ಕ್ರಿಯೆ ಪ್ರಾರಂಭವಾಗದಿದ್ದರೆ ಕೆಲವು ಮನೆ ಮದ್ದುಗಳನ್ನು ಮಾಡಿ ಕುಡಿಸುತ್ತಾರೆ. ಹೆರಿಗೆ ಮಾಡಿಸುವ ಜವಾಬ್ದಾರಿಯನ್ನು ಸಮುದಾಯದಲ್ಲಿನ ಅನುಭವಸ್ಥ ಸೂಲಗಿತ್ತಿಯರು ಮಾಡುತ್ತಾರೆ. ಜನನವಾದ ನಂತರ ಮೊದಲು ಹೊಕ್ಕಳಬಳ್ಳಿಯನ್ನು ಹರಿತವಾದ ಚಾಕು ಅಥವಾ ಬ್ಲೇಡಿನಿಂದ ಕೊಯ್ದು ದಾರದಿಂದ ಕಟ್ಟುತ್ತಾರೆ. ಮಗುವಿಗೆ ಬಿಸಿನೀರಿನಿಂದ ಮೈತೊಳೆದು, ಮಲಗಿಸಿ ಎಳ್ಳೆಣ್ಣೆ ದೀಪದಿಂದ ಸೂಜಿ ಕಾಯಿಸಿ ಮಗುವಿನ ಒಕ್ಕಳದ ಸುತ್ತ ಹಣೆ ಭಾಗ, ಮುಂಗೈ, ಮುಂಗಾಲುಗಳಿಗೆ ಚಿಟಕೆ ಹಾಕುತ್ತಾರೆ. ಇದರಿಂದ ಮುಂದೆ ಮಗುವಿಗೆ ರೋಗ ನಿರೋಧಕ ಶಕ್ತಿ ಹೆಚ್ಚಾಗುತ್ತದೆ ಎಂಬುದು ಇವರ ನಂಬಿಕೆ. ಹೆರಿಗೆಯಾದ ತಕ್ಷಣ ಮೊದಲು ಮಗುವನ್ನು ಮೊರಕ್ಕೆ ಹಾಕುವುದು ಪದ್ಧತಿ. ಮನೆಯಲ್ಲಿ ದವಸ ಧಾನ್ಯಗಳನ್ನು ಸ್ವಚ್ಛ ಮಾಡಲು ಬಳಸುವ ಮೊರದ ಮೇಲೆ ಒಂದು ಶುಭ್ರವಾದ ಬಟ್ಟೆ ಹಾಸಿ ಅದರ ಮೇಲೆ ಮಗುವನ್ನು

ಮಲಗಿಸುತ್ತಾರೆ. ತಾಯಿ ಮತ್ತು ಮಗುವಿಗೆ ಶೀತವಾಗದಿರಲೆಂದು ನೆಲ್ಲುಲ್ಲನ್ನು (ಭತ್ತದ ಹುಲ್ಲು) ನೆಲಕ್ಕೆ ಹಾಸಿ ಅದರ ಮೇಲೆ ಮೆತ್ತನೆಯ ಬಟ್ಟೆ ಕಂಬಳಿಗಳನ್ನು ಹಾಸಿ ಮಲಗಿಸುತ್ತಾರೆ. ಮಗು ಜನಿಸಿದ ಏಳು ಅಥವಾ ಒಂಬತ್ತನೇ ದಿನಕ್ಕೆ ಸೂತಕ ತೆಗೆಯುವ ಮತ್ತು ಹೆಸರಿಡುವ ಶಾಸ್ತ್ರ ಮಾಡುತ್ತಾರೆ. ಅಂದು ಮನೆಗೆ ಸುಣ್ಣ ಬಳಿದು, ಗುಡಿಸಿ, ಸಾರಿಸಿ, ಹೊಸಮಡಿಕೆ ತಂದು ದಾಸಯ್ಯನನ್ನು ಕರೆಸಿ ಶಂಖ, ಜಾಗಟೆ ನುಡಿಸಿ ಕುಲದೇವರ ಹೆಸರೇಳಿ ನಾಮಕರಣ ಮಾಡುತ್ತಾರೆ. ನಂತರ ಸಿಹಿ ಊಟದ ವ್ಯವಸ್ಥೆ ಇರುತ್ತದೆ. ಕನಿಷ್ಠ ೩ ತಿಂಗಳು ಬಾಣಂತನ (ಆರೈಕೆ) ಮಾಡುತ್ತಾರೆ. ಅಲ್ಲಿಯವರೆಗೆ ಬಾಣಂತಿ ತಣ್ಣೀರು ಮುಟ್ಟುವಂತಿಲ್ಲ. ಮಗುವಿಗೆ ತಾಯಿ ಹಾಲಿನ ಜೊತೆಗೆ ಇತರೇ ಆಹಾರವನ್ನು ನೀಡಿ ಆರೈಕೆ ಮಾಡುತ್ತಾರೆ. ಸಾಮಾನ್ಯವಾಗಿ ರಾಗಿ, ಗೋಧಿ ಕಾಳುಗಳಿಂದ ತಯಾರಿಸಿದ ಉಗ್ಗಿ ಮಾಡಿ ತಿನ್ನಿಸುತ್ತಾರೆ. ಜೊತೆಗೆ ಹಸುವಿನ ತುಪ್ಪ, ಹಣ್ಣು ಹಂಪಲನ್ನು ನೀಡುತ್ತಾರೆ.

**ಋತುಮತಿ :** ಹೆಣ್ಣುಮಕ್ಕಳು ಹದಿ ವಯಸ್ಸಿಗೆ ಬಂದಾಗ ಪ್ರಕೃತಿ ದತ್ತವಾಗಿ ಋತುಮತಿಯಾಗುವುದು ಸಹಜ. ಹೆಣ್ಣು ಮಗು ಋತುಮತಿಯಾಗಿರುವ ಸೂಚನೆ ಕಂಡ ತಕ್ಷಣ ಸ್ನಾನ ಮಾಡಿಸಿ ಹಾಲು ಅನ್ನ ಉಣಬಡಿಸುತ್ತಾರೆ. ಒಳ್ಳೇ ದಿನ, ಗಳಿಗೆ ನೋಡಿ. 'ಗುಡ್ಲು ಕೂಡುವ' ಶಾಸ್ತ್ರ ಮಾಡುತ್ತಾರೆ. ಮನೆಯ ಒಳಗೆ ಒಂದು ಮೂಲೆಯಲ್ಲಿ ತೆಂಗಿನ ಗರಿ, ಲಕ್ಕಿಸೊಪ್ಪು, ಹತ್ತಿಸೊಪ್ಪು, ಮತ್ತು ಹಲಸಿನ ಸೊಪ್ಪನ್ನು ಬಳಸಿ ಗುಡಿಸಲು ನಿರ್ಮಾಣಮಾಡುತ್ತಾರೆ. ಈ ಗುಡ್ಲಿಗೆ ಪೂಜೆ ಮಾಡಿ ಸೋದರ ಮಾವನಿಗೆ ಎಲೆಯಲ್ಲಿ ಅನ್ನ ಬಡಿಸಿ ಹುಚ್ಚೆಳ್ಳೆಣ್ಣೆ ಹಾಕಿ ಊಟ ಮಾಡಿಸುತ್ತಾರೆ. ಅದೇ ಎಲೆಯಲ್ಲಿಯೇ ಹುಡುಗಿಗೂ ಊಟ ಮಾಡಿಸುತ್ತಾರೆ. ಪೂಜೆ ಮಾಡಿಸಿ ನಂತರ ಒಂದು ಚಿಕ್ಕ ಹುಡುಗನನ್ನು ಗುಡ್ಲಿಗೆ ಕೂಡಿ ಹೊರಕ್ಕೆ ಕರೆಯುತ್ತಾರೆ. ಗುಡಿಸಿಲಿನ ಒಳಗೆ ಹಸೆ ಮಣೆ ಹಾಕಿ ಹುಡುಗಿಯನ್ನು ಕೂರಿಸಿ ೫ ತರಹದ ತಟ್ಟೆ ತುಂಬಿ ೫ ಜನ ಮುತ್ತೈದೆಯರಿಂದ ಸೋಗಲು(ಸೋಬಾನೆ)ಶಾಸ್ತ್ರ ಮಾಡಿಸುತ್ತಾರೆ. ನಂತರ ಆರತಿ ಮಾಡುತ್ತಾರೆ. ಈ ೫ ತಟ್ಟೆಗಳಲ್ಲಿ ಬೇರೆ ಬೇರೆ ತರಹದ ಹಣ್ಣುಗಳು, ಕಾಯಿ, ಎಲೆ ಅಡಿಕೆ, ಸೀರೆ, ರವಿಕೆ, ತಂಬಿಟ್ಟು, ಎಳ್ಳಿನ ಉಂಡೆ (ಚಿಕಣಿ) ಕೊಬ್ಬರಿ, ಬೆಲ್ಲ, ಇವುಗಳನ್ನು ತುಂಬಿರುತ್ತಾರೆ.

ಆದಿನ ಇಡೀ ರಾತ್ರಿ ಹುಡುಗಿ ನಿದ್ರೆ ಮಾಡುವಂತಿಲ್ಲ. ರಾತ್ರಿಯೆಲ್ಲಾ ಹರಿಕಥೆ, ಭಜನೆ, ಲಾವಣಿ ಹಾಡು, ಅಣ್ಣ ತಂಗಿ ಕಥೆ ಹೀಗೆ ವಿವಿಧ ರೀತಿಯ ಕಾರ್ಯಕ್ರಮಗಳು ಇರುತ್ತವೆ. ಬೆಳಿಗ್ಗೆ ಉದ್ದಿನ ಕಾಳು, ಹಾಲು ಮೈನೆರೆದ ಹೆಣ್ಣಿಗೆ ನೀಡಲಾಗುತ್ತದೆ. ಅನ್ನದ ಜೊತೆ ಹುಚ್ಚೆಳ್ಳೆಣ್ಣೆ ಹಾಕಿ ಊಟ ಮಾಡಿಸುತ್ತಾರೆ. ಹೆಣ್ಣು ಮಗು ಶಕ್ತಿಯುತವಾಗಿ ಬೆಳೆಯಲು ಕೊಬ್ಬರಿ ತುರಿದು ತುಪ್ಪದಲ್ಲಿ ನೆನೆಸಿ ಕೊಡಲಾಗುತ್ತದೆ. ಜೊತೆಗೆ ಕೊಬ್ಬರಿ, ಬೆಲ್ಲ, ಉದ್ದಿನ ಕಾಳು, ಹೆಸರು ಕಾಳು, ಮೆಂತ್ಯ ಬೇಯಿಸಿ ತಿನ್ನಲು ನೀಡುತ್ತಾರೆ. ಕನಿಷ್ಠ ೩ ತಿಂಗಳವರೆಗೆ ಈ ರೀತಿ ಆರೈಕೆ ಮಾಡುತ್ತಾರೆ. ಪ್ರತಿದಿನ ಬಿಸಿನೀರಿನಲ್ಲಿ ಸ್ನಾನ ಮಾಡಿಸುತ್ತಾರೆ. ಶೀತವಾಗದಿರಲೆಂದು ಕೆಂಡದಮೇಲೆ ಹಾಲುಮಡ್ಡಿ ಮತ್ತು ಸಾಂಬ್ರಾಣಿ

ಹಾಕಿ ತಲೆಗೆ ಶಾಖ ಕೊಡುತ್ತಾರೆ. ಗುಡ್ಲು ಕೂಡಿದ ಹದಿನಾರು ದಿನದ ನಂತರ ಸೂತಕ ಕಳೆಯಲು ಮನೆ ಗುಡಿಸಿ, ಸಾರಿಸಿ, ಪೂಜೆ ಮಾಡಿ ಗಂಗಾಸ್ಥಾನಕ್ಕೆ ಕರೆದುಕೊಂಡು ಹೋಗಿ ತರ್ಪಣ ಬಿಡಿಸಿ ಸೂತಕ ಕಳೆಯುತ್ತಾರೆ. ಈ ಶಾಸ್ತ್ರ ಮುಗಿಯುವವರೆಗೆ ಮಾಂಸಾಹಾರ ಕೊಡುವಂತಿಲ್ಲ. ಸೂತಕ ಕಳೆದ ನಂತರ ನಾಟಿ ಕೋಳಿ ಸಾರು ಮಾಡಿ ಹುಡುಗಿಗೆ ಊಟ ಹಾಕುತ್ತಾರೆ. ಗುಡ್ಲು ಕೂಡುವ ಶಾಸ್ತ್ರದ ಸಂದರ್ಭದಲ್ಲಿ ನೆಂಟರಿಷ್ಟರು ಸಂಬಂಧಿಕರು, ಸ್ನೇಹಿತರು ಹುಡುಗಿಗೆ ಕೊಬ್ಬರಿ, ಬೆಲ್ಲ, ಹೊಸಬಟ್ಟೆ, ಹಸಿರು ಕಾಳು, ಉದ್ದಿನಕಾಳು, ಎಲೆ ಅಡಿಕೆ, ಹಣ್ಣು, ತುಪ್ಪ ಇವುಗಳನ್ನು ಉಡುಗೊರೆಯಾಗಿ ನೀಡುತ್ತಾರೆ. ಹೀಗೆ ಮೂರು ತಿಂಗಳ ಆರೈಕೆ ಮಾಡುತ್ತಾರೆ.

**ಸೀಮಂತ ಕಾರ್ಯ :** ದೊಂಬಿದಾಸರಲ್ಲಿ ಗರ್ಭಿಣಿಯಾದ ಮಹಿಳೆಗೆ ಸೀಮಂತದಂತಹ ವಿಶೇಷವಾದ ಕಾರ್ಯಕ್ರಮ ಇರುವುದಿಲ್ಲ. ಹೆಣ್ಣು ಮೊದಲು ಬಸುರಿಯಾದಾಗ ಹೆರಿಗೆ ಸಮಯದಲ್ಲಿ ಸುಖಪ್ರಸವಕ್ಕಾಗಿ ಕುಲದೇವರನ್ನು ಪ್ರಾರ್ಥಿಸಿ "ತಡೆಕಾಯಿ" ಎಂಬ ಹೆಸರಿನಿಂದ ಒಂದು ತೆಂಗಿನ ಕಾಯಿಯನ್ನು ನೀವಳಿಸಿ ಒಡೆಯುತ್ತಾರೆ. ಹೆಣ್ಣು ಮಗಳನ್ನು ಹೆರಿಗೆಗಾಗಿ ತಾಯಿ ಮನೆಗೆ ಕಳುಹಿಸುವ ಪದ್ಧತಿ ಇದೆ.

## ಮರಣ

**ಶವಸಂಸ್ಕಾರ:** ಈ ಸಮುದಾಯದಲ್ಲಿ ಸಾವು ಸಂಭವಿಸಿದ ತಕ್ಷಣ ಶವವನ್ನು ಮನೆ ಯಿಂದ ಹೊರತಂದು ಜಗುಲಿ ಅಥವಾ ಪಡಸಾಲೆಯಲ್ಲಿ ಉತ್ತರ ದಕ್ಷಿಣಾಭಿಮುಖವಾಗಿ ಮಲಗಿಸುತ್ತಾರೆ. ಮೊದಲಿಗೆ ಶವದ ಕಾಲು ಮುರಿದು (ಮಡಚಿ) ಬಿಳಿ ಬಟ್ಟೆ ಹೊದಿಸಿ ತಲೆಯ ಹತ್ತಿರ ಕಳಸ ಇಟ್ಟು ಎಣ್ಣೆ ದೀಪ, ಗಂಧದ ಕಡ್ಡಿ ಹಚ್ಚಿಡುತ್ತಾರೆ. ತೆರೆದ ಬಾಯಿಗೆ ರುದ್ರಾಕ್ಷಿಮಣಿ ಅಥವಾ ಎಲೆ ಅಡಿಕೆ ಜಜ್ಜಿ ತುಂಬುತ್ತಾರೆ. ಹಣೆಗೆ ವಿಭೂತಿ ಕುಂಕುಮ ಇಟ್ಟು ಹೂವಿನ ಮಾಲೆ ಹಾಕುತ್ತಾರೆ. ಸಾವಿನ ಸಮಾಚಾರವನ್ನು ಹತ್ತಿರದ ಸಂಬಂಧಿಗಳು ಬಂಧು ಬಳದವರಿಗೆ ಮುಟ್ಟಿಸುತ್ತಾರೆ. ಮನೆಯ ಮುಂಭಾಗದಲ್ಲಿ ೩ ಕಲ್ಲು ಇಟ್ಟು ಅದರ ಮೇಲೆ ನೀರು ಕಾಯಿಸುವ ಹಂಡೆ ಇಟ್ಟು ಉಗುರು ಬೆಚ್ಚಗೆ ಕಾಯಿಸಿ ಹೆಣಕ್ಕೆ ಸ್ನಾನ ಮಾಡಿಸುತ್ತಾರೆ. ಸತ್ತವರು ಗಂಡಾದರೆ ಹೆಂಡತಿಯನ್ನು; ಹೆಣ್ಣಾದರೆ ಗಂಡನನ್ನು ಪಕ್ಕದಲ್ಲಿ ಕೂರಿಸಿ ಪೂಜೆ ಮಾಡುತ್ತಾರೆ. ಬಂಧುಬಳಗದವರೆಲ್ಲರೂ ಹೆಣಕ್ಕೆ ಪೂಜೆ ಮಾಡಿ ಶವವನ್ನು ಅಲಂಕರಿಸಿ ಚಟ್ಟದ ಮೇಲೆ ಕೂರಿಸಿ ಹೂಳುವ ಜಾಗಕ್ಕೆ ಕೊಂಡೊಯ್ಯುತ್ತಾರೆ.

**ಶವಯಾತ್ರೆ :** ಅಲಂಕಾರಿತ ಕುರ್ಜು(ಚಟ್ಟ)ದಲ್ಲಿ ಹೆಣವನ್ನು ಕೂರಿಸಿ ಸಂಬಂಧಿಗಳು ಚಟ್ಟದ ನಾಲ್ಕೂ ಕಡೆಗೂ ಹೆಗಲು ಕೊಡುತ್ತಾರೆ. ಈ ಶವಯಾತ್ರೆಯ ಸಂದರ್ಭದಲ್ಲಿ ಪುರಿ, ಚಿಲ್ಲರೆ ನಾಣ್ಯ ಬೆರೆಸಿ ಹೆಣದ ಮೇಲೆ ಎರಚುತ್ತಾರೆ. ನೆಲಕ್ಕೆ ಬಿದ್ದ ಚಿಲ್ಲರೆ ನಾಣ್ಯವನ್ನು ಕೆಲವರು ಸಂಗ್ರಹಿಸಿಕೊಳ್ಳುವುದುಂಟು. ಈ ನಾಣ್ಯವನ್ನು ತೂತುಮಾಡಿ ಸಣ್ಣ ಮಕ್ಕಳ ಉಡದಾರಗಳಿಗೆ ಕಟ್ಟುತ್ತಾರೆ. ಇದರಿಂದ ಮಕ್ಕಳಿಗೆ ಭಯ, ಭೀತಿಗಳು ಇರುವುದಿಲ್ಲ ಎಂಬ ನಂಬಿಕೆ ಇದೆ. ಸಮಾಧಿ ಮಾಡುವ ಸ್ಥಳಕ್ಕೆ ತಲುಪುವುದರ

ಒಳಗೆ ಗುಂಡಿ ತೆಗೆದಿರಬೇಕು. ಶವಯಾತ್ರೆಯಲ್ಲಿ ಭಾಗವಹಿಸಿದ ಮಂದಿ ಸಮಾಧಿ ಸ್ಥಳ ತಲುಪುವವರೆಗೆ ಹೆಗಲು ಕೊಡುತ್ತಿರುತ್ತಾರೆ. ಸ್ನಾನಕ್ಕೆ ನೀರು ಕಾಯಿಸಿದ ಒಲೆಯ ಮೇಲೆ ಹೊಸ ಮಡಿಕೆಯಲ್ಲಿ ಸ್ವಲ್ಪ ಅಕ್ಕಿ ಹಾಕಿ ಅದರಲ್ಲಿ ಅರಿಶಿಣ ಪುಡಿ ಹಾಕಿ ಬೇಯಿಸುತ್ತಾರೆ. ಇದನ್ನು "ಪಿಂಡಾ ಕೂಡು" ಎನ್ನುತ್ತಾರೆ. ಈ ಪಿಂಡಾ ಕೂಡು ಮಡಿಕೆಯನ್ನು ಹೆಣದ ಜೊತೆ ಸಾಗಿಸಲು ೩ ಬಿದಿರಿನ ಕಡ್ಡಿಗಳಿಂದ ತ್ರಿಕೋನಾಕಾರದಲ್ಲಿ ಬಿಗಿದು ಅದನ್ನು ಹಿಡಿದುಕೊಳ್ಳಲು ದಾರ ಕಟ್ಟಿರುತ್ತಾರೆ. ಸತ್ತವನು ತಂದೆಯಾದರೆ ಹಿರಿಯಮಗ, ತಾಯಿಯಾದರೆ ಕಿರಿಯಮಗ, ಮಕ್ಕಳಿಲ್ಲದವರು ಅವಿವಾಹಿತರಾದರೆ ಅವರ ರಕ್ತಸಂಬಂಧಿಗಳ ಕೈಯಲ್ಲಿ ಪಿಂಡಾ ಕೂಡನ್ನು ಹಿಡಿಸುತ್ತಾರೆ. ಹೆಣ ಸಾಗಿಸುವ ನಡುವೆ ಊರಿಂದ ಆಚೆ ಸ್ಮಶಾನಕ್ಕಿಂತ ಮೊದಲು ಒಮ್ಮೆ ಹೆಣದ ಕುರ್ಜನ್ನು ಇಳಿಸುತ್ತಾರೆ. ಇದನ್ನು 'ದಿಂಪಡು ಕಲ್ಲಾಮು' ಎನ್ನುತ್ತಾರೆ. ಈ ಸ್ಥಳದಲ್ಲಿ ಸಂಬಂಧಿಯಿಂದ ಪೂಜೆ ಮಾಡಿಸಿ 'ಪಿಂಡಾಕೂಡು' ಮಡಿಕೆಯನ್ನು ಹೊಡೆದು ಬಾಯಿ ಬಡಿದುಕೊಂಡು ಹಿಂದಿರುಗಿ ನೋಡದೆ ಹೋಗುವಂತೆ ಹೇಳುತ್ತಾರೆ. ಅಲ್ಲಿಂದ ಮತ್ತೆ ಹೆಣವನ್ನು ಮುಂದಕ್ಕೆ ಸಾಗಿಸಿ ಗುಂಡಿ ಸಮೀಪ ಕೊಂಡೊಯ್ಯುತ್ತಾರೆ. ಉತ್ತರ-ದಕ್ಷಿಣಾಭಿಮುಖ ವಾಗಿ ಗುಂಡಿಯನ್ನು ತೋಡಿರುತ್ತಾರೆ. ಹೆಣದ ಚಟ್ಟವನ್ನು ಗುಂಡಿಯ ಸಮೀಪ ಉತ್ತರಕ್ಕೆ ಮುಖಮಾಡಿ ೩ ಸುತ್ತು ಸುತ್ತಿಸಿ. ಚಟ್ಟವನ್ನು ಕೆಳಕ್ಕಿಳಿಸಿ, ತೋಡಿದ ಗುಂಡಿಯಲ್ಲಿ ಬಾಳೆ ಎಲೆ ಹಾಸಿ ಪೂಜಾ ಸಾಮಾಗ್ರಿಗಳನ್ನಿಟ್ಟು ಒಳಗೆ ಗೂಡು ಮಾಡಿ ದೀಪ ಇಡುತ್ತಾರೆ. ವಿಧಿವತ್ತಾಗಿ ಪೂಜೆ ಪುರಸ್ಕಾರಗಳನ್ನು ಮಾಡಿ ಹೆಣವನ್ನು ಕುರ್ಜಿನಿಂದ ಬಿಚ್ಚಿ ಗುಂಡಿಗೆ ಇಳಿಸುತ್ತಾರೆ. ನಂತರ ಹೆಣದ ಮೇಲಿನ ಬಟ್ಟೆಗಳನ್ನು ತೆಗೆದು ಬಿಳಿಯ ಹೊಸಬಟ್ಟೆ ಹೊದಿಸಿ, ಎಲ್ಲರಿಗೂ ಅಂತಿಮ ದರ್ಶನ ಪಡೆಯುವಂತೆ ಸೂಚಿಸುತ್ತಾರೆ. ಮೊದಲಿಗೆ ಹತ್ತಿರದ ಸಂಬಂಧಿಕರಿಂದ ಮೂರು ಹಿಡಿಮಣ್ಣನ್ನು ಹಾಕಿಸುತ್ತಾರೆ. ನಂತರ ಅಲ್ಲಿ ಬಾಗವಹಿಸಿದ್ದ ಎಲ್ಲರೂ ಕುಣಿಗೆ ಮಣ್ಣು ಹಾಕುತ್ತಾರೆ. ನಂತರ ಗುಂಡಿತೆಗೆಯಲು ಬಳಸಿದ್ದ ಗುದ್ದಲಿಯನ್ನೆ ಬಳಸಿ ಗುಂಡಿಯನ್ನು ಮುಚ್ಚುತ್ತಾರೆ. ಮಣ್ಣನ್ನು ಸಮತಟ್ಟು ಮಡಿ ತಲೆಯ ಭಾಗದಲ್ಲಿ ತುಂಬೆ ಅಥವಾ ತುಳಸಿ ಗಿಡ ನೆಡುತ್ತಾರೆ. ಗುದ್ದಲಿಯ ಕಾವನ್ನು ತೆಗೆದು ಹಿಂದೆಮುಂದೆ ಮಾಡಿ ಸಮಾಧಿಯ ಅಕ್ಕಪಕ್ಕಕ್ಕೆ ಎಸೆದಾಡುತ್ತಾರೆ. ಕುರ್ಜಿಗೆ ಬೆಂಕಿ ಹಾಕುತ್ತಾರೆ.

ಮಣ್ಣು ಮಾಡಿದ ನಂತರ ಯಾರೂ ಹಿಂದಿರುಗಿ ನೋಡದೆ ಸಮೀಪದಲ್ಲಿರುವ ಯಾವುದಾದರು ಕೆರೆ, ಕಟ್ಟೆ ಬಾವಿಯಿಂದ ಜಲವನ್ನು ಮೈ ಮೇಲೆ ಪ್ರೋಕ್ಷಣೆ ಮಾಡಿ ಕೊಂಡು ಸಾವಿನ ಮನೆಗೆ ತೆರಳುತ್ತಾರೆ. ಜೀವ ಬಿಟ್ಟ ಜಾಗದಲ್ಲಿ ಒಂದು ದೀಪ ಹಚ್ಚಿ ಅಕ್ಕಿ ಕಾಳನ್ನು ಇಟ್ಟಿರುತ್ತಾರೆ. ಶವ ಸಂಸ್ಕಾರದಲ್ಲಿ ಭಾಗವಹಿಸಿದ್ದ ಎಲ್ಲರೂ ದೀಪ ವೀಕ್ಷಿಸಿ ಅಕ್ಕಿಯನ್ನು ಎಡಗೈಯಲ್ಲಿ ತೆಗೆದುಕೊಂಡು ಹಿಮ್ಮುಖವಾಗಿ ತಿರುಗಿ ಮನೆಯ ಮೇಲೆ ಹಾಕಿ ಹಿಂತಿರುಗುತ್ತಾರೆ.

**ಜೀವತಳಿ ಶಾಸ್ತ್ರ :** ಅಂದು ಸಂಜೆಗೆ ವ್ಯಕ್ತಿಜೀವ ಬಿಟ್ಟ ಸ್ಥಳದಲ್ಲಿ ಸಾರಿಸಿ ಕೋಳಿ

ಕೊಯ್ದು ಸಾಂಬಾರುಮಾಡಿ ಎಡೆ ಇಟ್ಟು, ಪೂಜೆಮಾಡಿ ಅಲ್ಲಿ ನೆರೆದವರೆಲ್ಲರೂ ಅದನ್ನು ಊಟಮಾಡುತ್ತಾರೆ. ಇದನ್ನೇ 'ಜೀವ ತಳಿಶಾಸ್ತ್ರ' ಎನ್ನುತ್ತಾರೆ. ಈದಾದ ೩ನೇ ದಿನಕ್ಕೆ ಚಿಕ್ಕ ತಿಥಿ ಕಾರ್ಯ ನಡೆಯುತ್ತದೆ. ಅಂದೂ ಸಹ ಕೋಳಿ ಕೊಯ್ದು ಅಡಿಗೆ ಮಾಡಿ ಎಡೆ ಇಟ್ಟು ಪೂಜೆ ಮಾಡುತ್ತಾರೆ. ಇದನ್ನು ಅವರ ಮನೆಯವರು ಹತ್ತಿರದ ಸಂಬಂಧಿಗಳು ಸೇರಿ ನೆರವೇರಿಸಕೊಳ್ಳುತ್ತಾರೆ.

**ಹಾಲು-ತುಪ್ಪ ಮತ್ತು ತಿಥಿಕಾರ್ಯ** : ಈ ಕಾರ್ಯವನ್ನು ಸತ್ತ ೧೧ನೇ ದಿನಕ್ಕೆ ನೆರವೇರಿಸುತ್ತಾರೆ. ಈ ಕಾರ್ಯಕ್ಕೆ ಕುಲಬಾಂದವರಿಗೆಲ್ಲರಿಗೂ ಆಹ್ವಾನ ನೀಡಿರುತ್ತಾರೆ. ಅಂದು ಬೆಳಿಗ್ಗೆ ಬಳಗಸ್ಥರೆಲ್ಲರೂ ಸಮಾಧಿಯ ಸ್ಥಳಕ್ಕೆ ತೆರಳುತ್ತಾರೆ. ಗುದ್ದದ ಮೇಲೆ ಸಮತಟ್ಟು ಮಾಡಿ ಬಾಳೆ ಎಲೆ ಹಾಸಿ ಅದರ ಮೇಲೆ ಹಣ್ಣು ಹಂಪಲುಗಳು, ತಿಂಡಿ ತಿನಿಸುಗಳನ್ನು ಹರಡಿ ಎಡೆಮಾಡುತ್ತಾರೆ. ಒಂದು ಎಳನೀರು ಕಾಯಿ ಕೊರೆದು ತೆಂಗಿನ ಮರದ ಕುರಂಬಳೆಯನ್ನು ಆ ರಂದ್ರಕ್ಕೆ ಸಿಕ್ಕಿಸಿ ಗುದ್ದದ ತಲೆಭಾಗದಲ್ಲಿ ಇಟ್ಟು ಎಲ್ಲರೂ ಪೂಜೆ ಮಾಡಿ ಹಾಲುತುಪ್ಪ ಬಿಡುತ್ತಾರೆ. ಗುದ್ದದ ಮೇಲಿರುವ ಎಡೆಯನ್ನು ಮೊದಲು ಕಾಗೆ ಹದ್ದುಗಳು ಬಂದು ತಿನ್ನಬೇಕು. ಒಂದು ಪಕ್ಷ ಪಕ್ಷಿಗಳು ಬರದಿದ್ದರೆ ಆ ಎಡೆಯನ್ನು ಗೋವಿಗೆ ತಿನಿಸಿ ಉಳಿದ ಭಾಗವನ್ನು ಅಲ್ಲಿ ನೆರೆದಿದ್ದವರೆಲ್ಲರಿಗೂ ಹಂಚುತ್ತಾರೆ. ಈ ಹಾಲು ತುಪ್ಪದ ಕಾರ್ಯ ಮುಗಿದ ನಂತರವೇ ರಾತ್ರಿ ತಿಥಿ ಊಟ ಪ್ರಾರಂಭವಾಗುತ್ತದೆ. (ಮರಿ ಕತ್ತರಿಸುವುದು ಅಡಿಗೆಗೆ ಸಿದ್ಧತೆ ಮುಂತಾದವು).

**ದಿಂಪಡು ಕಲ್ಲಾಮು ಶಾಸ್ತ್ರ** : 'ಪಿಂಡಾಕೂಡು' ಮಡಿಕೆಯನ್ನು ಒಡೆದ ಸ್ಥಳದಲ್ಲಿ ಮೂರು ಕಲ್ಲಿಟ್ಟು ಗುಡಿ ಮಾಡಿ ಮಾಂಸದ ಅಡಿಗೆಯನ್ನು ತಂದು ಎಡೆ ಹಾಕಿ. ಪೂಜೆ ಮಾಡುತ್ತಾರೆ. ಈ ಎಡೆ ಪ್ರಸಾದವನ್ನು ಅಲ್ಲಿ ನೆರೆದವರೆಲ್ಲರಿಗೂ ಹಂಚುತ್ತಾರೆ.

**ಕೋನೇಟು ಶಾಸ್ತ್ರ** : ದಿಂಪಡು ಕಲ್ಲಾಮು ಶಾಸ್ತ್ರ ಮುಗಿದ ನಂತರ ಈ ಶಾಸ್ತ್ರ ಪ್ರಾರಂಭವಾಗುತ್ತದೆ. ಕುಲದ ಮುಖ್ಯಸ್ಥ ಹಾಗೂ 'ಪಿನ್ನ ಪೆದ್ದ' ಇವರ ಸಮ್ಮುಖದಲ್ಲಿ ನೆರವೇರುತ್ತದೆ. ಕೋನೇಟು ಶಾಸ್ತ್ರ ಶವಸಂಸ್ಕಾರದ ದಿನ ಸಾಂಪ್ರದಾಯಿಕ ಕ್ರಿಯಾ ಕರ್ಮಾಧಿಗಳನ್ನು ನೆರವೇರಿಸಿದ ಮಗ ಅಥಾವ ಸಂಬಂಧಿ ತಲೆ ಕೂದಲು ತೆಗೆಸಿ ಕೊಳ್ಳಬೇಕಾಗುತ್ತದೆ. ಗಂಗಾ ಸ್ಥಾನಕ್ಕೆ ಪೂಜಾ ಸಾಮಾಗ್ರಿಗಳ ಜೊತೆ ಪಿನ್ನಪೆದ್ದ, ಕ್ಷೌರಿಕ, ಮತ್ತು ಸಂಬಂಧಿಕರು ತೆರಳಿ ಪೂಜೆಮಾಡಿದ ತರುವಾಯ ತಲೆಕೂದಲನ್ನು ತೆಗೆಸಲಾಗುತ್ತದೆ. ಜೊತೆಗೆ ರಕ್ತಸಂಬಂಧಿಗಳೂ ಸಹ ಕೂದಲು ತೆಗೆಸಿಕೊಳ್ಳುತ್ತಾರೆ. ಪಿನ್ನಪೆದ್ದ ಎಲ್ಲರಿಗೂ ನಾಮ ಬಳಿದು ಅವರ ಕುಲದ ಹಿರಿಯರ ವಂಶದ ಗುಣಗಾನ ಮಾಡುತ್ತಾನೆ.

ರಾತ್ರಿ ತಿಥಿಯ ಸಂಬಂಧವಾಗಿ ತಯಾರಿಸಿರುವ ಎಲ್ಲಾ ಆಹಾರ ಪದಾರ್ಥಗಳನ್ನು ಎಡೆ ಇಡುತ್ತಾರೆ. 'ಪಿನ್ನಪೆದ್ದ' ಎಡೆ ಇಡುವ ಜಾಗದಲ್ಲಿ ವಿಷ್ಣುವಿನ 'ಕೂರ್ಮಾವತಾರದ' ಮಂಡಳ ಬರೆದು ರಂಗೋಲಿ ಹಾಕಿ ಬಾಳೆ ಎಲೆಗಳನ್ನು ಹಾಸಿ, ಅದರ ಮೇಲೆ ಕಳಶ ಇಟ್ಟು ಪೂಜೆ ಮಾಡುತ್ತಾರೆ. ಆದರ ಸುತ್ತ ಮನೆಯಲ್ಲಿ ತಯಾರಿಸಿರುವ ಅನ್ನ,

ಮುದ್ದೆ, ರೊಟ್ಟಿ, ಮಾಂಸ, ಕೋಳಿಸಾರು, ಬೆಂಕಿಯಲ್ಲಿ ಸುಟ್ಟ ಈಲಿ, ಗುಂಡಕಾಯಿ ಯಂತಹ ಪ್ರಮುಖ ಅಂಗಗಳು, ಕೋಳಿಮೊಟ್ಟೆ, ಸೇಂದಿ, ಸರಾಯಿ, ಬಂಗಿಸೊಪ್ಪು, ಬೀಡಿ, ಸಿಗರೇಟು, ಎಲೆ-ಅಡಿಕೆ, ಕಡ್ಡಿಪುಡಿ ೩ ತುಂಡು ಹೊಸಬಟ್ಟೆ (ಇದನ್ನು ಕೌಪೀನ ಅನ್ನುತ್ತಾರೆ) ಸತ್ತ ವ್ಯಕ್ತಿ ಬಳಸುತ್ತಿದ್ದ ಬಟ್ಟೆಗಳನ್ನು ಇಟ್ಟು ಎಡೆಹಾಕುತ್ತಾರೆ. ತಿಥಿ ಕಾರ್ಯದಲ್ಲಿ ಭಾಗವಹಿಸಿದ ಎಲ್ಲರೂ ಎಡೆಗೆ ಪೂಜೆ ಮಾಡಿ ದೂಪ ಹಾಕಿ, ಮಂಗಳಾರತಿ ಮಾಡಿ ಸತ್ತ ವ್ಯಕ್ತಿಯ ಆತ್ಮಕ್ಕೆ ಅರ್ಪಿತವಾಗಲೆಂದು ಪ್ರಾರ್ಥಿಸಿಕೊಳ್ಳುತ್ತಾರೆ. ನಂತರ ಇತರರೆಲ್ಲರಿಗೂ ಊಟ ಬಡಿಸುತ್ತಾರೆ. ರಾತ್ರಿ ಇಡೀ ಈ ಎಡೆಯ ಉಸ್ತುವಾರಿಯನ್ನು ಪಿನ್ನಪೆದ್ದ ನೋಡಿಕೊಳ್ಳುತ್ತಾನೆ. ರಾತ್ರಿಯಲ್ಲಾ ಹರಿಕಥೆ, ಭಜನೆ, ನಾಟಕದ ಪ್ರದರ್ಶನವಿರುತ್ತದೆ. ಬೆಳಗಿನ ಜಾವ ೪ ಗಂಟೆಗೆ ಪಿನ್ನಪೆದ್ದ ಸ್ನಾನ ಮಾಡಿ ಕೋಳಿ ಸಾರಿನಿಂದ ತಯಾರಿಸಿದ ಅಡಿಗೆಯ ಎಡೆ ಹಾಕುತ್ತಾನೆ. ಬೆಳಿಗ್ಗೆ ೬ ಗಂಟೆಗೆ ಮೊಸರನ್ನ ತಯಾರು ಮಾಡಿ. ಎಡೆಇಟ್ಟು ಪೂಜೆ ಮಾಡುತ್ತಾನೆ. ಇದು ತಿಥಿಕಾರ್ಯಕ್ಕೆ ಸಂಬಂಧಿಸಿದ ಕೊನೆಯ ಪೂಜೆ. ಅಲ್ಲಿ ಭಾಗವಹಿಸಿದ ಎಲ್ಲರಿಗೂ ರಾತ್ರಿ ಇಟ್ಟ ಮೂರು ಎಡೆಗಳನ್ನು ಪ್ರಸಾದ ರೂಪದಲ್ಲಿ ನೀಡಲಾಗುತ್ತದೆ. ಇದರಿಂದ ಸತ್ತವರಿಗೆ ಸದ್ಗತಿ ದೊರೆಯುತ್ತದೆ ಎಂಬ ನಂಬಿಕೆ ಈ ಸಮುದಾಯದ್ದು.

ಈ ಸಮುದಾಯದಲ್ಲಿ ಆಕಾಲಿಕ ಮೃತ್ಯುಗೊಳಗಾದವರು, ತೊನ್ನುಮೈನವರು, ಬಾಣಂತಿಯರು ಸತ್ತರೆ ಮಾತ್ರ ಸುಡುತ್ತಾರೆ. ಅವಿವಾಹಿತರು ಸತ್ತರೆ ಒಂಟಿ ಬಡಿಗೆಯಲ್ಲಿ ಕೊಂಡೊಯ್ಯುತ್ತಾರೆ. ಅಕಾಲಿಕ ಮರಣ ಹೊಂದಿದವರು ದೆವ್ವ, ಪೀಡೆಗಳಾಗಿ ಕಾಡದಿರ ಲೆಂದು ಇಂತಹವರನ್ನು ಸುಡುತ್ತಾರೆ.

ಉತ್ತರ ಕರ್ನಾಟಕದ ಕೆಲವು ಭಾಗಗಳಲ್ಲಿ ಹೆಣವನ್ನು ಸಾಗಿಸಲು ಚಟ್ಟ ಬಳಸುವುದಿಲ್ಲ. ಕೌದಿಯಲ್ಲಿ ಸುತ್ತಿ ಹೆಣಸಾಗಿಸುತ್ತಾರೆ. ೩ ೧/೨ ಮೊಳ ಉದ್ದದ ಗುಂಡಿ ತೆಗೆದು ಹೆಣಮಲಗಿಸಿ ಮಣ್ಣು ಮಾಡುತ್ತಾರೆ. ೩ನೇ ದಿನದ ಕಾರ್ಯ ಮಾಡುವಾಗ ಹೆಣ ಹೂತಿದ್ದ ಸ್ಥಳದಲ್ಲಿ (ಎದೆಯಭಾಗದಲ್ಲಿ) ೧/೨ ಅಡಿ ಆಳದ ಗುಂಡಿ ತೋಡಿ ಅದರಲ್ಲಿ ಮಾಂಸ, ಅನ್ನ, ಇತ್ಯಾದಿಗಳನ್ನು ಎಡೆ ಇಟ್ಟು ಪೂಜೆ ಮಾಡುವ ಸಂಪ್ರದಾಯವಿದೆ. ಪ್ರಾದೇಶಿಕವಾಗಿ ಈ ಕ್ರಿಯೆ ಕರ್ಮಾದಿಗಳನ್ನು ನಡೆಸುವ ವಿಧಾನಗಳಲ್ಲಿ ಬಿನ್ನತೆಗಳನ್ನು ಕಾಣಬಹುದು.

**ಸಮಾಧಿ ಅಥವಾ ಸ್ಮಾರಕ :** ಮೂಲತಃ ಅಲೆಮಾರಿಗಳಾದ ಈ ಸಮುದಾಯಕ್ಕೆ ತಮ್ಮ ಸಮಾಧಿಗಳನ್ನು ಕಟ್ಟಿಕೊಳ್ಳಲು ಜಾಗವಾದರೂ ಎಲ್ಲಿ? ಸಮಾಧಿ ಸ್ಮಾರಕ ನಿರ್ಮಾಣದ ಬಗ್ಗೆ ವಿಶೇಷ ಆಸಕ್ತಿ ವಹಿಸುವುದಿಲ್ಲ. ಕೆಲವು ಸಮಯ ಸತ್ತರವನ್ನು ಊಳಲೂ ಸಹ ಸ್ಥಳವಿರವುದಿಲ್ಲ. ಇತ್ತೀಚೆಗೆ ಅಲ್ಪ ಸ್ವಲ್ಪ ಭೂಮಿ ಹೊಂದಿದವರು ಆರ್ಥಿಕ ಬಲವುಳ್ಳವರು ಮಾತ್ರ ಸಮಾಧಿಗಳನ್ನು ನಿರ್ಮಾಣ ಮಾಡುತ್ತಿದ್ದಾರೆ.

ಬಹಳ ಹಿಂದೆ ಹೆಣವನ್ನು ಹೂಳಲು ಸ್ಥಳವಿಲ್ಲದ ಸಂದರ್ಭಗಳಲ್ಲಿ ದೇಹವನ್ನು ಪ್ರಾಣಿ-ಪಕ್ಷಿಗಳಿಗೆ ಧಾನ ಮಾಡುವ ಪದ್ಧತಿ ಕೂಡ ಇತ್ತು. ಅಂದರೆ ಸತ್ತ ದೇಹವನ್ನು

ಕಾಡಿನ ಯಾವುದಾದರೂ ಗುಹೆಯಂತಹ ಸ್ಥಳದಲ್ಲಿ ಇಟ್ಟು ಜೊತೆಯಲ್ಲಿ ಒಂದು ಮಣ್ಣಿನ ಮಡಿಕೆಯಲ್ಲಿ ನೀರನ್ನು ಇಡುತ್ತಿದ್ದರು. ದೇಹ ವ್ಯರ್ಥವಾಗುವ ಬದಲು ಪ್ರಾಣಿ ಪಕ್ಷಿಗಳು ತಿಂದು ಸಂತೃಪ್ತಿ ಪಡಲಿ ಎಂಬ ಸದ್ದುದ್ದೇಶ ಇವರದಾಗಿತ್ತು.

**ಸೂತಕಗಳು**

ಈ ಸಮುದಾಯದಲ್ಲಿ ಪ್ರಮುಖವಾಗಿ ನಾಲ್ಕು ಬಗೆಯ ಸೂತಕಗಳನ್ನು ಗುರುತಿಸಬಹುದು.

೧ ಹುಟ್ಟಿನ ಸೂತಕ

೨ ಮುಟ್ಟಿನ ಸೂತಕ

೩ ಸತ್ತ ಸೂತಕ

೪ ಮೈನೆರದ ಸೂತಕ

ಹುಟ್ಟು ಮತ್ತು ಹೆಣ್ಣು ಮಕ್ಕಳು ಮೈನೆರದ ಸಂದರ್ಭದಲ್ಲಿ ೧೨ ದಿನಗಳ ವರೆಗೆ ಸೂತಕ ಇರುತ್ತದೆ. ಸತ್ತ ಸೂತಕವನ್ನು ೧೧ ದಿನಕ್ಕೆ ಕಳೆಯುತ್ತಾರೆ. ಪ್ರತಿ ತಿಂಗಳು ಮಹಿಳೆಯರಲ್ಲಿ ಸಂಭವಿಸುವ ಮುಟ್ಟಿನ ಸೂತಕ ೩ ರಿಂದ ೫ ದಿನಗಳ ವರೆಗೆ ಇರುತ್ತದೆ.

ಈ ಸೂತಕಗಳನ್ನು ನಿವಾರಿಸಿಕೊಳ್ಳಲು ಅವರದೇ ಆದ ವಿಧಿವಿಧಾನಗಳಿರುತ್ತವೆ. ಸೂತಕ ಕಳೆಯಲು ತಾವು ಬಳಸುತ್ತಿದ್ದ ಮಣ್ಣಿನ ಮಡಿಕೆಗಳನ್ನು ತೆಗೆದು ಹೊರಕ್ಕೆ ಎಸೆದು ಹೊಸ ಮಡಿಕೆಗಳನ್ನು ತಂದು ಬಳಸುತ್ತಾರೆ. ಪಾತ್ರೆ ಪಗಡಗಳಿದ್ದರೆ ಅವುಗಳನ್ನು ಹುಣಸೆಹುಳಿ ಹಚ್ಚಿ ತೊಳೆದು ಸ್ವಚ್ಛಗೊಳಿಸಿಕೊಂಡು ಬಳಸುತ್ತಾರೆ. ಸೂತಕ ಕಳೆಯುವ ದಿನ ಮನೆಯನ್ನೆಲ್ಲ ಸ್ವಚ್ಛಗೊಳಿಸಿ ಸುಣ್ಣ ಬಳೆದು ಎಲ್ಲರೂ ಸ್ನಾನ ಮಾಡಿ ಮಡಿ ಬಟ್ಟೆಗಳನ್ನುಟ್ಟು ದಾಸಯ್ಯನನ್ನು ಕರೆಯಿಸಿ ಪೂಜೆ ಮಾಡಿಸಿ ಶಂಖ, ಜಾಗಟೆ ಬಾರಿಸಿ ದಾಸಯ್ಯನಿಂದ ನಾಮ ಹಾಕಿಸಿಕೊಳ್ಳುತ್ತಾರೆ. ಸೂತಕದ ಅವಧಿಯಲ್ಲಿ ಬೇರೆಯವರು ಇವರ ಮನೆಯಲ್ಲಿ ಊಟ ಮಾಡುವುದು, ನೀರು ಕುಡಿಯವುದು, ಸೂತಕದ ಮನೆಯವರು ಬೇರೆಯವರ ಮನೆಯ ಶುಭ ಸಮಾರಂಭಗಳಲ್ಲಿ ಭಾಗವಹಿಸುವುದು, ಶುಭಕಾರ್ಯಗಳು ಮತ್ತು ದೇವರ ಕಾರ್ಯಗಳನ್ನು ನಡೆಸುವುದನ್ನು ಮಾಡುವುದು ನಿಷಿದ್ಧವಾಗಿರುತ್ತದೆ.

ಮೈನೆರೆದ ಹೆಣ್ಣು ಮಕ್ಕಳು, ಹೆರಿಗೆಯಾದ ಬಾಣಂತಿಯರು ಸೂತಕ ಕಳೆಯುವವರೆಗೆ ಮನೆಯ ಪ್ರಮುಖ ಸ್ಥಳಗಳಾದ ದೇವರ ಪಟ ಇರುವ ಸ್ಥಳ ಅಡಿಗೆ ಕೋಣೆಗಳಿಗೆ ಪ್ರವೇಶಿಸುವಂತಿರಲಿಲ್ಲ. ಇವರಿಗೆ ಊಟ ಬಡಿಸಲು, ನೀರು ಕುಡಿಯಲು ಬೇರೆ ತಟ್ಟೆ ಮತ್ತು ಲೋಟಗಳನ್ನು ಇಡುತ್ತಿದ್ದರು. ಇವುಗಳನ್ನು ಕೋಣೆಯ ಒಳಭಾಗಕ್ಕೆ ತೆಗೆದುಕೊಂಡು ಹೋಗುತ್ತಿರಲಿಲ್ಲ. ಬೇರೆಯವರು ಇವರು ಬಳಸುತ್ತಿರುವ ಪಾತ್ರೆ ಬಟ್ಟೆಗಳನ್ನು ಬಳಸುವಂತಿಲ್ಲ.

ಈ ಎರಡೂ ಸಂದರ್ಭಗಳಲ್ಲಿ ಹೆಣ್ಣು ಮಕ್ಕಳನ್ನು ಗಂಗಾಸ್ನಾನಕ್ಕೆ ಕರೆದುಕೊಂಡು

ಹೋಗಿ ಎಳ್ಳು ಅಕ್ಕಿ ಇಟ್ಟು ಪೂಜೆ ಮಾಡಿಸಿ ಗಂಗಾಸ್ಥಾನದಲ್ಲಿ ಎಲೆ ಬಿಡಿಸುತ್ತಾರೆ. ಹೆರಿಗೆಯ ಸಂದರ್ಭದಲ್ಲಿದ್ದ ಹಳೆ ಬಳೆಗಳನ್ನು ತೆಗೆಸಿ ಹೊಸಬಳೆಗಳನ್ನು ತೊಡಿಸುತ್ತಾರೆ.

ಇತ್ತೀಚೆಗೆ ಆಧುನಿಕ ಜೀವನ ಶೈಲಿಯಿಂದಾಗಿ ಕೆಲವಾರು ವಿಧಿಗಳು ಮತ್ತು ಸೂತಕಗಳ ಆಚರಣೆಗಳು ಬೇರೆ ಬೇರೆ ರೂಪಪಡೆದುಕೊಂಡು ತಮ್ಮ ಅನುಕೂಲಕ್ಕೆ ತಕ್ಕಂತೆ ಮಾರ್ಪಾಡು ಹೊಂದುತ್ತಿವೆ.

**ಧಾರ್ಮಿಕ ವಿಧಿವಿಧಾನಗಳು, ದೇವರು**

ದೊಂಬಿದಾಸರು ಹಿಂದೂ ಧರ್ಮಾವಲಂಭಿಗಳು. ವೈಷ್ಣವ ಸಂಪ್ರದಾಯಕ್ಕೆ ಸೇರಿದವರು. ಈ ಸಂಪ್ರದಾಯಕ್ಕೆ ಸೇರಿದ ದೈವಗಳಾದ ವೆಂಕಟರಮಣಸ್ವಾಮಿ, ನರಸಿಂಹ ಸ್ವಾಮಿ, ಗರುಡಪ್ಪ, ಆಂಜನೇಯ, ಬೇಟೆರಾಯ ಮುಂತಾದವು ಇವರ ಮನೆದೇವರುಗಳು. ವಿಚಿತ್ರವೆಂದರೆ ಶೈವ ಸಂಪ್ರದಾಯದ ಹೆಣ್ಣು ದೇವತೆಗಳಾದ ಮೆಳಿಯಮ್ಮ, ಸುಂಕಲಮ್ಮ, ಹಳೇಕೋಟೆಮ್ಮ, ಗದ್ದೆ ಕೆಂಪಮ್ಮ, ಚಿಕ್ಕದೇವಮ್ಮ, ಎಲ್ಲಮ್ಮ, ದೊಡ್ಡಮ್ಮ, ಕಬ್ಬಾಳಮ್ಮ, ದುರ್ಗಾಪರಮೇಶ್ವರಿ, ಮುತ್ಯಾಲಮ್ಮ ಮುಂತಾದ ದೇವತೆಗಳನ್ನು ಪೂಜಿಸುತ್ತಾರೆ. ವೈಷ್ಣವ ಮತ್ತು ಶೈವ ಸಂಪ್ರದಾಯದ ಸಮನ್ವಯ ಸಾಧಿಸುವಲ್ಲಿ ಇವರು ಅಗೋಚರವಾಗಿ ಈ ಧರ್ಮ ದೈವಗಳ ಆರಾಧಕರಾಗಿ ಮುಂದುವರೆದಿದ್ದಾರೆ. ದುರಂತವೆಂದರೆ ವೈಷ್ಣವರಾಗಿದ್ದು ಬ್ರಾಹ್ಮಣರಲ್ಲ, ಶೈವರಾಗಿದ್ದು ಲಿಂಗಾಯಿತರಲ್ಲ, ಅಥವಾ ಶೂದ್ರರಲ್ಲಿಯೂ ಸಲ್ಲದ ಎಡಬಿಡಂಗಿಗಳಾಗಿದ್ದಾರೆ.

ಈ ಸಮುದಾಯದಲ್ಲಿ ಒಂದೊಂದು ಬೆಡಗಿಗೂ ಒಂದೊಂದು ಮನೆದೇವರುಗಳು ಇರುತ್ತವೆ. ಇವುಗಳ ಆಚಾರ, ಆರಾಧನೆ, ವಿಧಿ–ವಿಧಾನಗಳು ಬೇರೆ ಬೇರೆಯಾಗಿರುತ್ತವೆ. ಈ ದೈವಗಳ ಆರಾಧನೆ ಆಚರಣೆಗಳನ್ನು ಯಾವುದೇ ಲೋಪ ಬರದ ಹಾಗೆ ವಿಧಿವತ್ತಾಗಿ ಭಯ, ಭಕ್ತಿ ಮತ್ತು ನೇಮ ನಿಷ್ಠೆಯಿಂದ ನೆರವೇರಿಸುತ್ತಾರೆ.

| ಬೆಡಗು | ಆರಾಧಿಸುವ ದೈವಗಳು |
|---|---|
| ೧ ಅಕ್ಕಿನ ಪಲ್ಲೋಳ್ಳು | ಭದ್ರಕಾಳಮ್ಮ |
| ೨ ಅರವೊಳ್ಳು | ಉಲ್ಲೂರಮ್ಮಾ |
| ೩ ದಂಡೊಳ್ಳು | ಬದಲೂರುಗಂಗಮ್ಮ |
| ೪ ಗ್ವಾಲೋಳ್ಳು | ಸುಂಕಲಮ್ಮ |
| ೫ ಕೊಂಡಮೋಳ್ಳು | ಗದ್ದೆಕೆಂಪಮ್ಮ |
| ೬ ಮಲ್ಲಿಶೆಟ್ಟೋಳು | ಕೊಲ್ಲಾಪುರದಮ್ಮ |
| ೭ ನಂದ್ಯಾಲೊಳ್ಳು | ಚಿಕ್ಕದೇವಮ್ಮ |
| ೮ ಪಡತ್ಲೊಳ್ಳು | ಎಲ್ಲಮ್ಮ |
| ೯ ತಮಟಮೊಳ್ಳು | ಮೆಳೆಯಮ್ಮ |
| ೧೦ ತಿಪ್ಪೊಳ್ಳು | ಎಲ್ಲೂರಮ್ಮ/ಮುಳನ್ನುಕಟ್ಟಮ್ಮ |
| ೧೧ ಯಂಟಪಲ್ಲೊಳ್ಳು, ಜಟ್ಟಿವೊಳ್ಳೂ | ಕಬ್ಬಾಳಮ್ಮ |

ಸಾಮಾನ್ಯವಾಗಿ ತಮ್ಮ ಮನೆತನಕ್ಕೆ ಸೇರಿದ ಶಕ್ತಿದೇವತೆಗಳ ಹಬ್ಬಗಳನ್ನು ವಂಶದಲ್ಲಿ ಹುಟ್ಟಿದ ಮಕ್ಕಳ ಕೂದಲನ್ನು ತೆಗೆಯುವ ಸಂದರ್ಭ ಅಥವಾ ಹಿರಿಯಮಗನಿಗೆ ಮದುವೆ ಮಾಡುವ ಸಂದರ್ಭದಲ್ಲಿ ಮಾಡುತ್ತಾರೆ. ಆ ಬೆಡಗಿಗೆ ಸೇರಿದ ಸೋದರ ಸಂಬಂಧಿಗಳು ಒಟ್ಟಿಗೆ ಸೇರಿ ಈ ಹಬ್ಬವನ್ನು ಆಚರಿಸುತ್ತಾರೆ. ಇಲ್ಲಿ ಉದಾಹರಣೆಗಾಗಿ ಸುಂಕಲಮ್ಮ ಮತ್ತು ಎಲ್ಲಮ್ಮ ದೇವರ ಹಬ್ಬಗಳ ಆಚರಣೆ ವಿಧಾನಗಳನ್ನು ಸಂಗ್ರಹಿಸಿ ನೀಡಿದೆ.

**ಸುಂಕಲಮ್ಮ :** ಈ ಹಬ್ಬವನ್ನು ಗ್ವಾಲೊಳ್ಳು ಬೆಡಗಿಗೆ ಸೇರಿದವರು ಆಚರಿಸುತ್ತಾರೆ. ಇದೊಂದು ವೈಶಿಷ್ಟ್ಯ ಪೂರ್ಣವಾದ ಹಬ್ಬ. ಸಾಮಾನ್ಯವಾಗಿ ಈ ಬೆಡಗಿಗೆ ಸೇರಿದವರ ಮನೆಯಲ್ಲಿ ಮಕ್ಕಳು ಹುಟ್ಟಿದಾಗ ಆ ಮಗುವಿನ ಹುಟ್ಟಿನ ಕೂದಲನ್ನು ತೆಗೆಯುವ ಸಂದರ್ಭದಲ್ಲಿ, ಹಬ್ಬ ಆಚರಿಸುತ್ತಾರೆ. ಹಬ್ಬ ಮಾಡಲು ನಿರ್ಣಯಿಸಿದ ದಿನ ಯಾರಿಗೂ ತಿಳಿಯದಂತೆ ರಾತ್ರಿ ಸಮಯ ಊರ ಹೊರಗೆ ಬೇವಿನ ಮರದ ಕೆಳಗೆ ಒಂದು ಜಾಗ ಗುರುತು ಮಾಡುತ್ತಾರೆ. ಇವರಲ್ಲಿ ಒಬ್ಬ ಅನುಭವಸ್ಥ ಹಿರಯರು ಪೂಜಾಕಾರ್ಯದ ಜವಾಬ್ದಾರಿ ವಹಿಸಿಕೊಂಡಿರುತ್ತಾರೆ. ಅವರು ಆ ಸ್ಥಳವನ್ನು ಸ್ವಚ್ಛಗೊಳಿಸಿ ಗೋಮೂತ್ರ, ಸಗಣಿಯಿಂದ ಸಾರಿಸಿ ರಂಗೋಲಿ ಇಡುತ್ತಾರೆ. ಅಲ್ಲಿ ಮಣ್ಣಿನಿಂದ ತಯಾರಿಸಿದ ದೇವಿಯ ವಿಗ್ರಹವನ್ನು ಪ್ರತಿಸ್ಥಾಪನೆ ಮಾಡಿಸುತ್ತಾರೆ. ದೇವರಿಗೆ ಅರ್ಪಿಸಲು ತಂದಿದ್ದ ತಂಬಿಟ್ಟು (ಅಕ್ಕಿ ಹಿಟ್ಟು, ಬೆಲ್ಲದಿಂದ ತಯಾರಿಸಿದ್ದು) ತಳಿಗೆ, ಹಣ್ಣು ಕಾಯಿ ಪೂಜಾ ಸಾಮಗ್ರಿಗಳನ್ನು ಇಟ್ಟು ವಂಶಸ್ಥರೆಲ್ಲರೂ ಪೂಜೆ ಮಾಡುತ್ತಾರೆ. ಬಲಿಕೊಡಲು ತಂದಿದ್ದ ಕುರಿ, ಕೋಳಿ ಕಾಲುಗಳನ್ನು ತೊಳೆದು ಬಾಯಿಗೆ ನೀರು ಬಿಟ್ಟು ಪೂಜೆ ಮಾಡಿ ಬಲಿ ಕೊಡುತ್ತಾರೆ. ಬಲಿಯಾದ ಪ್ರಾಣಿ ಪಕ್ಷಿಯನ್ನು ಮನೆಗೆ ತಂದು ಅಡಿಗೆ ಮಾಡಿ ವಂಶಸ್ಥರು ಮಾತ್ರ ಊಟ ಮಾಡುತ್ತಾರೆ. ಈ ಹಬ್ಬಕ್ಕೆ ಮದುವೆಯಾಗಿ ಹೋದ ಹೆಣ್ಣು ಮಕ್ಕಳನ್ನು ಸಹ ಕರೆಯುವುದಿಲ್ಲ. ಈ ಬೆಡಗಿಗೆ ಸೇರದವರು ಬಂದು ಭಾಗವಹಿಸಿದರೆ ಕೇಡಾಗುತ್ತದೆ ಎಂಬ ನಂಬಿಕೆ ಇವರದು. ಉಳಿದ ಆಹಾರವನ್ನೂ ಸಹ ಬೇರೆಯವರಿಗೆ ನೀಡುವಂತಿಲ್ಲ. ನಾಯಿಗಳಿಗೂ ಹಾಕುವಂತಿಲ್ಲ. ಉಳಿದ ಆಹಾರವನ್ನು ಒಂದು ಗುಂಡಿ ತೆಗೆದು ಅದರಲ್ಲಿ ಹಾಕಿ ಮುಚ್ಚಬೇಕು. ಊಟದ ನಂತರ ತಟ್ಟೆತೊಳೆದ ನೀರನ್ನು ಸಹ ಹೊರಗಡೆ ಚಲ್ಲುವಂತಿಲ್ಲ. ಅದನ್ನು ಗುಂಡಿಯಲ್ಲೇ ಹಾಕಬೇಕು. ನಂತರ ಅದನ್ನು ಮುಚ್ಚಿ ಯಾರಿಗೂ ತಿಳಿಯದಂತೆ ಎಚ್ಚರವಹಿಸಬೇಕು. ಇದೊಂದು ಕಠಿಣವಾದ ಆಚರಣೆ (ಸಂದರ್ಶನ:ಕೃಷ್ಣಯ್ಯ:೨೦–೦೬–೨೦೦೭).

**ಎಲ್ಲಮ್ಮನ ಹಬ್ಬದ ಆಚರಣೆ:** ಈ ಹಬ್ಬವನ್ನು ಪಡುತ್ಲೊಳ್ಳು ಬೆಡಗಿಗೆ ಸೇರಿದವರು ಆಚರಿಸುತ್ತಾರೆ. ಹಿರಿಯ ಮಗನ ಮದುವೆ ಸಂದರ್ಭವನ್ನು ಇದಕ್ಕಾಗಿ ಆಯ್ಕೆ ಮಾಡಿಕೊಳ್ಳುತ್ತಾರೆ ಅಥವಾ ಹುಟ್ಟಿದ ಮಗುವಿನ ಕೂದಲು ತೆಗೆಯುವ ಸಂದರ್ಭದಲ್ಲಿ ಮಾಡುತ್ತಾರೆ. ನಿರ್ಧರಿಸಿದ ಹಬ್ಬದ ದಿನ ಯಾರು ಪೂಜಾರಿಯಾಗಿರುತ್ತಾನೋ ಆತ ಬೆಳಿಗ್ಗೆ ೬ ಗಂಟೆಗೆ ಸ್ನಾನ ಮಾಡಿ ಮಡಿಯುಟ್ಟು, ಊರ ಹೊರಗೆ ಜಮೀನಿನಲ್ಲಿ

ಹಸಿರು ಚಪ್ಪರ (ಹೊಂಗೇ ಸೊಪ್ಪಿನಿಂದ) ಹಾಕಿ, ಆ ಸ್ಥಳವನ್ನು ಸ್ವಚ್ಛಗೊಳಿಸಿ ಕೆರೆಯ ಅಂಗಳದಿಂದ ಜೇಡಿ ಮಣ್ಣನ್ನು ತಂದು ಎಲ್ಲಮ್ಮನ ವಿಗ್ರಹ ತಯಾರು ಮಾಡಿ ಅದಕ್ಕೆ ಜೀವ ಕಳೆ ತುಂಬಿ ಅಲಂಕಾರ ಮಾಡುತ್ತಾನೆ. ಹೊಂಗೆ ಸೊಪ್ಪಿನಿಂದ ನಿರ್ಮಿಸಿದ ಹಸಿರು ಚಪ್ಪರದೊಳಗಿನ ಗುಡಿಯಲ್ಲಿ ಈ ದೇವಿಯನ್ನು ಪ್ರತಿಸ್ಥಾಪನೆ ಮಾಡಿ, ವಿಗ್ರಹಕ್ಕೆ ಬೆಳ್ಳಿಯಿಂದ ತಯಾರಿಸಿದ ದೇವಿ ಆಭರಣಗಳಾದ ಬೆಳ್ಳಿ ಕಣ್ಣು, ಕೋರೆ, ತಾಳಿ, ಛತ್ರಿ ಛಾಮರಗಳು ಹಾಗೂ ಹರಕೆ ಹೊತ್ತ ಭಕ್ತರು ನೀಡುವ ಇತರ ಚಿನ್ನ-ಬೆಳ್ಳಿಯ ಆಭರಣಗಳನ್ನು ತೊಡಿಸಿ ಅಲಂಕಾರ ಮಾಡಿ ಪೂಜೆ ಮಾಡುತ್ತಾರೆ. ಇದರ ಮುಂದೆ ಶುಭ್ರವಾದ ಬಟ್ಟೆ ತೆರೆ ಹಾಕುತ್ತಾರೆ. ಈ ತೆರೆಯ ಮುಂದುಗಡೆ ಒಂದು ಭೂತವನ್ನು ಕೂರಿಸುತ್ತಾರೆ. ಈ ಭೂತದ ವಿಗ್ರಹವನ್ನು ಮಣ್ಣಿನಿಂದಲೇ ತಯಾರಿಸಿರುತ್ತಾರೆ. ಇದರ ಮುಂದೆ ಕೋಳಿ, ಕುರಿ, ಮೇಕೆ ಬಲಿ ಕೊಡುತ್ತಾರೆ. ಅಲ್ಲಿಯೇ ಮಾಂಸದ ಅಡಿಗೆ ತಯಾರು ಮಾಡಿ ದೇವರಿಗೆ ಎಡೆಹಾಕುತ್ತಾರೆ.

ಈ ಹಬ್ಬದಲ್ಲಿ ಈ ಸಮುದಾಯದ ಒಳಗಿನವರು ಭಾಗವಹಿಸಬಹುದು. ಅನ್ಯ ಸಮುದಾಯದವರು ಭಾಗವಹಿಸುವಂತಿಲ್ಲ. ಬಲಿ ಕೊಟ್ಟ ಕುರಿ ಅಥವಾ ಮೇಕೆಯ ಚರ್ಮವನ್ನು ಸಹ ಮಾರಾಟ ಮಾಡುವಂತಿಲ್ಲ. ಆ ಚರ್ಮವನ್ನು ಸುಟ್ಟು ತಿನ್ನಲು ಉಪಯೋಗಿಸಬೇಕು. ಇಲ್ಲಿ ತಯಾರಾದ ಅಡಿಗೆ ನೈವೇದ್ಯ ಉಳಿದರೆ ಅದನ್ನು ವಾಪಾಸ್ ಮನೆಗೆ ತೆಗೆದುಕೊಂಡು ಹೋಗುವಂತಿಲ್ಲ. ಉಳಿದ ಎಲ್ಲಾ ಆಹಾರ ಪದಾರ್ಥಗಳನ್ನು ಗಂಗಾಸ್ಥಾನದಲ್ಲಿ ವಿಸರ್ಜಿಸಿ ಹೋಗಬೇಕು. ಇದನ್ನು ತೀರ ಕಟ್ಟು ನಿಟ್ಟಾಗಿ ಪಾಲಿಸಬೇಕು. ರಾತ್ರಿ ೭-೮ ಗಂಟೆಯ ಒಳಗೆ ಎಲ್ಲಾ ವಿಧಿ ವಿಧಾನಗಳು ಮುಗಿಸಿಕೊಂಡು ವಾಪಸ್ ಮನೆಗೆ ಬರಬೇಕು. ಪ್ರತಿಸ್ಥಾಪನೆ ಮಾಡಿದ ಎಲ್ಲಮ್ಮ ವಿಗ್ರಹವನ್ನು ರಾತ್ರಿ ಕದಲಿಸುವಂತಿಲ್ಲ. ತೊಡಿಸಿರುವ ಬೆಳ್ಳಿ ಚಿನ್ನದ ಆಭರಣಗಳನ್ನು ಸಹ ರಾತ್ರಿ ತೆಗೆಯುವ ಹಾಗಿಲ್ಲ. ಈ ದೇವಿಯ ಮೇಲೆ ಇರುವ ಆಭರಣಗಳನ್ನು ರಾತ್ರಿ ಯಾರಾದರು ಕಳ್ಳಕಾಕರು ತೆಗೆದುಕೊಂಡು ಹೋಗುತ್ತಾರೆಂಬ ಭಯ ಕೂಡ ಇರುವುದಿಲ್ಲ. ಯಾವುದೇ ಕಳ್ಳಕಾಕರು ಇದರ ಹತ್ತಿರ ಸುಳಿಯಲು ಸಾದ್ಯವಿಲ್ಲ ಎಂಬುದು ಇವರ ನಂಬಿಕೆ. ಈ ರೀತಿ ಕಳ್ಳತನವಾದ ಒಂದೇ ಒಂದು ಉದಾಹರಣೆ ಇಲ್ಲ ಎಂದು ಮಾಹಿತಿದಾರರು ವಿವರಿಸುತ್ತಾರೆ.

ಈ ಕಾರ್ಯ ಮುಗಿದ ಮಾರನೆ ದಿನ ಬೆಳಿಗ್ಗೆ ಪೂಜಾರಿ ಸ್ನಾನ ಮಾಡಿ ಗುಡಿಯ ಮುಂದುಗಡೆ ಮೊಸರನ್ನದ ತಳಿಗೆ ಮಾಡಿ ಎಡೆ ಇಟ್ಟು ಪೂಜೆ ಮಾಡುತ್ತಾನೆ. ದೇವರ ವಿಗ್ರಹಕ್ಕೆ ತೊಡಿಸಿರುವ ಎಲ್ಲಾ ಬೆಳ್ಳಿ ಮತ್ತು ಚಿನ್ನದ ಆಭರಣಗಳನ್ನು ಈ ಸಂದರ್ಭದಲ್ಲಿ ತೆಗೆದು ವಿಗ್ರಹವನ್ನು ಗಂಗಾಸ್ಥಾನಕ್ಕೆ ಬಿಡುತ್ತಾರೆ. ಇಲ್ಲಿಗೆ ಹಬ್ಬದ ಎಲ್ಲಾ ಕ್ರಿಯೆಗಳು ಮುಗಿದಂತೆ. ದೇವಿಗೆ ತೊಡಿಸಿದ ವಸ್ತ್ರ ಮತ್ತು ಒಡವೆಗಳನ್ನು ಒಂದು ಶುಭ್ರವಾದ ಬಟ್ಟೆಯಲ್ಲಿ ಕಟ್ಟಿ ಸಂರಕ್ಷಿಸಿಡಲಾಗುವುದು. ಮುಂದಿನ ಹಬ್ಬದ ವರೆಗೆ ಈ ಒಡವೆಗಳನ್ನು ಹೊರಕ್ಕೆ ತೆಗೆಯುವಂತಿಲ್ಲ. ಹೀಗೆ ದಾಸರ ಒಂದೊಂದು ಹಬ್ಬಗಳು ಒಂದೊಂದು ವಿಶಿಷ್ಟತೆಯಿಂದ ಕೂಡಿವೆ.

## ಧಾರ್ಮಿಕ ಸಂಸ್ಥೆಗಳು

ರಾಜ್ಯದಲ್ಲಿ ಸಮುದಾಯವನ್ನು ಪ್ರತಿನಿಧಿಸುವಂತಹ ಒಂದೇ ಒಂದು ಧಾರ್ಮಿಕ ಸಂಸ್ಥೆ ಅಸ್ತಿತ್ವದಲಿಲ್ಲವೆಂದೇ ಹೇಳಬೇಕು. ಆದರೆ ಕರ್ನಾಟಕ ಮತ್ತು ಆಂಧ್ರ ಪ್ರದೇಶದ ಗಡಿಭಾಗಕ್ಕೆ ಹೊಂದಿಕೊಂಡಂತೆ ಸಮುದಾಯವನ್ನು ಪ್ರತಿನಿಧಿಸುವ ಒಂದು ಧಾರ್ಮಿಕ ಸಂಸ್ಥೆ ಅಸ್ತಿತ್ವದಲ್ಲಿದೆ. ಅದು ಆಂಧ್ರ ಪ್ರದೇಶದ ಅನಂತಪುರ ಜಿಲ್ಲೆ, ಮಡಕಶಿರಾ ತಾಲೂಕಿನ "ವೀರಜ್ಜನಹಳ್ಳಿ ಶ್ರೀ ಗುರುರಂಗಪ್ಪಸ್ವಾಮಿ ಮಠ" ಈ ಮಠದ ಮೂಲಪುರಷ ಯೋಗಿ ಅಕ್ಕಲಪ್ಪರವರು ಇವರ ನಂತರ ರಂಗಪ್ಪ ಸ್ವಾಮಿಗಳು– ಶ್ರೀ ಕೃಷ್ಣಪ್ಪದಾಸರು, ಶ್ರೀ ನಂಜಪ್ಪ ಸ್ವಾಮಿಗಳು ಈ ಪೀಠದ ಮುಖ್ಯಸ್ಥರಾಗಿದ್ದರು. ಪ್ರಸ್ತುತ ಶ್ರೀ ಮಹದೇವ ಸ್ವಾಮಿಗಳು ಮಠದ ಅಧ್ಯಕ್ಷರಾಗಿದ್ದಾರೆ. ಇವರು ಪೋಲಬೈನೊಳ್ಳು ಬೆಡಗಿಗೆ ಸೇರಿದವರು.

ಈ ಮಠಕ್ಕೆ ಆಂಧ್ರ ಮತ್ತು ಕರ್ನಾಟಕದ ನಾನಾ ಭಾಗಗಳಲ್ಲಿ ಶಿಷ್ಯರಿದ್ದಾರೆ. ದಾಸರಲ್ಲದೆ ಬೇರೆ ಸಮುದಾಯದವರಿಗೂ ಇವರು ದೀಕ್ಷೆ ನೀಡಿದ್ದಾರೆ. ಶ್ರೀ ಮಹದೇವ ಸ್ವಾಮಿಗಳು ಗೃಹಸ್ಥಾಶ್ರಮಿಗಳಾಗಿದ್ದು ಮಠದ ಜವಾಬ್ದಾರಿ ನಿರ್ವಹಿಸುತ್ತಿದ್ದಾರೆ. ಅವರೇ ಹೇಳುವಂತೆ ರಾಜ್ಯಾದ್ಯಂತ ಇವರಿಗೆ ೩೦೦೦ಕ್ಕೂ ಹೆಚ್ಚು ಮಂದಿ ಶಿಷ್ಯರಿದ್ದಾರೆ. ತಮ್ಮ ಶಿಷ್ಯಂದಿರಿಗೆ ಕರ್ಣೋಪದೇಶ ಮಾಡುವ ಮೂಲಕ ಗುರುದೀಕ್ಷೆ ನೀಡುತ್ತಾರೆ. ಇವರ ಪೂರ್ವಿಕರಾದ ಶ್ರೀ ಗುರುಕೃಷ್ಣಚೈತನ್ಯರು ದಾರ್ಶನಿಕರು ಮತ್ತು ವಿದ್ಯಾವಂತರೂ ಆಗಿದ್ದರು. ಅವರೇ ಸ್ವತಃ ನೂರಾರು ತತ್ವಪದಗಳನ್ನು ರಚನೆ ಮಾಡಿದ್ದಾರೆ. ಈ ಮಠ ದಿಂದ ದೀಕ್ಷೆ ಪಡೆದ ದಾಸರು ಇವರು ರಚಿಸಿದ ತತ್ವಪದಗಳನ್ನು ಹಾಡುತ್ತ ಭಿಕ್ಷೆ ಬೇಡಿ ಜೀವಿಸುತ್ತಾರೆ.

ವೀರಜ್ಜನಹಳ್ಳಿ ಮಠ ಧಾರ್ಮಿಕ ಕಾರ್ಯಕ್ರಮಗಳನ್ನು ನಡೆಸುತ್ತಿದ್ದು ಶೈಕ್ಷಣಿಕ ಸಂಸ್ಥೆಗಳ ಸ್ಥಾಪನೆ ಕಡೆ ಹೆಚ್ಚು ಗಮನ ಹರಿಸಿದಂತೆ ಕಾಣುತ್ತಿಲ್ಲ. ಈ ಮಠದ ಹೆಸರಿನಲ್ಲಿ ೮ ಏಕರೆ ಜಮೀನು ಇದೆ. ರಾಯದುರ್ಗ ಮತ್ತು ಬೆಂಗಳೂರಿನಲ್ಲಿ ಮಠಗಳಿವೆ ಎಂದು ಹೇಳುತ್ತಾರೆ.

ಮಠದಲ್ಲಿ ನಿತ್ಯ ಧ್ಯಾನ, ದೀಕ್ಷೆಯಂತಹ ಧಾರ್ಮಿಕ ಕಾರ್ಯಕ್ರಮಗಳು ನಡೆಯುತ್ತವೆ. ವರ್ಷಪೂರ್ತಿ ಇಲ್ಲಿ ನಡೆಯುವ ಪ್ರಮುಖ ಕಾರ್ಯಕ್ರಮಗಳೆಂದರೆ ನವರಾತ್ರಿ ಉತ್ಸವ, ಗುರುಪೂರ್ಣಿಮಿ, ಆಷಾಡ ಮಾಸದಲ್ಲಿ ನಡೆಯುವ ೫ ದಿನಗಳ ಮಾರ್ಗ ಶುದ್ಧ ಪಂಚಮಿ ಕಾರ್ಯಕ್ರಮಗಳು ಪ್ರಮುಖವಾದವುಗಳು.

ದೊಂಬಿದಾಸ ಸಮುದಾಯದ ಒಬ್ಬ ಸ್ವಾಮೀಜಿ ಈ ಮಠದ ಮುಖ್ಯಸ್ಥರಾಗಿದ್ದರೂ ರಾಜ್ಯದಲ್ಲಿರುವ ದಾಸರಿಗೆ ಹೆಚ್ಚು ಪರಿಚಯವಿದ್ದಂತೆ ಕಾಣುತ್ತಿಲ್ಲ. ಇದು ಧಾರ್ಮಿಕ ಸಂಸ್ಥೆಯಾಗಿದ್ದು ದಾಸ ಸಮುದಾಯಕ್ಕೆಲ್ಲ ತನ್ನ ಪರಿಚಯ ಇರಿಸಿಕೊಂಡು ಸಮುದಾಯದ ಜೊತೆ ಸಂಸ್ಥೆ ಬೆಳೆಯಬೇಕಿದೆ. ಶ್ರೀ ಮಹದೇವ ಸ್ವಾಮಿಗಳು ಹೇಳುವಂತೆ ಇದಕ್ಕೆ ಸುಮಾರು ೪೦೦ ವರ್ಷಗಳ ಇತಿಹಾಸವಿದೆ. ಆದರೆ ಇದರ ಅಭಿವೃದ್ಧಿ ಮತ್ತು ವಿಸ್ತರಣೆ ಮಾತ್ರ ಆ ಸಮುದಾಯದ ಸ್ಥಿತಿಯಷ್ಟೆ ಶೋಚನೀಯ.

ದೊಂಬಿದಾಸರು ನಡೆದುಕೊಳ್ಳುವ ಮತ್ತೊಂದು ಗುರುಮಠ ಅಂದರೆ ಮಂಡ್ಯ ನಗರದ ಹೊಸಳ್ಳಿಯಲ್ಲಿರುವ "ಶ್ರೀ ಸದ್ಗುರು ಜ್ಞಾನಾನಂದ ಗುರುಸಂಜೀವರ ಗುರು ಶಿವಾಯ ಮಹಾ ಸಂಸ್ಥಾನ ಮಠ" ಇದು ಈ ಸಮುದಾಯದವರಿಗೆ ಗುರು ದೀಕ್ಷೆ ನೀಡಿ ಗುರುಪುತ್ರರನ್ನಾಗಿ ಮಾಡಿಕೊಂಡ ಶ್ರೀ ಸಂಜೀವ ಸ್ವಾಮಿಗಳ ಗದ್ದುಗೆ ಇರುವ ಸ್ಥಳ. ಇವರ ಶಿಷ್ಯಕೋಟಿಯಲ್ಲಿ ಒಬ್ಬರಾದ ಹಾಲಿ ಹೊಸಹಳ್ಳಿ ಗುರು ಮಠದ ಸಮೀಪವೇ ವಾಸ ಮಾಡುತ್ತಿರುವ ಶ್ರೀ ಮುತ್ತುರಾಯಪ್ಪ ಹೇಳುವಂತೆ, ಶ್ರೀ ಸಂಜೀವ ಸ್ವಾಮಿಗಳು ಅಪ್ಪಟ ವೈಷ್ಣವ ಸಂಪ್ರದಾಯಕ್ಕೆ ಸೇರಿದವರು. ಮೂಲತಃ ಇವರು ನಾಟಕ ಕಲಿಸುವ ಮಾಸ್ಟರ್ ಆಗಿದ್ದವರು. ಬಾಳೆಹೊನ್ನೂರಿನ ರಂಭಾಪುರಿಯ ಶಿವಾನಂದ ಸ್ವಾಮಿಗಳಿಂದ ಶೈವ ಸಂಪ್ರದಾಯದ ದೀಕ್ಷೆ ಪಡೆದು, ದಕ್ಷಿಣ ಕರ್ನಾಟಕದ ಎಲ್ಲಾ ಜಿಲ್ಲೆಗಳಲ್ಲೂ ಸಂಚರಿಸಿ ಜಾತಿ ಬೇಧವಿಲ್ಲದೆ ಎಲ್ಲರಿಗೂ ಗುರುದೀಕ್ಷೆ ನೀಡಿದ್ದಾರೆ. ನೂರಾರು ತತ್ವಪದ ಗಳನ್ನು ರಚಿಸಿ ಮೌಖಿಕವಾಗಿ ಹಾಡಿ ಅವರ ಎಲ್ಲಾ ಶಿಷ್ಯರುಗಳಿಗೆ ಕಲಿಸಿಕೊಟ್ಟಿದ್ದಾರೆ. ಈ ಕಾರಣದಿಂದಲೇ ಇಂದಿಗೂ ದೊಂಬಿದಾಸರು ಹಾಡುವ ಬಹಳಷ್ಟು ತತ್ವಪದಗಳು ಇವರ ರಚನೆಗಳೇ ಆಗಿವೆ. ಗುರುಬೋಧನೆ ಪಡೆದು ಏಕತಾರಿ ಜೊತೆ ಹಾಡುವ ತತ್ವಪದಗಳು ಇವರ ಜೀವನ ನಿರ್ವಹಣೆಗೂ ದಾರಿ ಮಾಡಿಕೊಟ್ಟಿವೆ ಎನ್ನುತ್ತಾರೆ ಇವರು. ಹುಟ್ಟಿನಿಂದ ವೈಷ್ಣವರಾದರೂ ಸಹ ಶೈವ ಸಂಪ್ರದಾಯಕ್ಕೆ ಸಂಬಂಧಿಸಿದ ಬೋಧನೆಗಳನ್ನೇ ಹೆಚ್ಚು ಮಾಡಿದ್ದಾರೆ. ತನ್ನ ಶಿಷ್ಯರನ್ನಾಗಿ ಸ್ವೀಕರಿಸಿದ ಎಲ್ಲರ ಮನೆಯಲ್ಲೂ ಊಟ ಉಪಚಾರಗಳನ್ನು ಸ್ವೀಕರಿಸುತ್ತಿದ್ದರು. ಜಾತಿ ಭೇದ ಲವಲೇಶವೂ ಇವರಲ್ಲಿ ಇರಲಿಲ್ಲ. ಈ ಕಾರಣದಿಂದಾಗಿ ಕೆಳ ಜಾತಿಯ ಸಾಕಷ್ಟು ಸಮುದಾಯಗಳು ಇವರ ಶಿಷ್ಯರಾಗಿದ್ದರು.

ಇವರು ಜ್ಞಾನ ಬಂಡಾರಿಗಳಾಗಿದ್ದು ಇವರನ್ನು ಜ್ಞಾನಾನಂದರೆಂದು ಕರೆಯ ಲಾಗುತ್ತಿತ್ತು. ಈ ಸಂಜೀವ ಸ್ವಾಮಿಗಳು ಮಾಂಸಮಡ್ಡಿ ಎಲ್ಲವನ್ನೂ ಸ್ವೀಕರಿಸುತ್ತಿದ್ದರು. ಯಾವುದೇ ರೀತಿಯ ಮಡಿ ಮೈಲಿಗೆ ಇರುತ್ತಿರಲಿಲ್ಲ. ಗೃಹಸ್ಥಾಶ್ರಮ ಧರ್ಮಕ್ಕೆ ವಿರೋಧವಿರಲಿಲ್ಲ. ಕುಟುಂಬದ ಎಲ್ಲಾ ಸದಸ್ಯರನ್ನು ತನ್ನ ಗುರುಮಕ್ಕಳಾಗಿ ಸ್ವೀಕರಿಸು ತ್ತಿದ್ದರು. ಈ ಸರಳ ಸಜ್ಜನಿಕೆಯ ಭೋದನೆಗಳು ಇವರಿಗೆ ಹೆಚ್ಚು ಶಿಷ್ಯಂದಿರನ್ನು ಪಡೆಯಲು ಅನುಕೂಲ ಮಾಡಿತ್ತು. ಮೇಲ್ವರ್ಗದ ಸಮುದಾಯ ಕೂಡ ಇವರ ಶಿಷ್ಯಂದಿರಾಗಿದ್ದರು. ಗುರುಮಕ್ಕಳಾದವರೆಲ್ಲರೂ ಸಮಾನರೇ. ಇವರಲ್ಲಿ ಜಾತಿ ಕುಲಗಳ ಬೇಧಭಾವವಿರುತ್ತಿರಲಿಲ್ಲ.

ರಾಜ್ಯದ ದಕ್ಷಿಣ ಭಾಗದ ಜಿಲ್ಲೆಗಳಾದ ಮೈಸೂರು ಮಂಡ್ಯ, ಹಾಸನ, ತುಮಕೂರು, ಬೆಂಗಳೂರು ಭಾಗಗಳಲ್ಲಿ ವಾಸಮಾಡುತ್ತಿರುವ ದೊಂಬಿದಾಸರು ಸಂಜೀವ ಸ್ವಾಮಿಗಳ ಶಿಷ್ಯವರ್ಗಕ್ಕೆ ಸೇರಿದವರೇ ಆಗಿದ್ದು; ಈಗಲೂ ಇವರು ಹೊಸಳ್ಳಿ ಗುರು ಮಠಕ್ಕೆ ನಡೆದುಕೊಳ್ಳುತ್ತಾರೆ. ಮಠದ ಆಡಳಿತದಲ್ಲಿ ಈ ಸಮುದಾಯ ಪಾಲ್ಗೊಂಡಿಲ್ಲ. ದಾಸರು ಈ ಮಠಕ್ಕೆ ಕೇವಲ ಭಕ್ತರು ಮಾತ್ರ.

ಈ ಭಾಗದ ದೊಂಬಿದಾಸರು ರಾಮನಗರ ಸಮೀಪ ಇರುವ ರೇವಣಸಿದ್ದೇಶ್ವರ ಬೆಟ್ಟದಲ್ಲಿರುವ ಜಗದ ಆದಿಗುರು ರೇಣುಕಾಚಾರ್ಯರ ಧಾರ್ಮಿಕ ಮಹೋತ್ಸವದಲ್ಲೂ ಭಾಗವಹಿಸುತ್ತಾರೆ. ತಲೆ ಮುಡಿಕೊಡುವ ಪದ್ಧತಿ ಕೂಡ ಇದೆ. ಹೊಸಳ್ಳಿ ಮಠ ಮತ್ತು ರೇವಣಸಿದ್ದೇಶ್ವರ ಬೆಟ್ಟ ಈ ಭಾಗದ ಧಾರ್ಮಿಕ ಕೇಂದ್ರಗಳು.

ಹಬ್ಬಗಳು

ಧಾರ್ಮಿಕ ನಂಬಿಕೆ ಮತ್ತು ಸಂಪ್ರದಾಯಗಳ ರೂಪವೆ ಹಬ್ಬಗಳು. ಜನಪದರು ಹಳ್ಳಿಗಾಡಿನ ಹಬ್ಬಗಳಿಗೆ ವಿಶೇಷ ಮನ್ನಣೆ ನೀಡುತ್ತಾರೆ. ಎಲ್ಲಾ ಸಂಸ್ಕೃತಿಯಲ್ಲೂ ಯುಗಧರ್ಮಗಳಿಗೆ ಅನುಗುಣವಾಗಿ ಹಬ್ಬಗಳನ್ನು ಆಚರಿಸುತ್ತಾರೆ.

ವಿದ್ವಾಂಸರಾದ ಬಾಗ್ಸ್ ಹೇಳುವಂತೆ "ಸಾಮಾನ್ಯವಾಗಿ ಪ್ರತಿ ವರ್ಷ ಸಾಮಾಜಿಕ ಕ್ಷೇಮಕ್ಕಾಗಿ ವಿಶೇಷ ಸಂದರ್ಭದಲ್ಲಿ ಆಚರಿಸುವ ಜಾನಪದ ಸಂಗತಿಗಳ ಮತ್ತು ಸಂಪ್ರದಾಯಗಳ ಸಮ್ಮಿಶ್ರ ಜಟಿಲ ಘಟಕವೇ ಹಬ್ಬ" ಎಂದಿದ್ದಾನೆ.

ದೊಂಬಿದಾಸರು ಪಿತೃಪಕ್ಷ, ಸಂಕ್ರಾಂತಿ, ಕಾರುಹುಣ್ಣಿಮೆ, ಯುಗಾದಿ, ನಾಗರಪಂಚಮಿ, ಗೌರಿಗಣೇಶ, ದೀಪಾವಳಿ, ಗ್ರಾಮದೇವತೆ ಹಬ್ಬಗಳು, ಮನೆದೇವರ ಹಬ್ಬಗಳು, ಹೀಗೆ ವೈಶಿಷ್ಟ್ಯ ಪೂರ್ಣವಾಗಿ ಹಲವಾರು ಹಬ್ಬಗಳು ಆಚರಿಸುತ್ತಾರೆ. ದಾಸ ಸಮುದಾಯಕ್ಕೆ ಶನಿವಾರ ತುಂಬ ಪವಿತ್ರವಾದ ದಿನ.

**ಹಿರಿಯರ ಹಬ್ಬ (ಪೆದ್ದಲ ಅಮಾಸ್ಯೆ) :** ಸತ್ತರವ ನೆನಪಿನಲ್ಲಿ ವರ್ಷಕ್ಕೊಮ್ಮೆ ನೆರವೇರಿಸುವ ಆಚರಣೆಯನ್ನು ಶಿಷ್ಟ ಪರಂಪರೆಯಲ್ಲಿ ಪಿತೃಪಕ್ಷ ಶ್ರಾದ್ಧ ಎಂದು ಕರೆದರು. ದೊಂಬಿದಾಸರಲ್ಲಿ ಇದನ್ನು ಹಿರಿಯರ ಹಬ್ಬ, ಪೆದ್ದಲ ಅಮಾಸೆ, ಪೆದ್ದಲ ಪಕ್ಷ ಎಂತಲೂ ಕರೆಯುತ್ತಾರೆ. ಸಾಮಾನ್ಯವಾಗಿ ಮಹಾಲಯ ಅಮಾವಾಸ್ಯೆಯ ಹಿಂದಿನ ಮತ್ತು ಮುಂದಿನ ದಿನಗಳು ಅಥವಾ ಅಮಾವಾಸ್ಯೆಯ ದಿನದಂದೆ ಪೆದ್ದಲ ಪಕ್ಷ ಆಚರಿಸುತ್ತಾರೆ. ತೀರಿಕೊಂಡ ತಂದೆ, ತಾಯಿ, ತಾತ, ಮುತ್ತಾತ ಅಜ್ಜಿ-ಮುತ್ತಜ್ಜಿ, ತಮಗಿಂತ ಕಿರಿಯ ಈ ಎಲ್ಲರ ನೆನಪಿನಲ್ಲಿ ಸಾಮೂಹಿಕವಾಗಿ ಈ ಪೆದ್ದಲು ಅಮಾವಾಸ್ಯೆ ಯನ್ನು ಆಚರಿಸುತ್ತಾರೆ. ಈ ಹಬ್ಬ ಆಚರಣೆ ಕುರಿತಂತೆ ಜನಪದರ ನಡುವೆ ಒಂದು ಗಾದೆ ಮಾತಿದೆ. "ಮಗನ ಮಾರಿ ಮಾರಲಾಮಿ ಮಾಡು" ಅಂದರೆ ಎಂಥದೆ ಆರ್ಥಿಕ ಸಂಕಷ್ಟದ ಪರಿಸ್ಥಿತಿ ಇದ್ದರೂ ಈ ಹಿರಿಯರ ಹಬ್ಬವನ್ನು ತಪ್ಪದೆ ಮಾಡಬೇಕು ಎಂಬುದು ಜನಪದರ ನಂಬಿಕೆ.

**ಆಚರಣೆ ವಿಧಾನ**

ಯಥಾ ಪ್ರಕಾರ ಮನೆ ಮಠಗಳನ್ನು ಗುಡಿಸಿ ಸಾರಿಸಿ ಶುಭ್ರಗೊಳಿಸುತ್ತಾರೆ. ಎಲ್ಲರೂ ಸ್ನಾನ ಮಾಡಿ ಮಡಿಯುಡುತ್ತಾರೆ. ಸಾಮಾನ್ಯವಾಗಿ ರಾತ್ರಿವೇಳೆ ಹಿರಿಯರಿಗೆ ಎಡೆ ಹಾಕುವ ಪದ್ಧತಿ ಇದೆ. ಎಡೆಹಾಕುವ ಜಾಗವನ್ನು ಸಗಣಿಯಿಂದ ಸಾರಿಸಿ ರಂಗೋಲಿ ಹಾಕುತ್ತಾರೆ. ಜೊತೆಗೆ ವೈಷ್ಣವ ಸಂಪ್ರದಾಯದ ಚಿಹ್ನೆಯಾದ ಕೂರ್ಮಾವತಾರದ ಚಿತ್ರ ಬರೆದು ಬಾಳೆ ಎಲೆಹಾಸಿ ಅದರ ಮೇಲೆ $^{1}/_{2}$ ಸೇರಿನಷ್ಟು ಅಕ್ಕಿ

ಹಾಕಿ ಕಳಶ ಇಡುತ್ತಾರೆ. ಮನೆಯಲ್ಲಿ ತಯಾರಿಸಿದ ಅನ್ನ–ಮುದ್ದೆ ರೊಟ್ಟಿ, ಸುಟ್ಟ ಮಾಂಸ, ಸಿಹಿತಿಂಡಿಗಳು, ಕಾರಾತಿಂಡಿಗಳು, ಹಣ್ಣು–ಹಂಪಲು, ಹೆಂಡ–ಸರಾಯಿ, ಬೀಡಿ, ಸಿಗರೇಟು ಭಂಗಿಸೊಪ್ಪು, ಎಲೆ ಅಡಿಕೆ, ಹೊಸ ಬಟ್ಟೆಗಳು, ನಶ್ಯ, ಹೀಗೆ ಸಾಧ್ಯವಾಗದಷ್ಟು ಅವರು ಜೀವಿತ ಅವಧಿಯಲ್ಲಿ ಏನೆಲ್ಲ ಸೇವಿಸುತ್ತಿದ್ದರೋ ಅವೆಲ್ಲವನ್ನು ಅವರ ಶಕ್ತ್ಯಾನುಸಾರ ಎಡೆ ಇಟ್ಟು ಅರ್ಪಿಸುತ್ತಾರೆ. ಪೂರ್ವಕ್ಕೆ ಮುಖಮಾಡಿ ಎಡೆಹಾಕುತ್ತಾರೆ. ಕುಟುಂಬದ ಎಲ್ಲಾ ಸದಸ್ಯರು ನೆಂಟರಿಷ್ಟರು ಈ ಎಡೆಗೆ ಪೂಜೆ ಮಾಡುತ್ತಾರೆ. ಸಾಂಬ್ರಾಣಿ ದೂಪ ಹಾಕುತ್ತಾರೆ. ಸತ್ತ ಹಿರಿಯರನ್ನು ನೆನೆಸಿಕೊಂಡು ಈ ಎಲ್ಲವನ್ನು ಅರ್ಪಿಸಿಕೊಂಡು ನಮ್ಮ ಕುಟುಂಬದ ಸದಸ್ಯರೆಲ್ಲರಿಗೂ ಯಾವುದೇ ಕಷ್ಟ ಕಾರ್ಪಣ್ಯಗಳು ಬರದಂತೆ ಕಾಪಾಡಿ ಎಂದು ಬೇಡಿಕೊಳ್ಳುತ್ತಾರೆ. ಆ ಎಡೆಗೆ ಮಹಾ ಮಂಗಳಾರತಿ ಮಾಡಿ ಎಡೆಯ ಮುಂದೆ ಒಂದು ಬಟ್ಟೆಯಿಂದ ತೆರೆ ಹಾಕಿ ಕೆಲಸಮಯ ನಿಶಬ್ಧತೆಯನ್ನು ಕಾಯ್ದುಕೊಳ್ಳುತ್ತಾರೆ. ಈ ಸಂದರ್ಭದಲ್ಲಿ ಗತಿಸಿದ ಹಿರಿಯರು/ಕಿರಿಯರು ಬಂದು ಎಡೆಯನ್ನು ಸ್ವೀಕರಿಸಿ ಹೋಗುತ್ತಾರೆಂಬುದು ಇವರ ನಂಬಿಕೆ. ನಂತರ ಎಲ್ಲರೂ ಕೂಡಿ ಊಟ ಮಾಡಿ ಸಂಭ್ರಮಿಸುತ್ತಾರೆ. ಇನ್ನು ಮುಂದಿನ ಅಮಾವಾಸ್ಯೆಯವರೆಗೆ ಹಿರಿಯರ ಹಬ್ಬ ನೆನಪಿನಲ್ಲಷ್ಟೆ ಉಳಿದಿರುತ್ತದೆ.

### ಗ್ರಾಮದೈವಗಳು

ಗ್ರಾಮದೈವಗಳು ಯಾವುದೇ ಒಂದು ಕುಲ (ಬೆಡಗು)ಕ್ಕೆ ಸೀಮಿತವಾಗಿರುವುದಿಲ್ಲ. ಸಾಮಾನ್ಯವಾಗಿ ಆ ಗ್ರಾಮದಲ್ಲಿ ವಾಸಿಸುವ ಇತರೆ ಎಲ್ಲಾ ಸಮುದಾಯಗಳ ಅಥವಾ ಒಂದೇ ಸಮುದಾಯಕ್ಕೆ ಸೇರಿದ ಎಲ್ಲಾ ಬೆಡಗಿನ ಕುಲಸ್ಥರು ಕೂಡಿ ಗ್ರಾಮ ದೇವತೆಯ ಹಬ್ಬವನ್ನು ಆಚರಿಸುತ್ತಾರೆ. ಇಲ್ಲಿಯೂ ಬಲಿ ಕೊಡುವ ಪದ್ಧತಿ ಇರುತ್ತದೆ. ಎಲ್ಲಾ ಮನೆಗಳಿಂದ ತಳಿಗೆ (ತಂಬಿಟ್ಟಿನ) ತಟ್ಟೆ ತಂದು ಎಲ್ಲರು ಸೇರಿ ಪೂಜೆ ಮಾಡಿ ಕುರಿ, ಕೋಳಿ ಮೇಕೆ ಬಲಿಕೊಡುತ್ತಾರೆ. ಈ ಹಬ್ಬಗಳನ್ನು ಇಡೀ ಗ್ರಾಮ ಸಾಮೂಹಿಕವಾಗಿ ಆಚರಿಸುತ್ತದೆ. ಊರಲ್ಲಿನ ದನಕರುಗಳಿಗೆ, ಮಕ್ಕಳು ಮರಿಗಳಿಗೆ ಆಕಸ್ಮಿಕಗಳು ಜರುಗದಿರಲೆಂದು, ಬಲಿಕೊಟ್ಟು ಪೂಜೆ ಮಾಡಿ ಗ್ರಾಮದೇವತೆಗಳನ್ನು ಸಂತೃಪ್ತಿಪಡಿಸುವುದ ರಿಂದ ಗ್ರಾಮಕ್ಕೆ ಒಳ್ಳೆಯದಾಗುತ್ತದೆಂದು ನಂಬುತ್ತಾರೆ.

## ದೈವ ಸಂಬಂಧಿ ಪರಿಕಲ್ಪನೆಗಳು

ದೈವ ಸಂಬಂಧಿ ಪರಿಕಲ್ಪನೆ ಬಹುತೇಕ ಪ್ರಕೃತಿ ಮೂಲದ್ದು. ಅಗೋಚರವಾದ ಶಕ್ತಿಗಳನ್ನು ವಶಪಡಿಸಿಕೊಳ್ಳಲು, ಕ್ರೂರದೃಷ್ಟಿಯಿಂದ ಪಾರಾಗಲು ಭಯಭಕ್ತಿಗಳನ್ನೊಳ ಗೊಂಡ ಅನೇಕ ಆಚರಣೆಗಳನ್ನು ಮಾಡಿ ದೈವಗಳನ್ನು ತೃಪ್ತಿ ಪಡಿಸಲು ಪ್ರಯತ್ನಿಸುತ್ತಾರೆ. ದೇವರು, ದೆವ್ವ, ಪಿಶಾಚಿ, ಅತಿಮಾನುಷ ಶಕ್ತಿಗಳ ಬಗ್ಗೆ ಮೊದಲಿನಿಂದಲೂ ಮಾನವ ಎಚ್ಚರಿಕೆ ವಹಿಸುತ್ತಲೇ ಬಂದಿದ್ದಾನೆ. ಪಾಪ, ಪುಣ್ಯ, ಸ್ವರ್ಗ, ನರಕದ ಕಲ್ಪನೆಗಳು ಹಿಂದೂ ಧರ್ಮದ ಪರಿಧಿಯ ಒಳಗೆ ಯತೇಚ್ಛವಾಗಿ ಗೋಚರಿಸುತ್ತವೆ. ಈ ತರಹದ ಕಲ್ಪನೆಗಳು ಮತ್ತು ಆಚರಣೆಗಳನ್ನು ದೊಂಬಿದಾಸ ಸಮುದಾಯದಲ್ಲಿಯೂ ಕಾಣ ಬಹುದು.

## ಜನಪದ ವೈದ್ಯ

ಮನುಷ್ಯನಿಗೆ ಹತ್ತು ಹಲವು ರೋಗಗಳು ಬಾದಿಸುವುದು ಸಹಜವೆ. ರೋಗ ಸಂಭವಿಸಿದಾಗ ಅದರ ನಿವಾರಣೆಗಾಗಿ ಅಗತ್ಯವಿರುವ ಚಿಕಿತ್ಸಾ ವಿಧಾನಗಳನ್ನು ಮತ್ತು ಮದ್ದುಗಳನ್ನು ಕಂಡುಕೊಂಡು ಉಪಯೋಗಿಸುವುದು ಮಾನವನಿಗೆ ಆದಿಕಾಲದಿಂದಲೂ ತಿಳಿದಿದೆ. ಸಮಾಜದಲ್ಲಿ ಉತ್ತಮ ವ್ಯಕ್ತಿಯಾಗಿ ರೂಪುಗೊಳ್ಳಬೇಕಾದರೆ, ಉತ್ತಮ ಆರೋಗ್ಯ ಸಂಪಾದಿಸಿ ಕೊಳ್ಳಬೇಕಾದ್ದು ಅವಶ್ಯ. ಪುರಂದರ ದಾಸರು ಹೇಳುವಂತೆ 'ಮಾನವ ಜನ್ಮ ದೊಡ್ಡದು, ಇದ ಹಾನಿಮಾಡಬೇಡಿ ಹುಚ್ಚಪ್ಪಗಳಿರಾ" ಎಂಬಂತೆ ಆರೋಗ್ಯದ ಬಗ್ಗೆ ನಿರ್ಲಕ್ಷ್ಯವಹಿಸುವುದು ಸರಿಯಲ್ಲ ಎಂಬುದು ಈ ಸಮುದಾಯದ ಆಶಯ.

ಬೇರೆ ಬೇರೆ ಕಾರಣಗಳಿಂದ ಮನುಷ್ಯನ ದೇಹದ ಮೇಲೆ ಹತ್ತು ಹಲವು ತರಹದ ರೋಗಗಳು ಬರುವುದುಂಟು. ಒಂದೊಂದು ರೋಗಕ್ಕೂ ತನ್ನದೇ ಆದ ಒಂದೊಂದು ಕಾರಣವಿರುತ್ತದೆ. ಸಣ್ಣಪುಟ್ಟ ರೋಗಗಳಾದ ಚಳಿ, ಜ್ವರ, ತಲೆ ನೋವು, ಬೇಧಿ ಇವುಗಳು ಭಾದಿಸಿದಾಗ ದೊಂಬಿದಾಸ ಸಮುದಾಯ ಕೂಡ ತನ್ನ ಸುತ್ತಮುತ್ತಲ ಪರಿಸರದಿಂದ, ಅಂಗಳ, ಹಿತ್ತಲು ಕಾಡುಗಳಲ್ಲಿ ದೊರೆಯುವ ಸಸ್ಯಗಳಿಂದ ಔಷಧೀಯನ್ನು ಮನೆಮದ್ದನ್ನಾಗಿ ತಯಾರಿಸಿಕೊಂಡು ಉಪಯೋಗಿಸುತ್ತಾರೆ.

**ಚಳಿಜ್ವರಕ್ಕೆ :** ಬೇವಿನ ಚಕ್ಕೆ ಪುಡಿಮಾಡಿ ಕಶಾಯ ಮಾಡಿ ಜೀರಿಗೆ ಪುಡಿಹಾಕಿ ಕುಡಿಸುವುದರಿಂದ ಶಮನ.

**ಕೆಮ್ಮಿಗೆ :** ತುಂಬೆಸೊಪ್ಪಿನ ರಸ, ಸುಣ್ಣ, ಬೆಳ್ಳುಳ್ಳಿ, ಮತ್ತು ಲವಂಗ ಅಗಿದು ದವಡೆಯಲ್ಲಿ ಒತ್ತರಿಸಿಕೊಂಡು ರಸಕುಡಿದರೆ ಕೆಮ್ಮು ಶಮನ.

**ತಲೆ ನೋವಿಗೆ :** ರಾಗಿಹಿಟ್ಟು, ಇದ್ದಿಲು ಅರೆದು ಪಟ್ಟಿಹಾಕುವುದು, ಹಾಗೂ ಹಣೆಯ ಮೇಲ ಕಾಣುವ ನರಗಳ ಮೇಲೆ ಬಳೆಗಾಜು ಅಥವಾ ಊದುಬತ್ತಿಯಿಂದ ಸುಡುವುದು (ಚಿಟಿಕೆ). ಒಂದೇ ಕಡೆ ತಲೆ ನೋವು ಬರುತ್ತಿದ್ದರೆ, ಹಣೆಯ ನರಗಳನ್ನು ನಟಿಕೆಬರುವಂತೆ ಹಲ್ಲಿನಿಂದ ಕಚ್ಚಿ ಎಳೆದರೆ ಅರೆ ತಲೆಶೂಲೆ ಶಮನ.

**ದಮ್ಮಿಗೆ :** ವಿಷಾಂಪುರಿ ಸೊಪ್ಪಿನ ಕಶಾಯ ಕುಡಿಸುವುದು.

**ಪಕ್ಕೆ ಸೂಲು :** ಸೀಗೆ ಬಳ್ಳಿಯಲ್ಲಿ ಒಂದು ತರಹ ಹಾಲು ಬರುತ್ತದೆ. ಈ ಹಾಲನ್ನು ಕುಡಿಸಿದರೆ ಪಕ್ಕೆಸೂಲೆ ವಾಸಿಯಾಗುತ್ತದೆ. ಕತ್ತೆ ಹಾಲು ಸಹ ಮಕ್ಕಳಿಗೆ ಉಪಯುಕ್ತ ಔಷಧಿ.

**ಶೀತಕ್ಕೆ :** ವೀಳ್ಯದೆಲೆ ತೊಟ್ಟು, ಬೆಳ್ಳುಳ್ಳಿ, ಮೆಣಸು, ಶುಂಠಿ, ಅರಿಶಿಣವನ್ನು ಕಲ್ಲಿನ ಮೇಲೆ ತೇದು ಹಣೆಗೆ ಲೇಪ ಹಾಕುವುದು (ಮಕ್ಕಳಿಗೆ).

**ಪತ್ತುಮಂಡ :** ಮುತ್ತುಗದ ಕಾಯಿಯನ್ನು ನಿಂಬೆರಸದಲ್ಲಿ ಅರೆದು ಲೇಪ ಹಾಕುವುದು.

**ಜಾಂಡೀಸ್‌ಗೆ :** ಜಗಳಗಂಟಿ ಮರದ ಸೊಪ್ಪು ಮತ್ತು ತೊಗಟೆಯಿಂದ ತೆಗೆದ ರಸಕ್ಕೆ ಮಜ್ಜಿಗೆ ಹಸುವಿನ ಬೆಣ್ಣೆ, ಜೀರಿಗೆ, ಕಲ್ಸಾರು, ಏಲಕ್ಕಿ ಸೇರಿಸಿ ಅಕ್ಕಿಯ ಜೊತೆ

ಹೊಸ ಮಡಿಕೆಯಲ್ಲಿ ಹಾಕಿ ಒಂದೇ ತರದ ಸೌದೆಯಿಂದ ಬೇಯಿಸಿ ಇದರ ಕಿಚಡಿಯನ್ನು ತಿನ್ನಿಸುವುದು.

**ಹಕ್ಕಿರೋಗ :** ಇದು ಮಕ್ಕಳಲ್ಲಿ ಕಾಣಿಸಿಕೊಳ್ಳುವ ರೋಗ. ಕಾಡು ಕಡ್ಲೆಕಾಯಿ ಗಿಡದ ಕಡ್ಡಿಯನ್ನು ದಾರದಲ್ಲಿ ಸುತ್ತಿ ಮಗುವಿನ ಕಾಲಿಗೆ ಅಥವಾ ಕತ್ತಿಗೆ ಕಟ್ಟುವುದರಿಂದ ಈ ರೋಗ ವಾಸಿಯಾಗುತ್ತದೆ.

**ಇಸುಬು ರೋಗಕ್ಕೆ :** ಒಣಗಿರುವ ಹೊಂಗೆ ಬೀಜವನ್ನು ಮೂತ್ರದಲ್ಲಿ ತೇದು ಕೋಳಿ ಪುಕ್ಕದಿಂದ ಗಾಯದ ಮೇಲೆ ಲೇಪಿಸುವುದರಿಂದ ಈ ರೋಗ ವಾಸಿಯಾಗುತ್ತದೆ.

**ನೀರು ಇಸುಬು :** ಆಡುಮುಟ್ಟದ ಸೊಪ್ಪು ಮತ್ತು ಮೇಕೆ ಹಿಕ್ಕೆಯನ್ನು ಹಳೇ ಗಂಜಲದಲ್ಲಿ ತೇದು ಜೊತೆಯಲ್ಲಿ ಬೆಳ್ಳುಳ್ಳಿ ಮೆಣಸು ಬೆರೆಸಿ ಲೇಪ ಹಾಕುವುದು.

**ಆಧುನಿಕ ವೈದ್ಯಪದ್ಧತಿ ಮತ್ತು ವೈದ್ಯರ ಕುರಿತು ಸಮುದಾಯದ ಮನೋಭಾವಗಳು**

ಹಳೆ ತಲೆಮಾರಿನ ಜನಕ್ಕೆ ಈ ಪದ್ಧತಿಯಲ್ಲಿ ನಂಬಿಕೆ ಇರಲ್ಲಿಲ್ಲ. ಕೆಲವೊಮ್ಮೆ ಈ ವೈದ್ಯರು ಅವರು ನೀಡುವ ಚುಚ್ಚುಮದ್ದು ಕಂಡರೆ ಹೆದರಿ ಓಡುತ್ತಿದ್ದರು. ಆದರೆ ಅರಣ್ಯನಾಶದ ಪರಿಣಾಮವಾಗಿ ಕಾಡಿನಲ್ಲಿ ದೊರೆಯುತ್ತಿದ್ದ ಔಷಧೀಯ ಸಸ್ಯಗಳು ನಾಶವಾದಂತೆ ಇವರಲ್ಲಿದ್ದ ನಾಟಿ ವೈದ್ಯಪದ್ಧತಿ ಕಣ್ಮರೆಯಾಗುತ್ತಾ ಬಂತು. ತಮಗೆ ತಿಳಿದ್ದಿದ್ದ ಔಷದೀಯ ಸಸ್ಯಗಳನ್ನು ಮತ್ತು ಅದರ ಉಪಯೋಗವನ್ನು ಹೊಸ ತಲೆಮಾರಿನವರಿಗೆ ವರ್ಗಾಯಿಸದ ಕಾರಣ ಈ ಜ್ಞಾನ ಸಂಪತ್ತು ನಾಶವಾಗ ತೊಡಗಿದೆ. "ಔಷಧಿ ಸಸ್ಯದ ಹೆಸರನ್ನು ಹೇಳಿಬಿಟ್ಟರೆ ಅದರ ರೋಗ ವಾಸಿಯಾಗುವ ಗುಣ ಕಳೆದುಕೊಳ್ಳುತ್ತದೆ ಎಂಬ ಮೂಢನಂಬಿಕೆಯಿಂದಾಗಿ ಈ ವೈದ್ಯಪದ್ಧತಿ ಅವಸಾನದ ಅಂಚಿಗೆ ತಲುಪಿದೆ. ಈಗ ಸಮುದಾಯ ಅನಿವಾರ್ಯವಾಗಿ ಆಧುನಿಕ ವೈಧ್ಯ ಪದ್ಧತಿಗೆ ಹಾಗೂ ಅದರ ಶೀಘ್ರಗುಣಪಡಿಸುವ ಕ್ರಿಯೆಯಿಂದಾಗಿ ತನ್ನ ಹಳೆಯ ನಾಟಿ ವೈದ್ಯ ಪದ್ಧತಿಯನ್ನು ಕಳೆದು ಕೊಳ್ಳುತ್ತಾ ಈಗಿನ ಆಧುನಿಕ ವೈಧ್ಯ ಪದ್ಧತಿಗೆ ತನ್ನ ಮನೋಭಾವವನ್ನು ಹೊಂದಿಸಿಕೊಳ್ಳುತ್ತಿದೆ.

**ಮಾಟಮಂತ್ರ**

ಮಾಟಮಂತ್ರ ಜಾತಿ, ಧರ್ಮದಷ್ಟೆ ಪುರಾತನವಾದದ್ದು, ಮಾನವ ತನ್ನ ಜೀವನದಲ್ಲಿ ಉಂಟಾದ ಸಂದಿಗ್ಧತೆಯಿಂದ ಪಾರಾಗಲು ಮಾಟಮಂತ್ರಗಳನ್ನು ಸೃಷ್ಟಿಸಿಕೊಂಡ. ನಿಜಜೀವನದಲ್ಲಿ ಉಂಟಾದ ಕಠಿಘಟನೆಗಳನ್ನು ಎದುರಿಸಲು ಅಲೌಕಿಕ ಶಕ್ತಿಗಳ ಮೊರೆಹೊಕ್ಕ. ಧರ್ಮ ತನ್ನಿಂದ ಸಾಧಿಸಲು ಅಸಾಧ್ಯವಾದುದನ್ನು ಇಂತಹ ಶಕ್ತಿಗಳ ಮೂಲಕ ಸಾಧಿಸಬಹುದು ಎಂಬ ಅಭಿಪ್ರಾಯ ಅವನಲ್ಲಿ ಅಂಕುರಿಸಿತು. ಫ್ರೇಸರ್‌ನ ಪ್ರಕಾರ ದೇವತಾರಾಧನೆಯ ಮುಂದಿನ ಘಟ್ಟವೇ ಮಾಟ-ಮಂತ್ರ ಮಂತ್ರ ವಿದ್ಯೆಯನ್ನು ಫ್ರೇಸರ್ "ಪ್ರಾಚೀನ ವಿಜ್ಞಾನ" ಎಂದು ಕರೆದಿದ್ದಾನೆ.

ಈ ಸಮುದಾಯದಲ್ಲಿ ಮಾಟಮಂತ್ರ ಅಲೌಕಿಕ ಶಕ್ತಿಗಳ ಬಗ್ಗೆ ನಂಬಿಕೆ ಇತ್ತು. ಆದರೆ ಇದನ್ನು ಆಚರಣೆಯಲ್ಲಿ ಅಳವಡಿಸಿಕೊಂಡಿರಲಿಲ್ಲ. ಬೇರೆಯವರಿಗೆ

ಕೇಡುಮಾಡುವ ಇದರ ಮೂಲ ಗುಣವನ್ನು ಬಳಸಿಕೊಳ್ಳದೆ ಪೀಡೆ ನಿರ್ಮೂಲನೆಗೆ ಕೆಲವು ಮಾಂತ್ರಿಕ ನುಡಿಗಳನ್ನು ಹೇಳಿ ಸಣ್ಣ ಪುಟ್ಟ ಕಾಯಿಲೆಗಳನ್ನು ಗುಣಪಡಿಸುವುದು, ಕವಡೆ ಶಾಸ್ತ್ರ ಹೇಳುವುದು, ತಡಹೊಡೆಯುವುದು, ಯಾವುದೋ ಭೀತಿಯಿಂದ ಭಯಗೊಂಡವರಿಗೆ ಪೂಜೆ ಮಾಡಿ, ಕೋಳಿ ಬಲಿಕೊಟ್ಟು ಆ ಭೀತಿ ಪರಿಹರಿಸುವುದು, ಮಕ್ಕಳು ನಿದ್ರೆಯಲ್ಲಿ ಎಚ್ಚರವಾಗಿ ಬೆಚ್ಚಿ ರಚ್ಚೆ ಹಿಡಿದು ಗಲಾಟೆ ಮಾಡುವಾಗ ಮಗುವಿಗೆ ಬಾಲಗ್ರಹದ ಅಂತ್ರ(ತಾಯತ) ಬರೆಯಿಸಿ ಕೊರಳಿಗೆ ಕಟ್ಟುವುದು. ವಿಭೂತಿಯನ್ನು ಮಂತ್ರಿಸಿ ಮಗುವಿನ ಮೈಯಿಗೆ ಹಚ್ಚುವುದು. ಹೀಗೆ ಒಳ್ಳೆಯ ಕಾರ್ಯಗಳಿಗೆ ಇದನ್ನು ಬಳಸುತ್ತಿದ್ದರು. ಅದರ ಕೆಲವು ಕ್ರಮಗಳು ಹೀಗಿವೆ.

**ಗಂಗಳದ ಸೋಕು**

ಅತಿಬೇದಿ ಆಗುತ್ತಿದ್ದ ಸಂದರ್ಭದಲ್ಲಿ, ಒಂದು ಗಂಗಳದಲ್ಲಿ ಸಗಣಿ ಕಲಸಿ ಗಂಗಳವನ್ನು ವ್ಯಕ್ತಿಯ ಮುಂದೆ ಇಟ್ಟು, ಒಂದು ಲೋಟ ಅಥವಾ ಮಿಳ್ಳೆಯಲ್ಲಿ ಬಟ್ಟೆ ಚೂರು ಹಾಕಿ ಬಟ್ಟೆಗೆ ಬೆಂಕಿ ಹಚ್ಚಿ, ಮೂರು ಸಾರಿ ಆ ವ್ಯಕ್ತಿಯ ಮುಖದ ಮುಂದೆ ನೀವಳಿಸಿ ಗಂಗಳದಲ್ಲಿದ್ದ ಸಗಣಿ ಬಗ್ಗಡಕ್ಕೆ ಬೋರಲಾಗಿ ಹಾಕುತ್ತಿದ್ದರು. ಅದು ಆ ಗಂಗಳದ ತಳವನ್ನು ಬಿಗಿಯಾಗಿ ಕಚ್ಚಿಕೊಂಡರೆ ಆಗುತ್ತಿದ್ದ ಬೇದಿ ನಿಲ್ಲುತ್ತದೆ ಎಂಬುದು ಇವರ ನಂಬಿಕೆಯಾಗಿತ್ತು. ಇದನ್ನು ಕಾಲ್ಹೂಳು ಎಂದು ಕರೆಯುತ್ತಾರೆ. ಈ ಶಾಸ್ತ್ರ ಮಾಡುವುದರಿಂದ ಕಾಲ್ಹೂಳು ಪರಿಹಾರ ಎಂಬುದು ಇವರ ನಂಬಿಕೆ.

**ಕೆಂಡ ಸೋಕು**

ಒಂದು ಅಗಲವಾದ ಗಂಗಳದಲ್ಲಿ ನೀರು ಅರಿಶಿಣದ ಪುಡಿ, ಕಸಪರಕೆ ಕಡ್ಡಿಯ ಒಂದೆರಡು ತುಂಡು ಹಾಕಿ, ರೋಗಪೀಡಿತ (ಭಯಬೀತ) ವ್ಯಕ್ತಿಯ ಮುಂದೆ ಈ ಗಂಗಳ ಇಟ್ಟು ಬೆಂಕಿ ಕೆಂಡವನ್ನು ಒಂದು ತಟ್ಟೆ ಅಥವಾ ಕರಟದಲ್ಲಿ ತುಂಬಿಕೊಂಡು ಅದಕ್ಕೆ ನಾಲ್ಕೈದು ಗಂಧದ ಕಡ್ಡಿಯ ತುಂಡನ್ನು ಹಾಕಿ ವ್ಯಕ್ತಿಯ ಮುಂದೆ ನೀವಳಿಸಿ ಶಕ್ತಿದೇವತೆಯನ್ನು ನೆನೆದು ಮಂತ್ರ ಹೇಳಿ, ಹಿಡಿದಿರುವ ಕೆಟ್ಟ ಶಂಕೆ ಬಿಡುಗಡೆ ಯಾಗಲೆಂದು ಪ್ರಾರ್ಥಿಸಿ, ಮೂರು ಸಾರಿ ನೀವಳಿಸಿದ ಕೆಂಡವನ್ನು ತಣಿಗೆ (ಗಂಗಳ) ಯಲ್ಲಿರುವ ನೀರಿನ ಒಳಕ್ಕೆ ಹಾಕುತ್ತಾರೆ. ಗಂಗಳದ ನೀರು ಕೆಂಪು ಬಣ್ಣಕ್ಕೆ ತಿರುಗಿದರೆ ಆತನಿಗೆ ಯಾವುದೋ ಶಂಕೆ ಮೆಟ್ಟಿತ್ತು ಎಂದು ಭಾವಿಸುತ್ತಾರೆ. ಈಗ ಅದು ಪರಿಹಾರ ಆಗಿದೆ ಎಂದು ನಂಬುತ್ತಾರೆ. ಹಣೆಗೆ ತಿಲಕ ಇಟ್ಟು ಈ ಗಂಗಳದಲ್ಲಿನ ನೀರನ್ನು ೩ ದಾರಿ ಕೂಡುವ ಜಾಗದಲ್ಲಿ ಪಾಕಿ ಬರುತ್ತಾರೆ. ಬಾದೆ ಪೀಡಿತ ವ್ಯಕ್ತಿ ಗೆಲುವಾಗಿರುವುದನ್ನು ಕಾಣುತ್ತಾರೆ.

**ಒರಾಳೆ ಸೋಕು**

ಇದು ಸೋಕಿನ ಮತ್ತೊಂದು ವಿಧ. ಒಂದು ಶುಬ್ರವಾದ ಬಿಳಿ ಬಟ್ಟೆಯ ತುಂಡನ್ನು ತೆಗೆದುಕೊಂಡು ಅದರಲ್ಲಿ ಪೊರಕೆ ಕಡ್ಡಿಯ ತುಂಡು, ಒಂದು ಹರಳು ಉಪ್ಪು, ಒಂದು ಮೆಣಸಿನಕಾಯಿ, ರೋಗಪೀಡಿತ ವ್ಯಕ್ತಿಯ ತಲೆಕೂದಲು, ಉಗುರು

ಇವುಗಳನ್ನೆಲ್ಲವನು ಸೇರಿಸಿ ಅವನಷ್ಟೆ ಉದ್ದದ ಸಪ್ಪೆದಾರ ತೆಗೆದುಕೊಂಡು ಜೊತೆಗೆ ೪ ಆಣೆ ನಾಣ್ಯವನ್ನು ಅದರ ಜೊತೆ ಸೇರಿಸಿ ಸಪ್ಪೆದಾರದಲ್ಲಿ ಕಟ್ಟಿ, ಇದನ್ನು ವ್ಯಕ್ತಿಯ ಮುಂದೆ ಮೂರು ಬಾರಿ ನೀವಳಿಸಿ ಒಂದು ಎಕ್ಕದ ಗಿಡಕ್ಕೆ ಕಟ್ಟುತ್ತಾರೆ. ಇದರಿಂದ ವ್ಯಕ್ತಿಗೆ ಅಂಟಿಕೊಂಡಿದ್ದ ಬೀತಿ ಪರಿಹಾರವಾಗುತ್ತದೆ ಎಂಬ ನಂಬಿಕೆ ಇವರದು.

**ದೃಷ್ಠಿ ನೀವಳಿಸುವುದು**

ದೃಷ್ಠಿ ನೀವಳಿಸುವುದರಲ್ಲಿ ಅನೇಕ ವಿಧಗಳಿವೆ. ಇದನ್ನು ಸಣ್ಣ ಮಕ್ಕಳು ಮತ್ತು ದೊಡ್ಡವರಿಗೂ ಮಾಡುತ್ತಾರೆ. ಚಿಕ್ಕಮಕ್ಕಳು ಯಾವುದೋ ಕಾರಣದಿಂದ ಚಂಡಿಮಾಡಲು ಶುರುಮಾಡಿದ ತಕ್ಷಣ ಈ ಜನಕ್ಕೆ ಹೊಳೆಯುವುದು ದೃಷ್ಟಿ ತೆಗೆಯುವುದು. ಕಸಬರಲಿನ ೮–೧೦ ಕಡ್ಡಿಗಳಿಗೆ ಬೆಂಕಿ ಅಚ್ಚಿ ಅವುಗಳನ್ನು ಮಗುವಿನ ಮುಂದೆ ಹಿಡಿದು ಮೂರು ಸಲ ನೀವಳಿಸಿ ಒಂದು ಮೂಲೆಯಲ್ಲಿ ನೆಟ್ಟಗೆ ಇಡುತ್ತಾರೆ. ಆಗ ಅ ಕಡ್ಡಿ ಫಟ,ಫಟನೆ ಶಬ್ಧಮಾಡುತ್ತ ಉರಿದು ಭೂದಿಯಾಗುತ್ತದೆ. ಹೀಗೆ ಕಡ್ಡಿಗಳು ಹೆಚ್ಚು ಶಬ್ದಮಾಡಿ ಉರಿದರೆ ಮಗುವಿಗೆ ದೃಷ್ಠಿಯಾಗಿದೆ. ಎಂದು ನಂಬುತ್ತಾರೆ.

ಹೊಟ್ಟೆ ನೋವು ಮೈಕೈಯಿ ದೇಹಾಲಸ್ಯ ಇವುಗಳು ಉಂಟಾದಾಗಲು ದೃಷ್ಟಿ ತೆಗೆಯುವ ಪದ್ಧತಿ ಇದೆ. ಕೈಯಲ್ಲಿ ಉಪ್ಪು ಮೆಣಸಿನ ಕಾಯಿ ತೆಗೆದು ಕೊಂಡು ಅದನ್ನು ಪೀಡಿತ ವ್ಯಕ್ತಿಯ ಮುಂದೆ ಮೂರು ಸಾರಿ ನೀವಳಿಸಿ ಮನೆದೇವರನ್ನು ನೆನೆದು ಬಂದಿರುವ ಕಷ್ಟ ದೂರಾಗಲೆಂದು ಪ್ರಾರ್ಥಿಸಿ ಮೂರು ದಾರಿ ಕೂಡವ ಕಡೆ ಹಾಕಿ ಬರುತ್ತಾರೆ.

**ಉಳುಕನ್ನು ತೆಗೆಯುವುದು**

ಈ ಸಮುದಾಯದ ಕೆಲವು ಹಿರಿಯರು ಮಾಂತ್ರಿಕ ನುಡಿಗಳನ್ನು ಹೇಳಿ ಉಳುಕಿದ ಕೈ–ಕಾಲುಗಳ ನೋವನ್ನು ಶಮನ ಮಾಡುತ್ತಾರೆ.

ಸಾಮಾನ್ಯವಾಗಿ ಉಳುಕಿದ ಜಾಗ ಊದಿಕೊಂಡಿರುತ್ತದೆ. ಆ ಜಾಗವನ್ನು ಒಬ್ಬನ ಕೈ ಬೆರಳುಗಳಿಂದ ಅದುಮಿ ಹಿಡಿಯಲು ಹೇಳುತ್ತಾರೆ. ಅದುಮಿ ಹಿಡಿದು ಕೊಂಡಿದ್ದಂತೆ ಮಾಂತ್ರಿಕ ತನ್ನ ಎರಡು ಹಸ್ತಗಳನ್ನು ವೃತ್ತಾಕಾರವಾಗಿ ಒಸೆಯುತ್ತಾ ಬಾಯಲಿ ಮಂತ್ರ ಹೇಳುತ್ತಿರುತ್ತಾನೆ. ಮಂತ್ರ ಹೇಳುತ್ತಾ ನಿಧಾನಗತಿಯಲ್ಲಿ ಕೈ ಒಸೆಯುತ್ತಾ ಬಂದಂತೆ ಉಳುಕಿದ ಜಾಗದಲ್ಲಿ ಒತ್ತಿ ಹಿಡಿದ ವ್ಯಕ್ತಿ ತನ್ನ ಕೈಯನ್ನು ಸ್ವಲ್ಪ ಸ್ವಲ್ಪ ಸಡಿಲಿಸುತ್ತಾ ಬರಬೇಕು. ಮತ್ತೆ ಮಂತ್ರ ಹೇಳುವ ಮತ್ತು ಕೈಒಸೆಯುವ ಕ್ರಿಯೆ ಶುರವಾದಂತೆ ಮತ್ತೆ ಅದನ್ನು ಒತ್ತಿ ಹಿಡಿಯುವ ನಿದಾನಕ್ಕೆ ಬಿಡುವ ಕ್ರಿಯೆ ನಡೆಯುತ್ತಿರುತ್ತದೆ. ಇದು ಹೀಗೆ ಅನೇಕ ಬಾರಿ ನಡೆಯುತ್ತದೆ. ಸಾಮಾನ್ಯವಾಗಿ ಈ ಮಂತ್ರ ಘೋಷಣೆ ಬೆಳಿಗ್ಗೆ ಮತ್ತು ಸಂಜೆ ಸಮಯದಲ್ಲಿ ಕನಿಷ್ಠ ೩–೪ ದಿನ ನಡೆಯುತ್ತದೆ. ಈ ರೀತಿ ಮಾಡುವುದರಿಂದ ಉಳುಕಿನಿಂದಾದ ನೋವು ನಿವಾರಣೆ ಯಾಗುತ್ತದಂತೆ.

## ಜನಪದ ನಂಬಿಕೆಗಳು

ಈ ಸಮುದಾಯದಲ್ಲಿ ಹಲವು ತರಹದ ನಂಬಿಕೆ ಮತ್ತು ಆಚರಣೆಗಳು ಇವೆ. ಈ ನಂಬಿಕೆಗಳು ಅಗೋಚರವಾಗಿ ಸಂಭವಿಸಬಹುದಾದ ಕೆಡಕು ಮತ್ತು ಅಪಾಯಗಳ ಮುನ್ಸೂಚನೆಗಳೆಂದೆ ನಂಬುತ್ತಾರೆ. ಕಾರ್ವೆಲ್ ರೀಡ್ ಹೇಳುವಂತೆ "ಅಪಾಯ ಮತ್ತು ಅನಿಶ್ಚಿತೆಗಳಿಂದ ಕೂಡಿದ ಸಾಮಾಜಿಕ ಪರಿಸ್ಥಿತಿಯಲ್ಲಿ ಸಿಲುಕಿಕೊಂಡಿರುವ ಮಾನವ ಸದಾ ತನ್ನ ಭವಿಷ್ಯವನ್ನು ಕುರಿತು ಚಿಂತಿಸುತ್ತಿರುತ್ತಾನೆ. ನಾನಾ ರೀತಿಯ ಹುಚ್ಚು ಕಲ್ಪನೆಗಳನ್ನು ಹೆಣೆದುಕೊಂಡಿರುತ್ತಾನೆ. ಭವಿಷ್ಯದ ಬಗೆಗಿನ ಅವನ ಕಾತುರತೆಗೆ ಕುರುಡು ನಂಬಿಕೆಗಳು ಅಲ್ಪ ಸ್ವಲ್ಪ ತೃಪ್ತಿ ನೀಡುತ್ತವೆ" ಎಂದು ಹೇಳುತ್ತಾನೆ. ದೊಂಬಿದಾಸರ ಸಮುದಾಯ ತಮ್ಮ ಜೀವನಕ್ಕೆ ಸಂಬಂಧಿಸಿದಂತೆ ರೂಢಿ ಮೂಲವಾಗಿರುವ ಕೆಲವು ನಂಬಿಕೆಗಳನ್ನು ಪಾಲಿಸುತ್ತಾ ಬಂದಿದ್ದಾರೆ.

ಶುಭ ಅಶುಭ ಶಕುನಗಳು ಮತ್ತು ನಂಬಿಕೆಗಳು ಹೇಗೆ ರೂಪುಗೊಂಡಿವೆ ಎಂಬ ಬಗ್ಗೆ ಈ ಸಮುದಾಯದ ಹಿರಿಯ ಕಲಾವಿದ ಶ್ರೀ ಕೃಷ್ಣಪ್ಪದಾಸರ್‌ರವರು ಹೇಳಿದ ಒಂದು ಕಥೆ ಹೀಗಿದೆ.

"ಒಂದೂರಲ್ಲಿ ಒಬ್ಬ ಮಡಿವಾಳ ಶೆಟ್ಟಿ ಇದ್ದ, ಅವನು ಅವನ ಕಸುಬಿಗೆ ಅಂದರೆ ಬಟ್ಟೆ ಹೊರಲಿಕ್ಕಾಗಿ ಒಂದು ಕತ್ತೆಯನ್ನು ಸಾಕಿದ್ದ. ಜೊತೆಗೆ ಒಂದು ನಾಯಿ ಕೂಡ ಇತ್ತು. ಒಂದು ದಿನ ಕಳ್ಳರು ತನ್ನ ಒಡೆಯನ ಮನೆಗೆ ಕನ್ನ ಹಾಕಲು ಬಂದಿದ್ದರು. ಇದನ್ನು ನೋಡಿದ ಕತ್ತೆ ಸರಿ ರಾತ್ರಿ ಜೋರಾಗಿ ಅರಚಿಕೊಂಡಿತು. ಇದನ್ನು ಕೇಳಿದ ಯಜಮಾನ ಹೊರಕ್ಕೆ ಬಂದು, ಕತ್ತೆ ಬಳಿ ಹೇಳಿದ 'ಎಲೈ ಕತ್ತೆ ಏಕೆ ಕಿರುಚಿ ಕೊಳ್ಳುತ್ತಿರುವೆ, ಎಂದು ಗದರಿಸಿ ಹೋಗಿ ಮಲಗಿಕೊಂಡ. ಪುನಃ ಕಳ್ಳರು ಬಂದು ಕನ್ನ ಕೊರೆಯಲು ಪ್ರಯತ್ನಿಸಿದರು. ಕತ್ತೆ ಯೋಚಿಸಿತು. ಈ ಕಳ್ಳರು ನನ್ನ ಒಡೆಯನ ಮನೆ ಕನ್ನ ಹಾಕುತ್ತಿರುವರಲ್ಲ, ನನ್ನ ಒಡೆಯ ಹೊಡೆದರೂ ಚಿಂತೆ ಇಲ್ಲಾ, ಎಂದು ಮತ್ತೆ ಕಿರುಚಿಕೊಂಡಿತು. ಒಡೆಯ ಎದ್ದು ಬಂದು ದೊಣ್ಣೆಯಿಂದ ಹೊಡೆದ. ಎಲೈ ಕತ್ತೆ ನಿನಗೆ ಹುಲ್ಲು ಹಾಕಿದ್ದೇನೆ ನೀರು ಕುಡಿಸಿದ್ದೇನೆ ಏಕೆ ಕಿರುಚಿ ಕೊಳ್ಳುತ್ತಿರುವೆ ಮತ್ತೆ ಕಿರುಚಿಕೊಂಡರೆ ಸರಿ ಇರುವುದಿಲ್ಲ. ಎಂದು ಎಚ್ಚರಿಸಿ ಮಲಗಿಕೊಂಡ.

ಮತ್ತೆ ಕಳ್ಳರು ಕನ್ನ ಕೊರೆಯಲು ಪ್ರಾರಂಭಿಸಿದರು. ಪುನಃ ಕತ್ತೆ ಜೋರಾಗಿ ಕಿರುಚಿಕೊಂಡಿತು. ಈ ಶಬ್ಧ ಕೇಳಿ ಯಜಮಾನನಿಗೆ ಅಸಾಧ್ಯವಾದ ಸಿಟ್ಟು ಬಂತು, ಯಜಮಾನ ಪುನಃ ದೊಣ್ಣೆಯಿಂದ ಕತ್ತೆಗೆ ಕೀಲು ಮುರಿಯುವಂತೆ ಹೊಡೆದ ಕಳ್ಳರಿಗೆ ಅವಕಾಶವಾಗದೆ ಅರ್ಧ ಕೊರೆದ ಕನ್ನವನ್ನು ಹಾಗೆ ಬಿಟ್ಟು ಜಾಗ ಖಾಲಿ ಮಾಡಿದರು. ಬೆಳಗಾದ ಮೇಲೆ ಯಜಮಾನ ಎಂದಿನಂತೆ ಮನೆಯ ಹಿಂಬದಿಯ ಹಿತ್ತಲ ಕಡೆ ಹೋದ. ಅಲ್ಲಿ ನೋಡುತ್ತಾನೆ ಕಳ್ಳರು ಮನೆಗೆ ಕನ್ನ ಹಾಕಲು ಪ್ರಯತ್ನಿಸಿರುವುದು ಕಂಡಿತು. ಇದನ್ನು ನೋಡಿ ಯಜಮಾನನಿಗೆ ಜ್ಞಾನೋದಯವಾಯಿತು. ತನ್ನ ಅಜ್ಞಾನಕ್ಕಾಗಿ ಪರಿತಪಿಸಿದ. ಕೈಕಾಲು ಮುಖ ತೊಳೆದು ಮುಖಕ್ಕೆ ವಿಭೂತಿ

ಹಚ್ಚಿಕೊಂಡು, ಸೂರ್ಯದೇವನಿಗೆ, ನನ್ನ ಕತ್ತೆ ಕತ್ತೆಯಲ್ಲ ನಾನು ಕತ್ತೆ" ಎಂದು ಹೇಳಿ ಕತ್ತೆ ಪಾದಕ್ಕೆ ಪೂಜೆ ಮಾಡುತ್ತಾನೆ. ಅಂದಿನಿಂದ ಕತ್ತೆ ಕೂಗಿದರೆ ಶುಭ ಎಂಬ ನಂಬಿಕೆ ಜನಪದರಲ್ಲಿ ಉಳಿದುಕೊಂಡು ಬಂತು. ಇದೇ ರೀತಿಯಲ್ಲಿ ಇನ್ನು ಹಲವಾರು ಶುಭ ಅಶುಭ ನಂಬಿಕೆಗಳು ಹುಟ್ಟಿಕೊಂಡಿವೆ, ಕೆಲವು ನಂಬಿಕೆಗಳು ಹೀಗಿವೆ.

೧. ಕತ್ತೆ ಕೂಗಿದರೆ ಒಳ್ಳೆಯದು.
೨. ನರಿ ಅಡ್ಡ ಬರೋದು ಒಳ್ಳೆಯದು.
೩. ಹಲ್ಲಿ ಮೈಮೇಲೆ ಬೀಳುವುದು ಒಳ್ಳೆಯದಲ್ಲ.
೪. ತುಂಬಿದ ಗಡಿಗೆ ಅಡ್ಡಬರೋದು ಒಳ್ಳೆಯದು.
೫. ಬೆಕ್ಕು ಅಡ್ಡಬರೋದು ಕೆಟ್ಟದ್ದು.
೬. ಕಾಗೆ ತಲೆ ಮೇಲೆ ಹಾರೋದು ಒಳ್ಳೆಯದಲ್ಲ.
೭. ವಾಸಿಸುವ ಮನೆ ಮೇಲೆ ಗೂಬೆ ಕೂರಬಾರದು.
೮. ಹೆಣದ ಮೆರವಣಿಗೆ ಅಡ್ಡಬರೋದು ಒಳ್ಳೆಯದು.
೯. ಪ್ರಯಾಣ ಬೆಳೆಸುವಾಗ ತಾಂಬೂಲ ಪಡೆದು, ಹೋಗುವುದು ಒಳ್ಳೆಯದು,
೧೦. ಒಂಟಿಸೀನು ಒಳ್ಳೆಯದಲ್ಲ.
೧೧. ಗೋಸುಂಬೆ ಕಾಣಿಸಿ ಕೊಳ್ಳಬಾರದು.
೧೨. ಪೊರಕೆ ಕಾಲಿಂದ ಒದೆಯಬಾರದು.
೧೩. ಸಂಜೆಯಾದ ನಂತರ ಕಸ ಹೊರಕ್ಕೆ ಹಾಕಬಾರದು
೧೪. ಹಾವು ಅಡ್ಡ ಬರೋದು ಒಳ್ಳೆಯದಲ್ಲ.
೧೫. ಬಿದಿರು ಕಟ್ಟಿಗೆ ಹೊತ್ತವರು ಎದುರು ಬರಬಾರದು.
೧೬. ಸಾದು ಸಂತರ ದರ್ಶನ ಒಳ್ಳೆಯದು.
೧೭. ಮುತ್ತೈದೆ ಅಡ್ಡ ಬಂದರೆ ಒಳ್ಳೆಯದು.
೧೮. ವಿಧವೆ ಅಡ್ಡ ಬರಬಾರದು.
೧೯. ಶುಭ ಸಮಾರಂಭಗಳಲ್ಲಿ ವಿಧವೆ ಭಾಗವಹಿಸುವುದು ಅಶುಭ.
೨೦. ಒಡೆದ ಕನ್ನಡಿ ಮನೆಒಳಗೆ ಇಟ್ಟುಕೊಳ್ಳಬಾರದು.
೨೧. ಮುಟ್ಟಾದ ಹೆಂಗಸು ಮನೆ ಒಳಗೆ ಬರಬಾರದು.
೨೨. ಸೂತಕ ಸಂದರ್ಭಗಳಲ್ಲಿ ಶುಭ ಸಮಾರಂಭಗಳಲ್ಲಿ ಭಾಗವಹಿಸಬಾರದು.
೨೩. ಪ್ರಯಾಣ ಬೆಳೆಸುವಾಗ ಖಾಲಿ ಕೊಡ ಹೊತ್ತವರು ಅಡ್ಡ ಬರಬಾರದು.

೬

# ಒಳಾಡಳಿತ ವ್ಯವಸ್ಥೆ

**ದೊಂ**ಬಿದಾಸ ಸಮುದಾಯಕ್ಕೆ ಸೇರಿದ ಎಲ್ಲರೂ ಒಂದು ಸಾಮಾಜಿಕ ನಿಯಂತ್ರಣ ಮತ್ತು ಕಟ್ಟಳೆಗಳ ಒಳಗೆ ಬದುಕುತ್ತಿದ್ದರು. ಸಾಮಾಜಿಕ ಕಟ್ಟುಪಾಡುಗಳನ್ನು ಅನುಸರಿಸಿ ಗೌರವಿಸಿ ಸಂಘಜೀವಿಗಳಾಗಿ ಬದುಕುವುದು ಸಹಜವಾಗಿತ್ತು. ಆದರೂ ಸಂಪ್ರದಾಯ, ಆಚಾರ ವಿಚಾರಗಳು ನಂಬಿಕೆಗಳನ್ನು ಮೀರಿ ನಡೆಯುವಂಥವರನ್ನು ನಿಯಂತ್ರಿಸಲು ಹದ್ದುಬಸ್ತಿನಲ್ಲಿಡಲು ನ್ಯಾಯ ಪದ್ಧತಿ ಸಹಜವಾಗಿ ಈ ಸಮುದಾಯದಲ್ಲೂ ಇದೆ. ಸಮುದಾಯದ ಒಳಗೆ ಜಗಳ, ಅವಹೇಳನಕಾರಿ ಬೈಗುಳ, ಬೇರೆಯವರನ್ನು ಅವಮಾನಿಸುವುದು, ಮಹಿಳೆಯರ ಜೊತೆ, ಹಿರಿಯರ ಜೊತೆ, ಸಮುದಾಯದ ಮುಖ್ಯಸ್ಥರ ಜೊತೆ ಅಸಭ್ಯವಾಗಿ ವರ್ತಿಸುವುದು, ಸಾಮಾಜಿಕ ಕಟ್ಟುಕಟ್ಟಳೆಗಳನ್ನು ಧಿಕ್ಕರಿಸಿ ನಡೆಯುವುದು, ಇತ್ಯಾದಿ ಕಾನೂನು ಬಾಹಿರ ನಡವಳಿಕೆ ಮತ್ತು ವರ್ತನೆಗಳನ್ನು ನಿಯಂತ್ರಿಸಲು ಸಮುದಾಯದ ಒಳಗೆ ಒಂದು ನ್ಯಾಯ ಪದ್ಧತಿ ರಚನೆಗೊಂಡಿದೆ. ಈ ಎಲ್ಲಾ ರೀತಿಯ ವ್ಯಾಜ್ಯಗಳನ್ನು ಅಂತಿಮವಾಗಿ "ಕಟ್ಟೆಮನೆ" ಎಂಬ ನ್ಯಾಯಾಲಯದಲ್ಲಿ ಕುಳಿತು ಇತ್ಯರ್ಥ ಪಡಿಸುತ್ತಿದ್ದರು. ಆಂತರಿಕ ಬಂಧುತ್ವ, ಸಮುದಾಯದ ಕ್ಷೇಮ ಪಾಲನೆಯೇ ಈ ನ್ಯಾಯ ಪದ್ಧತಿಯ ಮುಖ್ಯ ಆಶಯವಾಗಿತ್ತು. ಸಮುದಾಯದ ನ್ಯಾಯೋಜಿತ ಅಂಗಗಳನ್ನು ಪ್ರಮುಖವಾಗಿ "ಸ್ಥಳೀಯ" ನ್ಯಾಯ ಮತ್ತು 'ಕಟ್ಟೆಮನೆ' ನ್ಯಾಯ ಪದ್ಧತಿ ಎಂದು ಗುರುತಿಸಬಹುದು.

**೧. ಸ್ಥಳೀಯ/ಗ್ರಾಮ ಮಟ್ಟದ ನ್ಯಾಯ :** ದೊಂಬಿದಾಸರು ತಾವು ವಾಸಿಸುವ ನೆಲೆಗಳಲ್ಲಿ ತಮ್ಮ ತಮ್ಮಲ್ಲಿ ಉಂಟಾಗುವ ತಂಟೆ ತಕರಾರುಗಳನ್ನು ತೀರ್ಮಾನ ಮಾಡಿಕೊಳ್ಳಲು ಸ್ಥಳೀಯ ನ್ಯಾಯಪಂಚಾಯ್ತಿ ಮೊರೆಹೋಗುತ್ತಾರೆ. ಮುಖ್ಯಸ್ಥರಾದ ದೊಡ್ಡ ಯಜಮಾನ, ಚಿಕ್ಕಯಜಮಾನರು ಇವರ ಅಹವಾಲುಗಳನ್ನು ಸ್ವೀಕರಿಸಿ, ನ್ಯಾಯ ಸೇರಬೇಕಾದರೆ ಅಪರಾಧಿ ಮತ್ತು ಪಿರಿಯಾದಿದಾರ ಇಬ್ಬರೂ ಇಂತಿಷ್ಟು ಹಿಡಿಗಂಟನ್ನು (Deposit) "ಕದಪ" ರೂಪದಲ್ಲಿ ಹಣ ಕಟ್ಟಿಸಿಕೊಂಡು ನ್ಯಾಯ ಪಂಚಾಯಿತಿ ಮಾಡುತ್ತಾರೆ. ವಾದ ವಿವಾದ ಸಾಕ್ಷಿ ಪುರಾವೆಗಳನ್ನು ಪರಿಶೀಲಿಸಿ, ತಪ್ಪೆಂದು ನಿರ್ಣಯವಾದ ನಂತರ ಅಪರಾಧಿಗೆ ದಂಡ ವಿಧಿಸುತ್ತಾರೆ. ನಿರಾಪರಾಧಿಯ

ಕದಪ ರೂಪದಲ್ಲಿ ಕಟಿದ್ದ ಹಿಡಿಗಂಟನ್ನು ಹಿಂದಿರುಗಿಸಲಾಗುತ್ತದೆ. ಸ್ಥಳೀಯವಾಗಿ ನ್ಯಾಯ ತೀರ್ಮಾನವಾಗದಿದ್ದರೆ 'ಕಟ್ಟೆಮನೆ'ಗೆ ನ್ಯಾಯವನ್ನು ವರ್ಗಾಯಿಸುತ್ತಾರೆ.

೨. **ಕಟ್ಟೆಮನೆ :** ಇದು ಹೈಕೋರ್ಟ್‌ಗೆ ಸಮಾನವಾದದ್ದು. ಸ್ಥಳೀಯ ಮಟ್ಟದಲ್ಲಿ ತೀರ್ಮಾನ ವಾಗದ ವಿವಾದಗಳು ಇಲ್ಲಿಗೆ ಬರುತ್ತವೆ. ಇದರ ಮುಖ್ಯಸ್ಥನಿಗೆ "ಸಮೆ ದಾಸರಿ" ಅಥವಾ "ಕಟ್ಟಾದಾರಿ" ಎಂದು ಕರೆಯುತ್ತಾರೆ. ಈ ಕಟ್ಟದಾರಿ ಅಹವಾಲುಗಳನ್ನು ಸ್ವೀಕರಿಸಿ ಎಲ್ಲಾ ಗ್ರಾಮಗಳಿಗೂ ನ್ಯಾಯಪಂಚಾಯಿತಿ ಇರುವ ಬಗ್ಗೆ ಪತ್ರ ಬರೆದು ಸಮುದಾಯದೊಳಗೇ ಇರುವ 'ಕೋಲ್ಕಾರ' ಎನ್ನುವ ಸಂದೇಶ ವಾಹಕನ ಕೈಯಲ್ಲಿ ಕಳುಸುತ್ತಾರೆ. ಈ ಕೋಲ್ಕಾರ ಒಂದು ವಿಶೇಷವಾದ ಡವಾಲಿ ಎನ್ನುವ ವಸ್ತ್ರಹಾಕಿಕೊಂಡು ೩ ಅಡಿ ಉದ್ದದ ಬೆತ್ತದ ಕೋಲನ್ನು ಹಿಡಿದುಕೊಂಡು ಊರೂರು ಸುತ್ತಿ ಸಂದೇಶ ನೀಡುತ್ತಾನೆ. ಈತನಿಗೆ ವಿಶೇಷ ಮರ್ಯಾದೆ ಕೊಡಲಾಗುತ್ತದೆ. ಊರು ಪ್ರವೇಶ ಮಾಡಿದ ತಕ್ಷಣ ಈತನ ನ್ಯಾಯದಂಡಕ್ಕೆ (ಕೋಲಿಗೆ) ಸಮುದಾಯದವರು ಅರಿಶಿನ, ಕುಂಕುಮ ಹಚ್ಚಿ ಗೌರವ ತೋರಿಸಿ ತಲಾ ೪ ಆಣೆ ದಕ್ಷಿಣೆ ನೀಡಿ ಊಟೋಪಚಾರ ಮಾಡಿಸಿ ಕಳುಹಿಸುತ್ತಾರೆ.

ಈ ಕಟ್ಟೆಮನೆಯಲ್ಲಿ ನ್ಯಾಯಕ್ಕೆ ಸೇರಿದಾಗ ಸ್ಥಳೀಯ ನ್ಯಾಯ ಸ್ಥಾನದ ಯಜಮಾನ ವಿವಾದದ ಬಗ್ಗೆ ವಿವರ ನೀಡುತ್ತಾನೆ. ಹಾಗೂ ಈ ಹಿಂದೆ ಪಡೆದಿದ್ದ ಹಿಡಿಗಂಟು (ಕದಪ) ಹಣವನ್ನು ಕಟ್ಟೆಮನೆ ಮುಖ್ಯಸ್ಥರಿಗೆ ಜಮಾ ಮಾಡುತ್ತಾನೆ(ಅಲ್ಲಿ ನೆರೆದ ಎಲ್ಲರ ಊಟೋಪಚಾರ, ಬಂಗಿಸೊಪ್ಪು, ಬೀಡಿ, ಸಿಗರೇಟು, ಸೇಂದಿ ಎಲ್ಲವನ್ನು ನ್ಯಾಯ ಕೇಳಿಬಂದವರೇ ಬರಿಸಬೇಕಿತ್ತು.).

ಈ ನ್ಯಾಯಸ್ಥಾನದದಲ್ಲಿ ಕಟ್ಟೆಮನೆ ಮುಖ್ಯಸ್ಥರಾದ ಸಮೀಯಿಲು (ಸಮೇದಾಸರಿ) ಪಿನ್ನಪೆದ್ದ, ಕೋಲ್ಕಾಡು ಮತ್ತು ಎಲ್ಲಾ ಊರುಗಳಿಂದ ಬಂದಿದ್ದ ಯಜಮಾನರುಗಳು ಭಾಗವಹಿಸುತ್ತಾರೆ. ಅಪರಾಧಿ ಮತ್ತು ಪಿರ್ಯಾದಿಗಳು ತಮ್ಮ ತಮ್ಮ ತಕರಾರುಗಳನ್ನು ಇಲ್ಲಿ ಮಂಡಿಸುತ್ತಾರೆ. ಈ ನ್ಯಾಯ ಪಂಚಾಯಿತಿ ಹಲವು ಕಾರಣಗಳಿಂದ ದಿನಗಟ್ಟಲೆ, ವಾರಗಟ್ಟಲೆ, ನಡೆಯುವುದೂ ಉಂಟು. ಈ ಬಗ್ಗೆ ಬಾರಿ ವಾದ ಚರ್ಚೆ, ಸಾಕ್ಷಿಪುರಾವೆಗಳ ಪರಿಶೀಲನೆ ನಡೆದು ತಪ್ಪೆಂದು ಕಂಡು ಬಂದವನಿಗೆ ದಂಡ ಹಾಕುತ್ತಾರೆ. ಆ ದಂಡದ ಹಣವನ್ನು ಆ ಸ್ಥಳದಲ್ಲಿಯೇ ಅಪರಾಧಿಯಾದವನು ಕಟ್ಟಬೇಕು. ಅಪರಾಧಿ ಕಟ್ಟಿದ್ದ 'ಕದಪ' ವನ್ನು ಮುಟ್ಟುಗೋಲು ಹಾಕಿಕೊಳ್ಳುತ್ತಾರೆ. ನಿರಪರಾದಿ ಎಂದು ಸಾಬೀತಾದರೆ "ಕದಪ" ಹಣವನ್ನು ವಾಪಸ್ ಮಾಡುತ್ತಾರೆ. ಕಟ್ಟೆಮನೆಯಲ್ಲಿ ಆದ ತೀರ್ಮಾನವನ್ನು ಒಪ್ಪದವರಿಗೆ ಕುಲದಿಂದ ಬಹಿಷ್ಕಾರ ಹಾಕಲಾಗುತ್ತದೆ. ಕಟ್ಟೆಮನೆ ತೀರ್ಮಾನ ಅಂತಿಮ ತೀರ್ಮಾನವಾಗಿರುತ್ತದೆ.

ಶ್ರೀ ವೈಷ್ಣವರಾದ ಕಂಚಿ ಕಾಮಕೋಟಿ ಪೀಠದ ತಾತಾಚಾರ್ಯರು ನಮ್ಮ ಕುಲಗುರುಗಳು ಎಂದು ಈ ಸಮುದಾಯದ ಸಾಕಷ್ಟು ಹಿರಿಯರು ಅಭಿಪ್ರಾಯ ಪಡುತ್ತಾರೆ. ಆದರೆ ಯಾರಿಗೂ ಈ ಬಗ್ಗೆ ಸಂಪೂರ್ಣವಾದ ಮಾಹಿತಿ ಇದ್ದಂತಿಲ್ಲ

ಕೇವಲ ಮುಸುಕು ಮುಸುಕಾಗಿ ನಮಗೊಬ್ಬ ಗುರುಗಳು ಬಂದು ಉಪದೇಶ ಮಾಡುತ್ತಿದ್ದರು. ನೀವು ಹೀಗೆ ಇರಬೇಕು, ಇಂತಹ ಸಂಪ್ರದಾಯಗಳನ್ನೇ ಪಾಲಿಸ ಬೇಕು, ಮುಂತಾಗಿ ಹೇಳುತ್ತಿದ್ದರೆಂದಷ್ಟೆ ಹೇಳುತ್ತಾರೆ. ಸಮುದಾಯದ ಗುರು ಮೂಲ ಹುಡುಕಲು ಇನ್ನಷ್ಟು ಪ್ರಯಾಸ ಪಡಬೇಕಿದೆ. ಇದು ಋಷಿ ಮೂಲ ನದಿಮೂಲ ಹುಡುಕುವಷ್ಟೇ ಕಠಿಣವಾದ ಕೆಲಸ ಎಂದು ಭಾವಿಸಬೇಕಾಗುತ್ತದೆ.

ಕಟ್ಟೆಮನೆಗಳು

ತಮ್ಮಲ್ಲಿನ ತಂಟೆ ತಕರಾರುಗಳನ್ನು ನ್ಯಾಯ ಪಂಚಾಯಿತಿ ಮಾಡುವ ಮೂಲಕ ಇತ್ಯರ್ಥ ಪಡಿಸಿಕೊಳ್ಳಲು ಒಂದೆಡೆ ಸೇರುತ್ತಿದ್ದ ಸ್ಥಳಕ್ಕೆ ಕಟ್ಟೆಮನೆ ಎನ್ನುತ್ತಾರೆ. ಈ ಕಟ್ಟೆಮನೆ ಸೇರುವ ಸ್ಥಳ ಸುತ್ತಮುತ್ತಲಲ್ಲಿ ವಾಸಿಸುವ ಎಲ್ಲರಿಗೂ ಅನುಕೂಲಕರವಾಗಿರುತ್ತಿತ್ತು. ನೀರು, ನೆರಳು, ಕುಳಿತು ಮಾತನಾಡಲು ಸಾಕಷ್ಟು ಸ್ಥಳವಕಾಶವುಳ್ಳದಾಗಿರುತ್ತಿತ್ತು. ಈ ಸ್ಥಳವನ್ನು ಸಮುದಾಯ ತುಂಬಾ ಪವಿತ್ರವೆಂದು ಭಾವಿಸಿ, ಗೌರವಿಸುತ್ತಿದ್ದರು.

ಈ ಕಟ್ಟೆಮನೆಯ ಮುಖ್ಯಸ್ಥರು ನೀಡುತ್ತಿದ್ದ ತೀರ್ಪುಗಳು ನ್ಯಾಯದೇವತೆ ನೀಡಿದ ನಿಶ್ಪಕ್ಷಪಾತವಾದ ತೀರ್ಪುಗಳೆಂದೇ ಗೌರವಿಸಿ ಒಪ್ಪಿಕೊಳ್ಳುತ್ತಿದ್ದರು. ದಕ್ಷಿಣ ಕರ್ನಾಟಕದ ಕೆಲವು ಜಿಲ್ಲೆಗಳಲ್ಲಿ ಕಟ್ಟೆಮನೆ ಸೇರುತ್ತಿದ್ದ ಸ್ಥಳಗಳನ್ನು ಈ ಕೆಳಗಿನಂತೆ ಗುರುತಿಸಿದೆ.

೧ ಅಮರಾಪುರ (ಅಮರಾಪುರ ಪಕ್ಕದ ಆಂಧ್ರಪ್ರದೇಶದ ಮಡಕಶಿರ ಜಿಲ್ಲೆಗೆ ಸೇರಿದ್ದಾಗಿದೆ. ಚಿತ್ರದುರ್ಗ, ದಾವಣಗೆರೆ ಮತ್ತು ತುಮಕೂರು ಜಿಲ್ಲೆಯ ಕೆಲವು ಭಾಗದ ದೊಂಬಿದಾಸರು ಈ ಸ್ಥಳವನ್ನು ತಮ್ಮ ಕಟ್ಟೆಮನೆಯನ್ನಾಗಿ ಬಳಸುತ್ತಿದ್ದರು).

| | | |
|---|---|---|
| ೨ | ಗಂಗಾಪಟ್ಟಣ | ಗುಬ್ಬಿ ತಾಲ್ಲೂಕು |
| ೩ | ಮಾಗೋಡು | ಸಿರಾ ತಾಲ್ಲೂಕು |
| ೪ | ಸಾಗರಕಟ್ಟೆ (ಆನಂದೂರು ಕೊಪ್ಪಲು) | ಮೈಸೂರು ಜಿಲ್ಲೆ |
| ೫ | ಕಿಕ್ಕೇರಿ,ಆನೆಗೊಳ | ಕೆ ಆರ್ ಪೇಟೆ ತಾಲ್ಲೂಕು |
| ೬ | ದೇವನೂರು | ಕಡೂರು ತಾಲ್ಲೂಕು (ಚಿಕ್ಕ |

ಮಗಳೂರು ಮತ್ತು ಶಿವಮೊಗ್ಗ ಜಿಲ್ಲೆಗೆ ಸೇರಿದ ದೊಂಬಿದಾಸರು ಈ ಸ್ಥಳವನ್ನು ತಮ್ಮ ಕಟ್ಟೆಮನೆಯಾಗಿ ಬಳಸುತ್ತಿದ್ದರು).

ಕುಣಿಗಲ್ಲಿನ ವೆಂಕಸೊಪ್ಪ, ಹಿಂದುಪುರ ಬಳಿಯ ಸಿಂಗಾರೆಡ್ಡಿಪಳ್ಳಿ ಹಾಗೂ ಮೈಲಿಗಾನಿ ವಾಣಿಗಟ್ಟ ಪ್ರದೇಶಗಳು ದಾಸರಿ ಸಮುದಾಯದ ಕಟ್ಟೆಮನೆಗಳಾಗಿದ್ದವೆಂದು (ಅನಂತಕೃಷ್ಣ ಅಯ್ಯರ್, ಎಲ್ ಕೆ: ೧೯೩೧:) ತಿಳಿದುಬರುತ್ತದೆ. ಕಟ್ಟೆಮನೆ ಮತ್ತು ಜಾತಿ ಪಂಚಾಯತಿಯ ಕಾರ್ಯಗಳು ಇತ್ತೀಚೆಗೆ ಸಡಿಲಗೊಳ್ಳುತ್ತಿವೆ.

# ೭

# ಆರ್ಥಿಕ ಜೀವನ

## ವೃತ್ತಿ

ದೊಂಬಿದಾಸರನ್ನು ಲೌಕಿಕ ವೃತ್ತಿಗಾಯಕರು, ವೈಷ್ಣವ ಭಿಕ್ಷುಕರೆಂದು ಗುರುತಿಸುತ್ತಾರೆ. ಒಂದು ಕಾಲದಲ್ಲಿ ಬಯಲಾಟಕ್ಕೆ ಹೆಸರುವಾಸಿಯಾಗಿದ್ದ ಸಮುದಾಯ ಇತ್ತೀಚೆಗೆ ಲಾವಣಿಗಾಯನ, ತತ್ವಪದಗಳು, ಹರಿಕಥೆಯಂತ ವಿವಿಧ ಪ್ರಕಾರಗಳನ್ನು ಹೇಳಿ ಜೀವನ ನಿರ್ವಹಣೆ ಮಾಡುತ್ತಿದ್ದಾರೆ. ಭಿಕ್ಷಾ ವೃತ್ತಿಯೇ ಇವರ ಜೀವನ ನಿರ್ವಹಣೆಗೆ ಪ್ರಧಾನ ಕಸುಬಾಗಿತ್ತು. ಒಂದು ಕಡೆ ನೆಲೆನಿಂತ ಸಮುದಾಯ ಇದಾಗಿರಲಿಲ್ಲ, ನಿರಂತರ ಸಂಚಾರ ಮಾಡುತ್ತಾ ತಲೆಯೊಳಗೆ ನೂರಾರು ಲಾವಣಿಗಳು ತತ್ವಪದಗಳು ದಾರ್ಶನಿಕರ ನುಡಿಗಟ್ಟುಗಳು ರಾಮಾಯಣ ಮಹಾಭಾರತದ ಪ್ರಸಂಗಗಳನ್ನು ತುಂಬಿ ಕೊಂಡು ತಮ್ಮ ಮೌಖಿಕ ಪರಂಪರೆಯಲ್ಲಿ ಸರಳ ವಾದ್ಯಗಳಾದ ಏಕತಾರಿ, ದಮ್ಮಡಿ, ಚಿಟಿಕೆ, ತಾಳ, ತಬಲ, ಹಾರ್ಮೋನಿಯಂ, ಕಂಜರ, ಮದ್ದಳೆ ಇತ್ಯಾದಿ ವಾದ್ಯಗಳನ್ನು ಬಳಸಿ ಹಾಡುತ್ತಾ ಭಿಕ್ಷೆ ಬೇಡಿ ಬದುಕುತ್ತಿದ್ದರು. ಇದು ಅವರ ಪ್ರಮುಖ ವೃತ್ತಿಯಾಗಿತ್ತು.

ಈ ಸಮುದಾಯ ಒಂದು ಕಡೆ ಸ್ಥಿರವಾಗಿ ನೆಲೆ ನಿಲ್ಲುತ್ತಿರಲಿಲ್ಲ. ಯಾವ ಕಡೆ ಸಮೃದ್ಧವಾಗಿ ಮಳೆ–ಬೆಳೆಯಾಗುತ್ತೋ ಆ ಕಡೆಗೆ ತನ್ನ ಕುಟುಂಬ ಪರಿವಾರಸಹಿತ ಹೋಗುತ್ತಿತ್ತು. ಹಲವು ಕುಟುಂಬಗಳ ಒಂದು ಗುಂಪು ಇಲ್ಲಿರುತ್ತಿತ್ತು. ಅವರ ಆಸ್ತಿ ಐಶ್ವರ್ಯಗಳಾದ ಮಡಿಕೆ, ಕುಡಿಕೆ, ತೊಡಲು ಹೊದಿಯಲು ಇರುತಿದ್ದ ಹಳೆಯ ಬಟ್ಟೆಗಳು, ನಾಟಕದ ಪರದೆಗಳು, ಕಿರೀಟ, ಬುಜಕೀರ್ತಿ, ಕತ್ತಿ–ಗುರಾಣಿ ಹಾರ್ಮೋನಿಯಂ ಹೀಗೆ ಎಲ್ಲಾ ಸಾಮಾನು ಸರಂಜಾಮುಗಳನ್ನು "ಕಾವಡಿ" ದಬ್ಬೆ (ಅಡ್ಡೆ) ಎಂಬ ೩ ಇಂಚು ಅಗಲ ೪–೫ ಅಡಿ ಉದ್ದದ ಬಿದಿರನ ದಬ್ಬೆಯಿಂದ ಮಾಡಿದ ಎರಡು ಬದಿ ಯಲ್ಲೂ ಗುಬ್ಬಿಯಾಕಾರ (ದುಂಡಗೆ) ಗುಂಡುಗಳನ್ನು ನಿರ್ಮಾಣ ಮಾಡಿ ತಯಾರಿಸಿದ ಈ ಅಡ್ಡೆಗೆ ಹಸಿಬೆ ಚೀಲಗಳನ್ನು ನೇತುಹಾಕಿ ತಮ್ಮ ಸಾಮಾನುಗಳನ್ನು ಸಾಗಿಸುತ್ತಿದ್ದರು. ಗಂಡಸರು ಹಸಿಬೆ ಚೀಲಗಳನ್ನು ಹಾಕಿದ ಕಾವಡಿ ದಬ್ಬೆಯನ್ನು ಹೊತ್ತು ಮುಂದೆ ನಡೆದರೆ ಹೆಂಗಸರು ಕಂಕುಳಲ್ಲಿ ಹಸುಗೂಸುಗಳನ್ನು ಇರುಕಿಕೊಂಡು ತಲೆಮೇಲೆ ಉಳಿದ ಸಾಮಾನು ಹೊತ್ತು ಸಣ್ಣ ಮಕ್ಕಳು ವಯಸ್ಸಾದವರನ್ನು ಜೊತೆಯಲ್ಲಿ ಕರೆದು ಕೊಂಡು ಹೋಗುತ್ತಿದ್ದರು.

ಕಾವಡಿ ದಬ್ಬೆ ಹೊತ್ತು ಮುಂದೆ ನಡೆದ ಗಂಡಸರು ತಮಗೆ ಇಷ್ಟವಾದ ಸ್ಥಳದಲ್ಲಿ ತಮ್ಮ ಸಾಮಾನು ಸರಂಜಾಮುಗಳನ್ನು ಇಳಿಸಿ ತಳ ಊರುತ್ತಿದ್ದರು. ಇವು ಸಾಮಾನ್ಯವಾಗಿ ಪಾಳುಗುಡಿಗಳು, ಕೆರೆ ಅಂಗಳದ ದೊಡ್ಡಾಲದ ಮರ, ಅಥವಾ ಆ ಊರಿನ ಶಾಲೆ ಆವರಣಗಳಾಗಿರುತ್ತಿದ್ದವು. ಕೆಲವೊಮ್ಮೆ ಪರಿಚಯವಿದ್ದರೆ ಊರ ಗೌಡರ ಪಾಳು ಮನೆಯ ಜಗಲಿಗಳ ಮೇಲೂ ಇರುತ್ತಿದ್ದುದ್ದುಂಟು.

ಇನ್ನು ಕೆಲವರು ಕೈಯಲ್ಲಿ ಏಕತಾರಿ ಚಿಟಿಕಿ ತಾಳ, ದಮ್ಮಡಿ ಕಂಕುಳದಲ್ಲಿ (ಕೊಮ್ಮಜೋಲಿ) ಜೋಳಿಗೆ, ಗೋಪಾಳಬುಟ್ಟಿ, ಬವನಾಸಿ, ಪಂಚಲೋಹದಿಂದ ತಯಾರಿಸಿದ ಅಕ್ಷಯ ಪಾತ್ರೆ (ಇದು ಬಹಳ ಹಿಂದೆಬಳಕೆಯಲ್ಲಿತ್ತು) ಹಾಕಿಕೊಂಡು ಕನಿಷ್ಠ ಮೂರು ಜನರ ಗುಂಪು ಭಿಕ್ಷೆಗೆ ಹೊರಡುತ್ತಿತ್ತು. ಏಕತಾರಿಯನ್ನು ಝೇಂಕರಿಸಿ ಮೀಟುತ್ತಾ ದೊಡ್ಡ ಧ್ವನಿಯಲ್ಲಿ ಗಂಗೆ–ಗೌರಿ, ಮಾದೇಗೌಡ, ಕೆಂಪೇಗೌಡ, ಬಾಲನಾಗಮ್ಮ, ಅಣ್ಣ– ತಂಗಿ, ತತ್ವಪದಗಳು ಮುಂತಾಗಿ ಹಾಡುತ್ತಾ ಹೊರಟರೆಂದರೆ ಹಳ್ಳಿಗಾಡಿನ ಜನ ಇವರ ಮಧುರ ಕಂಠಕ್ಕೆ ಮನಸೋತು ಮೊರದ ತುಂಬ, ಬೊಗಸೆ ತುಂಬ ದವಸಧಾನ್ಯಗಳನ್ನು ನೀಡುತ್ತಿದ್ದರು. ನೇತಾಕಿಕೊಳ್ಳುತ್ತಿದ್ದ ಜೋಳಿಗೆ ೩ ಭಾಗಗಳಾಗಿ ವಿಂಗಡಣೆಯಾಗಿರುತ್ತಿತ್ತು. ಒಂದು ಭಾಗದಲ್ಲಿ ರಾಗಿ, ಜೋಳ, ಭತ್ತ, ದಾನ್ಯಗಳನ್ನು ಹಾಕಿಸಿಕೊಂಡರೆ ಇನ್ನೊಂದರಲ್ಲಿ ಹಿಟ್ಟು, ಅಕ್ಕಿ, ರೊಟ್ಟಿ, ಮುದ್ದೆ ಹಾಕಿಸಿಕೊಳ್ಳುತ್ತಿದ್ದರು. ಮತ್ತೊಂದರಲ್ಲಿ ಕಾಳು, ಮೆಣಸಿನಕಾಯಿ, ಈರುಳ್ಳಿ, ಬೆಳ್ಳುಳ್ಳಿ, ಜೀರಿಗೆ, ಮೆಣಸು, ಹುಣಸೆ ಹಣ್ಣು ಹೀಗೆ ಅಡಿಗೆ ಮಾಡಿ ತಿನ್ನಲು ಬೇಕಾದ ಎಲ್ಲಾ ತರಹದ ಪದಾರ್ಥಗಳನ್ನು ಕೇಳಿಯೇ ಪಡೆಯುತ್ತಿದ್ದರು.

ತಳ ಊರಿದ ಜಾಗವನ್ನು ಹೆಂಗಸರು ತಮಗೆ ಬೇಕಾದ ರೀತಿಯಲ್ಲಿ ಸ್ವಚ್ಛ ಮಾಡಿ ಕೊಳ್ಳುತ್ತಿದ್ದರು. ಭಿಕ್ಷೆಗೆ ಹೋದ ಗಂಡಸರು ವಾಪಸ್ ಬರುವಷ್ಟರಲ್ಲಿ ಒಲೆಗೆ ಬೇಕಾದ ಸೌದೆ–ಪುಳ್ಳೆಗಳನ್ನು ತರುತ್ತಿದ್ದರು. ಹಾಗೆಯೇ ಸಾಂಬಾರಿಗೆ ಬೇಕಾದ ಬೆರಕೆ ಸೊಪ್ಪುಗಳನ್ನು ಹೆಂಗಸರು ಹೊಲ ಬೇಲಿಗಳಲ್ಲಿ ಹುಡುಕಿ ಕೊಯ್ದು ತರುವ ಕೆಲಸ ಹೆಂಗಸರದೇ ಆಗಿರುತ್ತಿತ್ತು.

ಗಂಡಸರು ಭಿಕ್ಷೆ ಮುಗಿಸಿ ಬಂದು ಏನಾದರೊಂದು ಬೇಟೆ ಮಾಡಲು ಬಲೆ, ಪಾಜಿಗಳನ್ನು ನೇತಾಕಿಕೊಂಡು ಹೊರಟರೆಂದರೆ ಯಾವುದಾದರು ಮಿಕ ಇವರ ಬಲೆ–ಪಾಜಿಗೆ ಬೀಳಲೇಬೇಕು. ಹೀಗೆ ಬೇಟೆಯಾಡಿ ತಂದ ಕಾಡು ಮಾಂಸದ ಅಡಿಗೆ ತಯಾರಿಸಿ ಸಂತೃಪ್ತಿಯಾಗಿ ಉಂಡು ಯಾವ ಚಿಂತೆ ಮಾಡದೆ ತೃಪ್ತಿಪಡುತ್ತಿದ್ದರು.

ದಾಸರು ಊರಿಗೆ ಬಂದಿದ್ದಾರೆಂದರೆ ಹಳ್ಳಿಗರಿಗೆ ಸಂಬ್ರಮವಾಗುತ್ತಿತ್ತು. ದಾಸರ ಮುಖಂಡರನ್ನು ಕರೆಯಿಸಿ ವೀಳ್ಯ ಕೊಟ್ಟು ರಾತ್ರಿ ಬಯಲಾಟ ಆಡುವಂತೆ ಹೇಳುವುದು ವಾಡಿಕೆಯಾಗಿತ್ತು. ಹೊಸ ಊರುಗಳಾದರೆ ಇವರೆ ಆ ಊರಿನ ಗೌಡ, ಪಟೇಲ ಶ್ಯಾನುಭೋಗರಲ್ಲಿ ತೆರಳಿ ನಾಟಕ ಆಡಿಸುವಂತೆ ಕೇಳಿ ವೀಳ್ಯ ಪಡೆದು, ಅಂದು ರಾತ್ರಿಯೇ ನಾಟಕ ಮಾಡುತ್ತಿದ್ದರು. ಅಂದಿನ ಕಾಲದಲ್ಲಿ ಹಳ್ಳೀಗಾಡಿನ ಜನತೆಗೆ

ಮನರಂಜನೆ ಮತ್ತು ಸಂಸ್ಕೃತಿಯ ಪರಿಚಯವಾಗುತ್ತಿದ್ದದು ಈ ದೊಂಬಿದಾಸರಿಂದಲೇ. ರಾತ್ರಿ ದಾಸರು ನಾಟಕ ಆಡುವ ವಿಷಯವನ್ನು ಸುತ್ತುಮುತ್ತಲ ಊರುಗಳಿಗೆ ಡಂಗೂರ ಸಾರಿಸಿ ಹೇಳುತ್ತಿದ್ದರು. ವಿಷಯ ತಿಳಿದ ಹಳ್ಳಿಗರು ಗಾಡಿಗಳಲ್ಲಿ ರಾತ್ರಿ ನಾಟಕ ನೋಡಲು ಬರುತ್ತಿದ್ದರು. ಇವರಾಡುವ ನಾಟಕಗಳಿಗೆ ಅಷ್ಟೊಂದು ಪ್ರಾಮುಖ್ಯತೆ ಇರುತಿತ್ತು.

ನಾಟಕಕ್ಕೆ ಬೇಕಾದ ಎಲ್ಲಾ ಪರಿಕರಗಳು ಇವರಲ್ಲಿ ಇರುತ್ತಿರಲಿಲ್ಲ. ಇವರಲ್ಲಿ ಒಂದೆರಡು ಹಳೆಯ ಪರದೆಗಳು, ಕಿರೀಟ, ಬುಜಕೀರ್ತಿ, ಕತ್ತಿ, ರಾಜನ ಪಾತ್ರಕ್ಕೆ ಬೇಕಾದ ಕೆಲವು ಆಭರಣಗಳು ಇರುತ್ತಿದ್ದವು. ರಾಣಿಯ ಪಾತ್ರಕ್ಕೆ ಬೇಕಾದ ಒಳ್ಳೆಯ ಸೀರೆಗಳನ್ನು ಆ ಹಳ್ಳಿಯವರಿಂದಲೇ ಕೇಳಿಪಡೆದು ಅಲಂಕಾರ ಮಾಡಿಕೊಳ್ಳುತ್ತಿದ್ದರು. ಆ ಊರಿನಲ್ಲಿನ ಸುಂದರ ಸೀರೆಗಳು ಈ ದಾಸರ ಮೈಮೇಲೆ ಆ ರಾತ್ರಿ ರಂಜಿಸುತ್ತಿದವು. ಊರಿನ ಒಂದು ಪ್ರಮುಖ ಸ್ಥಳದಲ್ಲಿ ನಾಟಕ ಆಡಲು ಬೇಕಾದ ವೇದಿಕೆ ಸಿದ್ಧವಾಗುತ್ತಿತ್ತು. ಅಂದಿನ ಕಾಲದಲ್ಲಿ ವಿದ್ಯುತ್ ದೀಪಗಳು ಇರಲಿಲ್ಲ. ವೇದಿಕೆಯ ಎರಡು ಬದಿಗಳಲ್ಲಿ ದೊಡ್ಡದಾದ ಎರಡು ಬಾಳೆಕಂಬ ಅಥವಾ ಇತರೆ ಯಾವುದಾದರೂ ಕಂಬ ನೆಡುತ್ತಿದ್ದರು, ಅದರ ಮೇಲೆ ಮಣ್ಣಿನ ಹರಿವಾಣವಿಟ್ಟು ಎಣ್ಣೆ ಹಾಕಿ ದೀಪ ಉರಿಸುತ್ತಿದ್ದರು. ಇಲ್ಲವೆ ದೊಂದಿಗಳನ್ನು ಹಚ್ಚಿ ಆಟಕ್ಕೆ ಬೇಕಾದ ಬೆಳಕನ್ನು ಪಡೆಯುತ್ತಿದ್ದರು. ಹೀಗೆ ರಾತ್ರಿ ಇಡೀ ಬೆಳಕಿನ ವ್ಯವಸ್ಥೆಯಾಗುತ್ತಿತ್ತು.

ರಾತ್ರಿ ಹಳ್ಳಿಯವರೆಲ್ಲರು ಉಂಡು ಸೇರುತ್ತಿದದ್ದು ೮–೯ ಗಂಟೆಯ ನಂತರವೆ. ಹೀಗೆ ನೆರೆದ ಜನ ರಾತ್ರಿ ಇಡೀ ದಾಸರ ಆಟ ನೋಡಿ ಹೊಟ್ಟೆ ಹುಣ್ಣಾಗುವಷ್ಟು ನಕ್ಕು, ಕಣ್ಣೀರು ಬತ್ತುವಷ್ಟು ಕಣ್ಣೀರು ಸುರಿಸಿ, ನೀತಿ ಪಾಠಗಳನ್ನು; ನೈತಿಕ ಪ್ರಜ್ಞೆಯನ್ನು ತಲೆಯೊಳಗೆ ತುಂಬಿಕೊಂಡು ಸಂತೃಪ್ತಿಯಿಂದ ಬೆಳಿಗ್ಗೆ ತಮ್ಮ ತಮ್ಮ ಮನೆಗಳಿಗೆ ತೆರಳುತ್ತಿದ್ದರು. ಪೂರ್ವದಲ್ಲಿ ಸೂರ್ಯ ಕಿರಣಗಳು ಉದಯಿಸಿದಂತೆ ನಾಟಕಕ್ಕೆ ತೆರೆಬೀಳುತಿತ್ತು. ಇಡೀ ರಾತ್ರಿ ಕುಳಿತ ಜನ ಮಿಸುಕಾಡದಂತೆ ಇವರು ಅಭಿನಯಿಸುತ್ತಿದ್ದ ನಾಟಕಗಳನ್ನು ನೋಡುತ್ತಿದ್ದರು. ಇವರ ನವರಸ ಭರಿತ ನಾಟಕಗಳು ಜನರನ್ನು ಒಂದು ಹೊಸಲೋಕಕ್ಕೆ ಕರೆದೊಯ್ಯುತ್ತಿದ್ದವು. ಈ ದಾಸ ಆಟ ಕುರಿತಂತೆ ಒಂದು ನಾಣ್ಣುಡಿ ಇದೆ. "ದಾಸರ ಆಟ ಆಟವಲ್ಲ ದೋಸೆ ಊಟ ಊಟವಲ್ಲ" ಇಷ್ಟೊಂದು ಶ್ರೀಮಂತ ಕಲಾ ಸಂಪತ್ತು, ಕಲಾ ನೈಪುಣ್ಯತೆ ಇದ್ದು ಸಹ ಸಮುದಾಯವೊಂದು ನಗೆಪಾಟಲಿಗೆ ಒಳಗಾಗಬೇಕಾಗಿರುವುದು ದುರಂತವೆ.

ನಾಟಕ ಇನ್ನೇನು ಕೊನೆ ಹಂತ ತಲುಪಿದೆ ಎನ್ನುವಾಗ ಒಂದು ಮಹಾಮಂಗಳಾರತಿ ನಡೆಯುತ್ತಿತ್ತು. ಈ ಮಂಗಳಾರತಿ ತಟ್ಟೆಗೆ ನೆರೆದ ಜನ ದಕ್ಷಿಣೆ ಹಾಕುತ್ತಿದ್ದರು. ಕಿಲಾಡಿಗಳಾದ ದಾಸರು ಈ ಹಂತದಲ್ಲಿ ಆ ಊರ ಗೌಡನನ್ನು ಕುರಿತು "ಇವತ್ತು ಗೌಡರು ನಮ್ಮ ನಾಟಕ ನೋಡಿ ಸಂತೋಷಪಟ್ಟು ೪ ಕಾಲಿನ ಬೇಟೆಯನ್ನು ಧಾನವಾಗಿ ಕೊಡುತ್ತಿದ್ದಾರೆ." ಎಂದು ನಾಟಕದ ಮಂಟಪದಿಂದಲೇ ಹೇಳುತ್ತಿದ್ದರು. ಜನ ಸಂತೋಷಗೊಂಡು ತಮ್ಮ ಮನೆಯಲ್ಲಿದ್ದ ಮೇಕೆ ಕುರಿಗಳನ್ನು ಹಿಡಿದು ಕೊಡುತ್ತಿದ್ದರು.

ಹೀಗೆ ಪಡೆದ ಮೇಕೆ-ಕುರಿಗಳನ್ನು ಬೆಳಿಗ್ಗೆ ಕಡಿದು ಅಡಿಗೆ ಮಾಡಿ ಉಂಡು ಸಂಭ್ರಮಿಸುತ್ತಿದ್ದರು.

ರಾತ್ರಿಯಲ್ಲಾ ರಾಜ, ರಾಣಿ, ವಿಧೂಷಕರಾಗಿ ಮೆರೆದ ಇವರು ಬೆಳಗಾಗುತ್ತಲೆ ಭಿಕ್ಷುಕರಾಗಿ ಮನೆ ಮನೆಗೆ ಜೋಳಿಗೆ ಹಾಕಿಕೊಂಡು ಬಂದದ್ದನ್ನು ನೋಡಿ ಕನಿಕರವೋ, ಸಂಭ್ರಮವೋ, ಅಭಿಮಾನವೋ ಪಡುತ್ತ ಅವರ ಪಾತ್ರಗಳನ್ನು ಹೊಗಳುತ್ತಾ ಮೊರದ ತುಂಬ ದವಸಧಾನ್ಯಗಳನ್ನು ತುಂಬಿ ಕೊಡುತ್ತಿದ್ದರು. ಈ ಸಂದಂರ್ಭದಲ್ಲಿಯೇ ತಮಗೆ ತೊಡಲು ಬೇಕಾದ ಬಟ್ಟೆಬರೆಗಳನ್ನು ಸಹ ಜನರಿಂದ ಕೇಳಿ ಪಡೆದುಕೊಳ್ಳುತ್ತಿದ್ದರು.

ನಾಟಕ ನೋಡಿದ ಅಕ್ಕಪಕ್ಕದ ಊರ ಜನ ತಮ್ಮ ಊರಿನಲ್ಲೂ ನಾಟಕ ಮಾಡುವಂತೆ ವೀಳ್ಯ ಕೊಟ್ಟು ಕರೆಸುತ್ತಿದ್ದರು. ಈ ಕಾಯಕ ನಿರಂತರವಾಗಿ ನಡೆಯುತ್ತಿತ್ತು. ವಾಹನ ಸಂಚಾರ ಇಲ್ಲದ ಆ ಕಾಲದಲ್ಲಿ ನಡೆಯಲು ಸರಿಯಾದ ರಸ್ತೆಗಳಿಲ್ಲದ ಅತ್ಯಂತ ದುರ್ಗಮವಾದ ಸ್ಥಳಗಳಿಗೂ ಕಾಲ್ನಡಿಗೆಯಲ್ಲೇ ತೆರಳಿ ತಮ್ಮ ಗಾಯನ ಬಯಲಾಟಗಳ ಮೂಲಕ ನಾಡಿನ ಸಂಸ್ಕೃತಿ, ಕಲೆ, ಸಾಹಿತ್ಯವನ್ನು ಪ್ರಚಾರಪಡಿಸುತ್ತಿದ್ದರು. ಇವರನ್ನು ಸಂಚಾರಿ ಸಂಸ್ಕೃತಿ ಪ್ರಚಾರಕರೆಂದರೂ ತಪ್ಪಾಗಲಾರದು. ಯಾವುದೇ ಫಲಾಪೇಕ್ಷೆ ಇಲ್ಲದೆ ಕೇವಲ ತಮ್ಮ ತುತ್ತಿನ ಚೀಲ ತುಂಬಿಸಲಿಕ್ಕಾಗಿ ಇಷ್ಟೆಲ್ಲ ಪರಿದಾಟ ಸಮುದಾಯಕ್ಕೆ ಸಮಾಜ ಕೊಟ್ಟಿದ್ದಾದರು ಏನು? ಎಂಬುದು ಒಂದು ದೊಡ್ಡ ಪ್ರಶ್ನೆಯಾಗಿಯೇ ಉಳಿದಿದೆ.

ಭಿಕ್ಷಾಟನೆ ಮತ್ತು ಬಯಲಾಟಗಳ ಪ್ರದರ್ಶನವೆ ಪ್ರಮುಖ ವೃತ್ತಿಯಾಗಿದ್ದರಿಂದ ಬಯಲಾಟಗಳ ಪ್ರದರ್ಶನ ಇಲ್ಲದ ಸಮಯದಲ್ಲಿ ಇವರು ಗುಂಪುಗಳಲ್ಲಿ ಇಲ್ಲವೇ ಒಬ್ಬೊಬ್ಬರೇ ಚೆನ್ನಾಗಿ ಮಳೆ-ಬೆಳೆಗಳಾಗುತ್ತಿದ್ದ ಸ್ಥಳಗಳನ್ನೇ ಹುಡುಕಿಕೊಂಡು ಬಿಕ್ಷಾಟನೆಗೆ ಹೋಗುತ್ತಿದ್ದರು. ತಮ್ಮ ಮೂಲ ನೆಲೆಗಳನ್ನು ಬಿಟ್ಟು ದೂರದೂರುಗಳಿಗೆ ವಾರಾನುಗಟ್ಟಲೆ ತೆರಳಿ ಅಲ್ಲಲ್ಲಿ ತಂಗಿ ಬಿಕ್ಷಾಟನೆ ಮಾಡುತ್ತಿದ್ದದ್ದನ್ನು "ನಿದ್ರಪಲ್ಲಿ" ಎಂದು ಕರೆಯುತ್ತಿದ್ದರು. ಸಾಮಾನ್ಯವಾಗಿ ಸುಗ್ಗಿಯ ಸಂದರ್ಭಗಳಲ್ಲಿ ಈ "ನಿದ್ರಪಲ್ಲಿ"ಗೆ ಹೋಗುತ್ತಿದ್ದರು. ಹಗಲೆಲ್ಲ ಮನೆ ಮನೆಗೆ ಹೋಗಿ ಏಕತಾರಿ ಮೀಟುತ್ತಾ, ಪ್ರಮುಖ ಲಾವಣಿ ತತ್ವ ಪದಗಳನ್ನು ಹಾಡುತ್ತಾ ಬಿಕ್ಷೆ ಬೇಡುತ್ತಿದ್ದರು. ಊರವರು ಇವರಿಂದ ರಾತ್ರಿ ಪದಗಳನ್ನು ಹಾಡಿಸುತ್ತಿದ್ದರು. ಆ ಊರಿನ ಗೌಡ, ಪಟೇಲ ಅಥವಾ ಯಾವುದಾದರು ಮುಖ್ಯಸ್ಥನ ಮನೆಯಲ್ಲಿ ರಾತ್ರಿ ಹಾಡು ಹೇಳುವ ಕಾರ್ಯಕ್ರಮ ಏರ್ಪಾಡಾಗುತ್ತಿತ್ತು. ಹಳ್ಳಿಯ ಜನರೆಲ್ಲ ತಮ್ಮ ಊಟ ಮುಗಿಸಿ ಬಂದು ಸೇರುತ್ತಿದ್ದರು. ಅಲ್ಲಿ ಹಬ್ಬದ ವಾತಾವರಣ ನಿರ್ಮಾಣವಾಗುತ್ತಿತ್ತು. ದಾಸರಿಗೆ ಚಾಪೆ ಹಾಸಿ ಕೂರಿಸುತ್ತಿದ್ದರು. ಮೊದಲಿಗೆ ಒಂದು ಸಣ್ಣ ಪೂಜೆ ಏರ್ಪಡುತ್ತಿತ್ತು, ೩-೪ಜನ ಗುಂಪಿನಲ್ಲಿರುತ್ತಿದ್ದ ಈ ದಾಸರು ಏಕತಾರಿ, ದಮ್ಮಡಿ, ಚಿಟುವಟಿಕೆಗಳನ್ನು ಹಿಡಿದು, ಜನ ಕೋರಿದ ಲಾವಣಿಗಳನ್ನು ಹಾಡುತ್ತಿದ್ದರು. ರಾತ್ರಿ ಇಡೀ ಹಾಡುವಂತಹ ಧೀರ್ಘ ಕಾವ್ಯಗಳಿಂದ ಗಂಗೆ-ಗೌರಿ, ಬಾಲನಾಗಮ್ಮ, ಕೊಣವೇಗೌಡ, ಮಾಗಡಿ ಕೆಂಪೇಗೌಡ, ಮುಂತಾದ ಜನಪ್ರಿಯವಾದ ಹಾಡುಗಳನ್ನು

ಹಾಡಿ ನಕ್ಕಿ–ನಗಿಸಿ, ಸಂತೋಷಪಡಿಸಿ ಜೊತೆಯಲ್ಲಿ ಮಾನವ ಧರ್ಮ ಮನುಷ್ಯತ್ವದ ಗುಣಗಳನ್ನು ಅವರ ಹೃದಯಗಳಲ್ಲಿ ಬಿತ್ತುತ್ತಿದ್ದರು.

ಶುಭ, ಅಶುಭ ಎಲ್ಲಾ ಕಾರ್ಯಗಳಿಗೂ ಇವರ ಹಾಡು ಕತೆಗಳು, ಬಯಲಾಟಗಳು ಪ್ರಮುಖವಾಗಿ ಇರಲೇಬೇಕಿತ್ತು. ಈ ದಾಸರೆ ಅಂದು ಮನರಂಜನೆಯ ಸಾಂಸ್ಕೃತಿಕ ಕೇಂದ್ರ ಬಿಂದುವಾಗಿದ್ದರು.

ಉಚ್ಛ್ರಾಯಸ್ಥಿತಿಯಲ್ಲಿದ್ದ ಇವರ ಪಾರಂಪರಿಕ ಕಸುಬು ನಾಗರೀಕತೆ ಬೆಳೆದಂತೆ, ವೈಜ್ಞಾನಿಕ ಅವಿಸ್ಕಾರಗಳು ಸಂಶೋಧನೆಯಾದಂತೆ, ಸಿನಿಮಾ, ರೇಡಿಯೋ ಟಿ.ವಿ.ಯಂತಹ ಪ್ರಭಾವಿ ಮಾಧ್ಯಮಗಳು ತನ್ನ ಕಬಂಧ ಬಾಹುಗಳನ್ನು ಚಾಚಿದಂತೆ ಪಾರಂಪರಿಕ ಕಸುಬಿಗೆ ಕುತ್ತುಂಟಾಗತೊಡಗಿತು. ಜೊತೆಗೆ ಸಾಂಪ್ರದಾಯಿಕವಾಗಿ ಅಭ್ಯಾಸ ಮಾಡಿ ಪ್ರದರ್ಶನಗೊಳ್ಳುತ್ತಿದ್ದ ಕಂಪನಿ ನಾಟಕಗಳು, ಅವುಗಳ ಬಣ್ಣ ಬಣ್ಣದ ಸೀನರಿ, ವಿದ್ಯುತ್ ದೀಪದ ಬೆಳಕು, ಸ್ತ್ರೀ ಪಾತ್ರಗಳನ್ನು ನಿರ್ವಹಿಸುತ್ತಿದ್ದ ರಂಗುರಂಗಾದ ಲಲನಾಮಣಿಯರ, ಚಂದ ವೈಯ್ಯಾರಗಳ ಮುಂದೆ ದೊಂಬಿದಾಸರ ಪಾರಂಪರಿಕ ಬಯಲಾಟಗಳು, ಹಾಡ್ಗತೆಗಳು, ಲಾವಣಿಗಳು, ತತ್ವಪದಗಳು ಕೇಳುಗರಿಲ್ಲದೆ ಬಡವಾಗ ತೊಡಗಿದವು. ಇದನ್ನೇ ನಂಬಿ ಬದುಕುತ್ತಿದ್ದ ಸಮುದಾಯಕ್ಕೆ ಜೀವನ ನಿರ್ವಹಣೆಯೇ ತುಂಬ ಕಷ್ಟವಾಗತೊಡಗಿತು.

ಊರಲ್ಲಿ ಮನೆಯಿಲ್ಲ, ಕಾಡಲ್ಲಿ ಹೊಲ್ಲವಿಲ್ಲದ ಸ್ಥಿತಿ ಇವರದು. ಪ್ರಾರಂಭದಲ್ಲಿ ವ್ಯವಸಾಯದ ಗಾಳಿ ಗಂಧ ತಿಳಿದಿರಲಿಲ್ಲ. ಅನಿವಾರ್ಯವಾಗಿ ಸಮುದಾಯ ಅಲ್ಲಲ್ಲಿ ನೆಲೆ ನಿಲ್ಲಲ್ಲು ಪ್ರಾರಂಭಿಸಿತು. ನೆಲೆನಿಂತ ಕಡೆ ಸರ್ಕಾರಿ ಭೂಮಿ ಪಡೆದು ರೈತಾಪಿ ಕೆಲಸ ಮಾಡಲು ಪ್ರಾರಂಭಿಸಿದರು. ಆದರೆ ಈ ಪ್ರಮಾಣ ತೀರ ಕಡಿಮೆ. ಜೀವನ ನಿರ್ವಹಣೆಗಾಗಿ ಯುವಕರು ಮತ್ತು ಮಹಿಳೆಯರು ರೈತಾಪಿ ಜನಗಳ ಹೊಲಗದ್ದೆಗಳಲ್ಲಿ ಕೃಷಿಕಾರ್ಮಿಕರಾಗಿ, ಕೆಲವು ಕಡೆ ಜೀತಗಾರರಾಗಿ ದುಡಿಯ ತೊಡಗಿದರು, ಕೆಲವರು ತಾವು ಕಲಿತ ಕೈ ಕೆಲಸಗಳಾದ ತಬಲ ರಿಪೇರಿ, ಹಾರ್ಮೋನಿಯಂ ರಿಪೇರಿ, ಪಿಟೀಲು, ಹಳೆಛತ್ರಿ, ಪೋಟಾ ರಿಪೇರಿ, ಬೀಗ ರಿಪೇರಿ, ಮಾಡುತ್ತಾ ತಮ್ಮ ಅಲೆಮಾರಿ ಜೀವನವನ್ನು ಹಾಗೆಯೇ ಮುಂದುವರಿಸಿದರು. ಹೊಲಗದ್ದೆಯಲ್ಲಿ ದುಡಿಯಲು ಗೊತ್ತಿಲ್ಲದ ಮಹಿಳೆಯರು ಊರೂರು ಅಲೆದು ಟೇಪು, ಪಿನ್ನು, ಸ್ನೋ–ಪೌಡರ್ ವ್ಯಾಪಾರ ಮಾಡುತ್ತಾ, ಟೇಪು ಪಿನ್ನುಗಳನ್ನು ಕೊಟ್ಟು ಬೇಡವಾದ ಕೂದಲನ್ನು ಕೊಡುತ್ತಾರೆ. ಕೂದಲು ಸಂಗ್ರಹಿಸುವ ಕೆಲಸ ತುಂಬ ತ್ರಾಸದಾಯಕ ಕನಿಷ್ಠ ೧/೨ ಕೆ.ಜಿ.ಯಷ್ಟು ಕೂದಲನ್ನು ಸಂಗ್ರಹಿಸಲು ವಾರ, ತಿಂಗಳುಗಟ್ಟಲೆ ನೂರಾರು ಮನೆಗಳನ್ನು ಸುತ್ತಬೇಕು. ಈ ಸುತ್ತುವ ಅಲೆಮಾರಿತನ ಇವರ ಜನ್ಮಕ್ಕೆ ಅಂಟಿಕೊಂಡ ಶಾಪ.

ಇನ್ನಷ್ಟು ಹೆಂಗಸರು ಮತ್ತು ಗಂಡಸರು ಬಳೆ ವ್ಯಾಪಾರ ಮತ್ತು ಬಟ್ಟೆವ್ಯಾಪಾರ ಮಾಡಲು ಪ್ರಾರಂಭಿಸಿದರು. ಇನ್ನಷ್ಟುಜನ ಹಳೆ ಸೀಸ, ಕಬ್ಬಿಣದ ಹಳೆಯ ಸಾಮಾನುಗಳು ಹೊಡೆದು ಹಾಳಾದ ಪ್ಲಾಸ್ಟಿಕ್ ವಸ್ತುಗಳನ್ನು ಊರೂರು ಸುತ್ತಿ ಸಂಗ್ರಹಿಸಿ ಗುಜರಿಗೆ ಮಾರಾಟ ಮಾಡಿ ಹೊಟ್ಟೆ ತುಂಬಿಸಿಕೊಳ್ಳುತ್ತಿದ್ದಾರೆ.

ಹಳ್ಳಿಯಲ್ಲಿ ತಮ್ಮ ಹೊಟ್ಟೆ ತುಂಬಿಸಿಕೊಳ್ಳಲು ಸಾಧ್ಯವಾಗದ ಮಂದಿ ನಗರದ ಕಡೆ ಮುಖಮಾಡಿ ಹೊರಟಿದ್ದಾರೆ. ಕಟ್ಟಡ ನಿರ್ಮಾಣದ ಕಾರ್ಮಿಕರಾಗಿ, ಹಾದಿಬದಿಯಲ್ಲಿ ಚಿಂದಿಹಾಯುವವರಾಗಿ, ಬಾಲಕಾರ್ಮಿಕರಾಗಿ, ಕಾರ್ಖಾನೆಗಳಲ್ಲಿ ಕೆಲಸ ಮಾಡುವ ದಿನಗೂಲಿ ನೌಕರರಾಗಿ ದುಡಿಯ ತೊಡಗಿದರು. ಕೈಲಾಗದ ಒಂದಷ್ಟುಜನ ಬೀದಿ ಬೀದಿಯಲ್ಲಿ ಭಿಕ್ಷೆ ಬೇಡುತ್ತಾ ಭಿಕ್ಷೆ ಬೇಡುವುದು ಕಾನೂನುಬಾಹಿರ ಎಂದು ಸರ್ಕಾರ ಅವರನ್ನು ವ್ಯಾನುಗಳಲ್ಲಿ ತುಂಬಿ ಭಿಕ್ಷುಕರ ಪುನರ್ವಸತಿ ಎಂಬ ನರಕಕ್ಕೆ ತಳ್ಳಿದರೆ, ಅಲ್ಲಿ ನಾಲ್ಕುದಿನ ಇದ್ದು, ಮತ್ತೆ ಹೊರಬಂದು ಅದೇ ಕಾಯಕ ಮುಂದುವರೆಸಿ, ಸ್ಲಂಗಳತ್ತ ಮುಖಮಾಡಿ ಬರ್ಬರ ಬದುಕು ಬದುಕುತ್ತಿದ್ದಾರೆ. ಒಂದು ಕಾಲದಲ್ಲಿ ರಾಜಾಶ್ರಯವಿದ್ದ, ಗೂಢಾಚಾರರಾಗಿದ್ದ, ನಾಡಿನ ಸಾಂಸ್ಕೃತಿಕ ರಾಯಭಾರಿಗಳಾಗಿದ್ದ ಈ ಸಮುದಾಯ ಇಂದು ಬೀದಿ ಬಿಕಾರಿಗಳು.

ಅಪವಾದವೆಂಬಂತೆ ಅಲ್ಲಲ್ಲಿ ತಳವೂರಲು ಪ್ರಾರಂಭಿಸಿ ಸಣ್ಣ ಪ್ರಮಾಣದಲ್ಲಿ ಸರ್ಕಾರಿ ಭೂಮಿ ಪಡಕೊಂಡವರು ದನಕರು, ಕುರಿ-ಮೇಕೆಗಳನ್ನು ಸಾಕಿ ರೈತಾಪಿ ಜನರ ಜೊತೆ ರೈತಾಪಿಗಳಾಗಿ ತಮ್ಮ ಮೂಲ ವೃತ್ತಿಯನ್ನೇ ಮರೆತು ಬಿಟ್ಟಿದ್ದಾರೆ. ಅಕ್ಷರ ಕಲಿತು ಅಷ್ಟೋ ಇಷ್ಟೋ ವಿದ್ಯಾಭ್ಯಾಸ ಮಾಡಿದ ಕೆಲವರು ಸಣ್ಣ ಪುಟ್ಟ ಸರ್ಕಾರಿ ನೌಕರಿಯಲ್ಲಿ ಇರುವುದು ಇತ್ತೀಚೆಗೆ ಕಂಡುಬರುತ್ತಿದೆ.

ಬೇಟೆ

ಆದಿಮಾನವನ ಕಾಲದಿಂದಲು ಬೇಟೆ ಚಾಲ್ತಿಯಲ್ಲಿದೆ. ಬೇಟೆ ಆರಂಭವಾಗಲು ಪ್ರಮುಖವಾಗಿ ಎರಡು ಕಾರಣಗಳನ್ನು ಗುರುತಿಸಬಹುದು. ಒಂದು ಆಹಾರಕ್ಕಾಗಿ, ಮತ್ತೊಂದು ಸ್ವಯಂ ರಕ್ಷಣೆಗಾಗಿ. ಪ್ರಾರಂಭದಲ್ಲಿ ಗೆಡ್ಡೆಗೆಣಸು ತಿಂದು ಜೀವಿಸುತ್ತಿದ್ದ ಮಾನವ ಮಾಂಸದ ರುಚಿ ಕಂಡುಕೊಂಡ. ನಾಲಿಗೆಗೆ ರುಚಿ ಅಲ್ಲದೆ ಹೊಟ್ಟೆಗೆ ಪಥ್ಯ ವೆನಿಸಿದ ಪ್ರಾಣಿಗಳನ್ನು ಬೇಟೆ ಆಡಿ ತಿನ್ನತೊಡಗಿದ.

ರಾಜ ಮಹಾರಾಜರು ಬೇಟೆಯನ್ನು ಮನೋರಂಜನೆಗಾಗಿ ಬಳಸಿಕೊಂಡರೆ ಜನ ಸಾಮಾನ್ಯರು ಮಾಂಸಕ್ಕಾಗಿ ಪ್ರಾಣಿಗಳನ್ನು ಬೇಟೆಯಾಡುವ ಅಭ್ಯಾಸ ಮಾಡಿಕೊಂಡರು. ಆದಿವಾಸಿ ಮತ್ತು ಅಲೆಮಾರಿ ಸಮುದಾಯಗಳಲ್ಲಿ ಬೇಟೆ ಮಾಡುವ ನೈಪುಣ್ಯತೆ ತುಸು ಹೆಚ್ಚೆ ಎಂದು ಹೇಳಬೇಕು. ದೊಂಬಿದಾಸರಿಗೆ ಬೇಟೆ ಒಂದು ಉಪವೃತ್ತಿಯಾಗಿತ್ತು. ಬೇಟೆಯಲ್ಲಿ ಇವರು ತುಂಬ ಕುಶಲಮತಿಗಳು. ಬೇಟೆ ಮಾಡಲಿಕ್ಕಾಗಿ ತರಬೇತಿಗೊಳಿಸಿದ ನಾಯಿಗಳನ್ನು, ಕೌಜಗದ ಹಕ್ಕಿಗಳನ್ನು ಸಾಕಿ ಬೇಟೆಗೆ ಬಳಸಿಕೊಳ್ಳುತ್ತಿದ್ದರು. ಬೇಟೆ ಮಾಡಿತಂದ ಮಾಂಸದಿಂದಲೆ ಇವರ ರಾತ್ರಿ ಅಡುಗೆ ತಯಾರಾಗುತ್ತಿತ್ತೆಂದರೆ ತಪ್ಪಾಗದು.

ಇವರು ಬೇಟೆ ಮಾಡುತ್ತಿದ್ದದು ಸಣ್ಣಪುಟ್ಟ ಪ್ರಾಣಿ ಪಕ್ಷಿಗಳನ್ನು ಮಾತ್ರ, ಸ್ವಲ್ಪ ದೊಡ್ಡ ಪ್ರಾಣಿ ಎಂದರೆ ಹಂದಿ. ಪ್ರಾಣಿ ಪಕ್ಷಿಗಳನ್ನು ಬೇಟೆಮಾಡಿ ಮಾರಾಟ ಮಾಡುತ್ತಿರಲಿಲ್ಲ. ಲಾಭದ ವ್ಯವಹಾರ ಇವರಿಗೆ ತಿಳಿದಿರಲಿಲ್ಲವೆಂದೇ ಹೇಳಬೇಕು.

"ಮಾಂಸ ತಿಂದರೆ ತಿನ್ನಬೇಕು ಮೂಳೆ ಬಿಳುವಷ್ಟು. ಮೂಳೆ ಬಿದ್ದರೆ ಬೀಳಬೇಕು ಮುಕ್ಕಾಲಿಯ ಸಮದಷ್ಟು" ಬೇಟೆ ಮತ್ತು ಇತರ ಪ್ರಸಂಗಗಳು ಎಂಬ ಕೃತಿಯಲ್ಲಿ ಶ್ರೀ ಬಿ. ಆರ್. ಜೋಯಪ್ಪ ಹೇಳುವಂತೆ ದಾಸರು ಸಂತೃಪ್ತವಾಗಿ ಮಾಂಸ ತಿನ್ನಲಿಕ್ಕಾಗಿಯೇ ಬೇಟೆ ಮಾಡುತ್ತಿದ್ದರು.

**ಬೇಟೆಗೆ ಬಳಸುತ್ತಿದ್ದ ಆಯುಧಗಳು**

ಪ್ರಮುಖವಾಗಿ ಹಬ್ಬ ಹರಿದಿನಗಳಂದು ತಮ್ಮ ನೆಲೆಗಳಲ್ಲಿ ಒಮ್ಮೊಮ್ಮೆ ಸೇರುತ್ತಿದ್ದ ಸಂದರ್ಭಗಳಲ್ಲಿ ದೊಡ್ಡ ಬಲೆಗಳ ಜೊತೆಗೆ ತರಬೇತಿ ನೀಡಿದ ಬೇಟೆ ನಾಯಿಗಳನ್ನು ಕರೆದು ಕೊಂಡುಹೋಗುತ್ತಿದ್ದರು. ಬಲೆಗೆ ಬಿದ್ದ ಹಂದಿಮೊಲಗಳನ್ನು ಬಡಿದು ಸಾಯಿಸಲು ಬಡಿಗೆ ಮತ್ತು ಈಟಿಗಳನ್ನು ಬಳಸುತ್ತಿದ್ದರು. ಹಂದಿಬೇಟೆ ತುಂಬ ಅಪಾಯಕಾರಿ ಬೇಟೆ, ಕೆಲವೊಮ್ಮೆ ಹಂದಿ ಬೇಟೆಗಾರರನ್ನು ಅಟ್ಟಿಸಿಕೊಂಡು ಬಂದು ಅಪಾಯ ಮಾಡಿದ ಸಂದರ್ಭಗಳು ಇಲ್ಲದಿಲ್ಲ. ಅದನ್ನು ತಲೆ, ಕುತ್ತಿಗೆ, ಮತ್ತು ಕಿವಿಯ ನಡುವಿನ ಸೂಕ್ಷ್ಮ ಭಾಗಕ್ಕೆ ಒಡೆದು ಸಾಯಿಸುವ ನಿಪುಣತೆ ಇವರಿಗೆ ತಿಳಿದಿತ್ತು.

ಪಕ್ಷಿಗಳನ್ನು ಬೇಟೆಯಾಡಲು ಪಾಜಿ(ಪಂಜರ) ಒಂದು ರೀತಿಯ ಅಂಟು, ಚಾಟರ ಬಿಲ್ಲು, ತಟ್ಟೆಬಿಲ್ಲು, ಕವಣೆ ಮುಂತಾದವುಗಳನ್ನು ಬಳಸುತ್ತಿದ್ದರು.

ಮೀನು ಸೀಗಡಿ ಮತ್ತು ಆಮೆ ಮುರಕಾಟಿ ಹಿಡಿಯಲು ಬಲೆ, ಗಾಳ, ಕುಳಿಗಳನ್ನು ಬಳಸುತ್ತಿದ್ದರು.

**ಬಾವಲಿ ಬೇಟೆ :** ರಾತ್ರಿ ಬೇಟೆ ಸಾಮಾನ್ಯವಾಗಿ ಬಾವಲಿಗಳು ರಾತ್ರಿವೇಳೆ ಹಣ್ಣು ಬಿಟ್ಟಿರುವ ಆಲ, ಗೋಣಿ ಮರಗಳ ಹತ್ತಿರ ಸುಳಿದಾಡುತ್ತಿರುತ್ತವೆ. ಹಣ್ಣನ್ನು ತಿನ್ನಲು ರಾತ್ರಿ ಸಮಯದಲ್ಲಿ ಮರದಿಂದ ಮರಕ್ಕೆ ಹಾರಾಡುತ್ತವೆ. ಮರಗಳ ನಡುವೆ ಬಲೆ ನೇತು ಬಿಟ್ಟು ತುಂಬಾ ಜಾಣತನದಿಂದ ಬಾವಲಿಗಳನ್ನು ಬೇಟೆ ಮಾಡುತ್ತಾರೆ.

ಇತ್ತೀಚೆಗೆ ಪರಿಸರ ಮತ್ತು ಅರಣ್ಯ ಸಂರಕ್ಷಣೆ ಕಾನೂನು ಕಾಡಿಗೆ ಹೋಗಿ ಬೇಟೆ ಮಾಡುವುದನ್ನು ಅಪರಾಧವೆಂದು ಪರಿಗಣಿಸಿರುವುದರಿಂದ ಇವರಿಗೆ ಕಾಡು ಮಾಂಸ ಕನಸಾಗಿ ಬಿಟ್ಟಿದೆ. ಮಾಂಸ ಈಗ ಉಪ್ಪಿನ ಕಾಯಿಯಂತೆ ಎಂದು ಸಮುದಾಯ ಅವಲತ್ತು ಕೊಳ್ಳುತ್ತಿದೆ. ಬೇಟೆಗೆ ಬಳಸುತ್ತಿದ್ದ ಬಲೆಗಳನ್ನು ಇವರೆ ಹೆಣೆಯುತ್ತಿದ್ದರು. ಬೇಕಾದ ಇತರ ಆಯುಧಗಳನ್ನು ಇವರೇ ತಯಾರಿ ಮಾಡಿಕೊಳ್ಳುತ್ತಿದ್ದದ್ದು ವಿಶೇಷ.

**ಪಶುಪಾಲನೆ**

ದೊಂಬಿದಾಸರು ಬೇಟೆ, ಕಲಾ ಪ್ರದರ್ಶನ ಮತ್ತು ಭಿಕ್ಷಾಟನೆಯನ್ನು ಅವಲಂಬಿಸಿ ದವರು. ಪ್ರಸ್ತುತ ಸಮೀಕ್ಷೆಯ ಪ್ರಕಾರ ಇವರಲ್ಲಿ ಪಶುಪಾಲನೆಯು ಗೌಣವಾಗಿ ಅಲ್ಲಲ್ಲಿ ಕಂಡುಬಂದಿದೆ. ಇವರು ಕೃಷಿಕರಾಗಿರುವುದರಿಂದ ಎತ್ತುಗಳನ್ನು ಮತ್ತು ಬೇಟೆಗಾರಿಕೆಯ ಹಿನ್ನೆಲೆಯನ್ನು ಹೊಂದಿರುವುದರಿಂದ ಕೌಜುಗಗಳನ್ನು ಸಾಕಿರುವುದನ್ನು ಕಾಣುತ್ತೇವೆ. ಇವರಲ್ಲಿ ಇರುವ ಪಶುಸಂಪತ್ತು ಈ ಕೆಳಗಿನಂತಿದೆ.

**ಕೋಷ್ಟಕ: ೭.೧ ದೊಂಬಿದಾಸರ ಪಶು ಸಂಪತ್ತು (೨೦೦೭)**

| ಕ್ರಸಂ. | ಹೆಸರು | ಸಂಖ್ಯೆ |
|---|---|---|
| ೧ | ಎತ್ತು, ಹೋರಿ | ೧೭೧ |
| ೨ | ಆಕಳು, ಕರು | ೧೬೭ |
| ೩ | ಎಮ್ಮೆ, ಕೋಣ | ೭೨ |
| ೪ | ಕುರಿ | ೨೦೭ |
| ೫ | ಮೇಕೆ | ೨೦೧ |
| ೬ | ಕೋಳಿ | ೭೮೦ |

ದೊಂಬಿದಾಸರಲ್ಲಿ ಎತ್ತು, ಹೋರಿ, ಆಕಳು, ಕರು, ಎಮ್ಮೆ, ಕೋಣ, ಕುರಿ, ಮೇಕೆ, ಕೋಳಿ ಇತ್ಯಾದಿ ಪಶುಪಾಲನೆಯತ್ತ ಒಲವು ತೋರುತ್ತಿರುವುದನ್ನು ಕಾಣಬಹುದಾಗಿದೆ (ಕೋಷ್ಟಕ: ೭.೧).

**ಕೋಷ್ಟಕ: ೭.೨ ದೊಂಬಿದಾಸರ ಆರ್ಥಿಕ ಸ್ಥಾನಮಾನ (೨೦೦೭)**

| ವಿವರ | ಗಂಡು | ಹೆಣ್ಣು | ಒಟ್ಟು |
|---|---|---|---|
| ಒಟ್ಟು ಜನಸಂಖ್ಯೆ | ೪೧೪೩ | ೩೭೮೦ | ೭೯೨೩ |
| ಆಶ್ರಿತ ಗುಂಪು | ೧೫೪೩ | ೧೩೬೪ | ೨೯೦೭ |
| (-೧೭ ಮತ್ತು ೬೦+ ವಯೋ ಗುಂಪಿನವರು) | | | |
| ಕಾಯಕರ್ತ ಗುಂಪು | ೨೬೦೦ | ೨೪೧೬ | ೫೦೧೫ |
| ಕೆಲಸಗಾರರು | ೧೪೯೪ | ೧೨೩೭ | ೨೬೩೧ |
| ಕೃಷಿ | ೧೦೬ | ೭೭ | ೧೮೩ |
| ಕೃಷಿ ಕಾರ್ಮಿಕ | ೫೯೬ | ೫೮೫ | ೧೧೮೧ |
| ಸರ್ಕಾರಿ ಸೇವೆ | ೯೪ | ೧೬ | ೧೧೦ |
| ವ್ಯಾಪಾರ | ೨೫ | ೧೨ | ೩೭ |
| ಧಾರ್ಮಿಕ ಭಿಕ್ಷಾಟನೆ | ೫೦ | ೩೨ | ೮೨ |
| ಜಾನಪದ ಕಲಾವಿದ | ೪೭ | ೧೨ | ೫೯ |
| ಇತರೆ | ೫೭೬ | ೪೦೩ | ೯೭೯ |
| ನಿರುದೋಗಿಗಳು | ೧೧೦೬ | ೧೧೭೯ | ೨೩೮೫ |

ಇವರಲ್ಲಿ ಕೆಲವರು ಮಕ್ಕಳಾದಿಯಾಗಿ ಪ್ರಬಲ ಜಾತಿಗಳ ಜಮೀನಿನಲ್ಲಿ ಮತ್ತು ಮನೆಗಳಲ್ಲಿ ಜೀತದಾಳುಗಳಾಗಿ ದುಡಿಯುತ್ತಿದ್ದಾರೆ. ಇವರಲ್ಲಿ ಸಣ್ಣ ಮತ್ತು ಅತಿ ಸಣ್ಣ ರೈತರೇ ಹೆಚ್ಚಿರುವರು. ಹೀಗಾಗಿ ತಮ್ಮ ಕೃಷಿ ಪದ್ಧತಿಯಲ್ಲಿ ಅಭಿವೃದ್ಧಿ ಕಾಣಲು

ಸಾಧ್ಯವಾಗುವುದಿಲ್ಲ. ಜೊತೆಗೆ ನೀರಾವರಿ ಸೌಲಭ್ಯವನ್ನ ಕಲ್ಪಿಸಲು ಸಾಧ್ಯವಿಲ್ಲ. ಇದಲ್ಲದೆ ತಾಂತ್ರಿಕ ಕಾರಣ ನೀಡಿ ಗ್ರಾಮೀಣ ಅಭಿವೃದ್ಧಿ ಬ್ಯಾಂಕುಗಳು ಸಾಲ ನೀಡುವುದಿಲ್ಲ. ಇತ್ತೀಚೆಗೆ ವರಣನ ಅವಕೃಪೆಯಿಂದಾಗಿ ಕೃಷಿಯಲ್ಲಿ ಉತ್ಪಾದನೆ ಸ್ಥಗಿತವಾಗುತ್ತಿದೆ. ಇವರ ಒಟ್ಟು ಜನಸಂಖ್ಯೆಯಲ್ಲಿ ಶೇಕಡ ೩೬.೭೯ರಷ್ಟು ಆಶ್ರಿತರು, ೬೩.೨೯ರಷ್ಟು ಕಾಯಕರ್ಹರಿರುವರು. ಕಾಯಕರ್ಹರಲ್ಲಿ ೩೦.೧೦ ರಷ್ಟು ಜನ ನಿರುದ್ಯೋಗಿಗಳಿರುವರು. ಉದ್ಯೋಗಸ್ಥರಲ್ಲಿ ಶೇಕಡ ೮೫ರಷ್ಟು ಕೃಷಿಕೂಲಿ, ಧಾರ್ಮಿಕ ಭಿಕ್ಷಾಟನೆ, ಸಣ್ಣಮಟ್ಟ ವ್ಯಾಪಾರ ಇತ್ಯಾದಿ ಅನಿಶ್ಚಿತ ಕಾಯಕಗಳಲ್ಲಿ ತೊಡಗಿರುವರು(ಕೋಷ್ಟಕ: ೭.೨).

**ವೃತ್ತಚಿತ್ರ: ೭.೧ ವಿವಿಧ ವೃತ್ತಿಗಳಲ್ಲಿ ತೊಡಗಿಕೊಂಡಿರುವರ ದೊಂಬಿದಾಸರ ಶೇಕಡವಾರು ಪ್ರಮಾಣ (೨೦೦೭)**




**ಆಹಾರ ಪಾನೀಯಗಳು**

ಹುಟ್ಟಿದ ಪ್ರತಿಯೊಂದು ಜೀವಿಗೂ ಆಹಾರ ಪಾನೀಯಗಳು ಅವಶ್ಯಕ. ಮನುಷ್ಯ ತನ್ನ ಹಸಿವೆಯನ್ನು ನೀಗಿಸಿಕೊಳ್ಳಲು ಆಹಾರ ಸೇವಿಸುತ್ತಾನೆ. ಪ್ರಾಚೀನ ಕಾಲದಲ್ಲಿ ಮನುಷ್ಯ ಹಸಿಯಾದ ಆಹಾರ ಪದಾರ್ಥಗಳನ್ನೇ ಸೇವಿಸುತ್ತಿದ್ದ, ಬೆಂಕಿಯ ಅವಿಷ್ಕಾರವಾದ ಮೇಲೆ ಆಹಾರ ಪದಾರ್ಥಗಳನ್ನು ಬೇಯಿಸಿ ತಿನ್ನಲು ಪ್ರಾರಂಭಿಸಿದ.

ಈ ಸಮುದಾಯಕ್ಕೆ ಮಾಂಸ ಆಹಾರ ಹೆಚ್ಚು ಪ್ರಿಯವಾದುದು. ದಕ್ಷಿಣ ಕರ್ನಾಟಕದ ಬಹಳಷ್ಟು ಭಾಗಗಳಲ್ಲಿ ಇವರ ಪ್ರಮುಖ ಆಹಾರ ರಾಗಿ ಮುದ್ದೆ, ರೊಟ್ಟಿ, ಅಂಬಲಿ, ಅನ್ನ, ಚಟ್ನಿ ಅಥವಾ ಸೊಪ್ಪು ತರಕಾರಿ ತೊಗರಿ, ಅಲಸಂಧಿ, ಅವರೇ ಕಾಳು,

ಹುರುಳಿಕಾಳುಗಳಿಂದ ಸಾಂಬಾರನ್ನು ತಯಾರಿಸುತ್ತಿದ್ದರು. ಅಲ್ಲದೆ ಮೆಣಸಿನ ಪಜ್ಜಿ, ಜೀರಿಗೆ ಪಜ್ಜಿ, ಹಾಲು ಪಜ್ಜಿ, ಮೊಸರು ಪಜ್ಜಿ, ಇವುಗಳನ್ನು ತಯಾರಿಸಿ ಸೇವಿಸುತ್ತಿದ್ದರು. ಉತ್ತರ ಕರ್ನಾಟಕದ ಭಾಗದಲ್ಲಿ ಜೋಳ ಮತ್ತಿತ್ತರ ದಾನ್ಯಗಳು ಅಲ್ಲದೆ ಹಲವಾರು ಬಗೆಯ ಕಾಳುಗಳನ್ನು ಉಪಯೋಗಿಸುತ್ತಾರೆ.

ಮಜ್ಜಿಗೆ, ಉಪ್ಪುಹಾಕಿ ಬೇಯಿಸಿದ ಅಂಬಲಿ, ಜೋಳದ ಹಿಟ್ಟು ಅಥವಾ ರಾಗಿ ಹಿಟ್ಟಿನಿಂದ ತಯಾರಿಸಿದ ಅಂಬಲಿಗೆ ಮಜ್ಜಿಗೆ, ಉಪ್ಪು ಸೇರಿಸಿ ಸೇವಿಸುತ್ತಾರೆ. ಹಬ್ಬ ಮದುವೆಯಂತಹ ವಿಶೇಷ ಸಂದರ್ಭಗಳಲ್ಲಿ ಹೋಳಿಗೆ ಕಡಬು ಹುಗ್ಗಿ ಕಜ್ಜಾಯದಂತಹ ಸಿಹಿತಿಂಡಿಗಳು, ವಡೆ, ಬೋಂಡ, ಬಜ್ಜಿಯಂತಹ ಕಾರದ ತಿನಿಸುಗಳನ್ನು ಮಾಡುತ್ತಾರೆ. ಕುಲದೇವತೆ ಹಬ್ಬ, ಗ್ರಾಮದೇವತೆ ಹಬ್ಬಗಳ ಸಂದರ್ಭಗಳಲ್ಲಿ ವಿಶೇಷವಾಗಿ ಮಾಂಸದ ಅಡುಗೆ ತಯಾರಿಸುತ್ತಾರೆ.

**ಪಾನೀಯಗಳು**

ಪಾನೀಯಗಳನ್ನು ಮೂರು ಪ್ರಕಾರವಾಗಿ ವಿಂಗಡಿಸಬಹುದು. ಹಣ್ಣಿನ ರಸಗಳು ಮಾದಕ ಪಾನೀಯಗಳು, ಸಿಹಿ ಪಾನೀಯಗಳು.

ಮಾದಕ ಪಾನೀಯಗಳಾಗಿ ಸೇಂದಿ, ಸಾರಾಯಿ, ಪ್ರಮುಖವಾಗಿವೆ. ಸಾರಾಯಿ ಪ್ರಚಾರಕ್ಕೆ ಬರುವ ಮೊದಲೇ ಈಚಲು ಮರದಿಂದ ಇಳಿಸುತ್ತಿದ್ದ ಹೆಂಡ (ಸೇಂದಿ) ಇವರ ಬಹುಪ್ರಿಯವಾದ ಮಾದಕ ಪಾನೀಯವಾಗಿತ್ತು. ಶುಭ, ಅಶುಭ ಎಲ್ಲಾ ಸಂದರ್ಭಗಳಲ್ಲಿಯೂ ಇದನ್ನು ಯತೇಚ್ಛವಾಗಿ ಬಳಸುತ್ತಿದ್ದರು.

**ಆಹಾರ ಪಾನೀಯಗಳ ಸಂರಕ್ಷಣಾ ಕ್ರಮ**

ಆಹಾರ ಪಾನೀಯಗಳನ್ನು ತಯಾರಿಸಲು ಮತ್ತು ಸಂರಕ್ಷಿಸಲು ಮಣ್ಣಿನ ಮಡಿಕೆ ಮತ್ತು ಗಡಿಗೆಗಳನ್ನು ಬಳಸುತ್ತಾರೆ. ವಿಶೇಷ ಸಂದರ್ಭಗಳಲ್ಲಿ ಹೆಚ್ಚು ಆಹಾರ ಪದಾರ್ಥಗಳು ಉಳಿಯುವುದುಂಟು. ಈ ಸಂದರ್ಭದಲ್ಲಿ ಆಹಾರವನ್ನು ಕೆಡದಂತೆ ಒಂದು ದೊಡ್ಡ ಮಣ್ಣಿನ ಗುಡಾಣದಲ್ಲಿ ಹಾಕಿ ಅದಕ್ಕೆ ನೀರು ತುಂಬುತ್ತಾರೆ. ಸ್ವಾಭಾವಿಕವಾಗಿ ಮಣ್ಣಿನ ಮಡಿಕೆ ತಂಪನ್ನು ಕಾಯ್ದು ಕೊಂಡಿರುತ್ತದೆ. ಅದರಲ್ಲಿನ ಆಹಾರ ಪದಾರ್ಥ ಬೇಗ ಹಾಳಾಗುತ್ತಿರಲಿಲ್ಲ.

**ಆಹಾರ ನಿಷೇಧಗಳು**

ದೊಂಬಿದಾಸರು ಮಾಂಸಹಾರ ಪ್ರಿಯರಾದರೂ ಎತ್ತು, ಹಸು, ಎಮ್ಮೆ ಕೋಣದ ಮಾಂಸವನ್ನು ಸೇವಿಸುವುದಿಲ್ಲ.

## ಉಡುಗೆ ತೊಡುಗೆಗಳು

ಮನುಷ್ಯನು ಪ್ರಾರಂಭಿಕ ಹಂತದಲ್ಲಿ ಮಳೆ ಚಳಿಗಳಿಂದ ತನ್ನನ್ನು ರಕ್ಷಿಸಿಕೊಳ್ಳಲು ಮರದ ತೊಗಟೆಗಳನ್ನು ಸುತ್ತಿಕೊಳ್ಳುತ್ತಿದ್ದ. ನಂತರ ನಾರು ಬಟ್ಟೆಗಳ ಮೊರೆಹೊಕ್ಕ. ದಿನಗಳು ಉರುಳಿದಂತೆ ಬಟ್ಟೆಯು ಆವಿಷ್ಕಾರಗೊಂಡಿತು. ಇದರೊಂದಿಗೆ ಉಡುಗೆ ತೊಡುಗೆಗಳಲ್ಲಿ ವೈವಿದ್ಯಮಯವಾದ ಬದಲಾವಣೆಗಳುಂಟಾದವು. ಉಡುಪಿನ ಅಂದ

ಚಂದಕ್ಕೆ ಮನಸೋತ ಮನುಷ್ಯನಿಗೆ ಕ್ರಮೇಣ ಆಭರಣಗಳ ಪ್ರಜ್ಞೆ ಮೂಡಿ ಅದರಲ್ಲೂ ವೈವಿಧ್ಯತೆ ಬೆಳೆಸಿಕೊಂಡ.

ದೊಂಬಿದಾಸರು ರೈತಾಪಿ ಜನಸಮುದಾಯದ ಜೊತೆಯಲ್ಲಿಯೇ ಬದುಕುತ್ತಿದ್ದರು. ಈ ಸಮುದಾಯ ತನಗೆ ಬೇಕಾದ ಬಟ್ಟೆ ಬರೆಗಳನ್ನು ರೈತಾಪಿ ಸಮುದಾಯದಿಂದಲೇ ಬೇಡಿ ಪಡೆದುಕೊಳ್ಳುವುದುಂಟು. ಸಾಮಾನ್ಯವಾಗಿ ಇವರು ಬಿಳಿಯ ನಿಲುವಂಗಿ, ಕಪ್ಪು ಕೋಟು, ಪಂಚೆ, ತಲೆಗೆ ಬಿಳಿಯ ಅಥವಾ ಬಣ್ಣದ ರುಮಾಲನ್ನು ಸುತ್ತಿಕೊಳ್ಳುತ್ತಾರೆ. ದವಸ ಧಾನ್ಯಗಳನ್ನು ಸ್ವೀಕರಿಸಲು ಹೆಗಲಿಗೆ ಜೋಳಿಗೆ (ಕೊಮ್ಮು, ಜೊಲ್ಲು) ನೇತು ಹಾಕಿಕೊಳ್ಳುತ್ತಾರೆ. ಈ ಜೋಳಿಗೆಯನ್ನು ಹಳೆಯ ಬಟ್ಟೆಗಳನ್ನು ಸೇರಿಸಿ ವೃತ್ತಾಕಾರ ಮತ್ತು ಚೌಕಾಕಾರವಾಗಿ ಸೂಜಿ ಮತ್ತು ದಾರ ಬಳಸಿ ಹೊಲಿದು ಕೊಳ್ಳುತ್ತಾರೆ. ಹೆಂಗಸರು, ಸೀರೆ ಮತ್ತು ರವಿಕೆಗಳನ್ನು ಧರಿಸುತ್ತಾರೆ.

ಹಾಸಿ ಹೊದ್ದುಕೊಳ್ಳಲು ಕೌದಿ ಹೊಲಿದುಕೊಳ್ಳುತ್ತಾರೆ. ಕೌದಿಗಳು ಬೇಸಿಗೆ ಕಾಲಕ್ಕೆ ತಂಪಾಗಿಯೂ ಚಳಿಗಾಲಕ್ಕೆ ಬೆಚ್ಚಗೆ ಇರುತ್ತವೆ.

ದೊಂಬಿದಾಸ ಮಹಿಳೆಯರ ಸೀರೆ ಉಡುವುದರಲ್ಲಿ ಒಂದು ವೈಶಿಷ್ಟ್ಯತೆಯಿದೆ. ಬಹಳ ಹಿಂದೆ ಇವರು ಸೆರಗು ಬಲಭಾಗಕ್ಕೆ ಬರುವಂತೆ ಉಡುತ್ತಿದ್ದರು. ಈ ರೀತಿ ಸೀರೆ ಉಡುವುದಕ್ಕೆ "ಕುಡಿಮೋಗು" ಎಂದು ಕರೆಯುತ್ತಾರೆ. ಹಿಂದಿನ ಕಾಲದಲ್ಲಿ ಇದನ್ನು ತುಂಬಾ ಕಟ್ಟುನಿಟ್ಟಾಗಿ ಪಾಲಿಸುತ್ತಿದ್ದರು. ನಾಗರೀಕತೆ ಬೆಳೆದಂತೆ 'ಕುಡಿಮೋಗು' ಕಣ್ಮರೆಯಾಗಿ ಸಾಮಾನ್ಯ ಮಹಿಳೆಯರಂತೆ ಸೀರೆ ತೊಡುವುದಕ್ಕೆ ಪ್ರಾರಂಭಿಸಿದ್ದಾರೆ.

**ಸಾಂಪ್ರದಾಯಿಕ ಉಡುಗೆ ತೊಡುಗೆಗಳು**

ಸಾಂಪ್ರದಾಯಿಕ ಕ್ರಿಯಾವಿಧಿಗಳಲ್ಲಿ ಪೂಜಾವಿಧಿಗಳನ್ನು ನೆರವೇರಿಸುವ ಪೂಜಾರಿ ಅಥವಾ ಕುಲದ ಮುಖಂಡ ಸಾಮಾನ್ಯವಾಗಿ ನಡುವಿಗೆ ಒಂದು ಬಿಳಿಯ ಶುಭ್ರವಾದ ಪಂಚೆ ಉಟ್ಟುಕೊಳ್ಳುತ್ತಾನೆ. ಹೆಗಲ ಮೇಲೆ ಒಂದು ಶಲ್ಯವಿರುತ್ತದೆ. ಹಣೆಗೆ ವಿಭೂತಿ ಅಥವಾ ಮೂರುನಾಮ ಹಾಕಿಕೊಂಡಿರುತ್ತಾನೆ. ಮಹಿಳೆಯರು ಈ ಕಾರ್ಯಗಳಲ್ಲಿ ಭಾಗವಹಿಸುತ್ತಾರಾದರೂ, ಈ ಕಾರ್ಯಕ್ಕಾಗಿಯೇ ವಿಶೇಷವಾದ ಉಡುಗೆ-ತೊಡುಗೆಗಳಿರುವುದಿಲ್ಲ. ಇಂತಹದ್ದೇ ಉಡುಪುಗಳನ್ನು ಧರಿಸಿ ಭಾಗವಹಿಸಬೇಕೆಂಬ ಕಟ್ಟುಕಟ್ಟಳೆಗಳಿಲ್ಲ.

**ತೊಡುಗೆಯಲ್ಲಿ ಬಳಸುವ ವಸ್ತುಗಳು ಮತ್ತು ಅವುಗಳ ಮೂಲ**

ಈ ಸಮುದಾಯ ತೊಡುವ ಆಭರಣಗಳು ವಿಶಿಷ್ಟವಾಗಿವೆ. ಸಾಮಾನ್ಯವಾಗಿ ಚಿನ್ನ ಅಥವಾ ಬೆಳ್ಳಿಯ ಆಭರಣಗಳಾಗಿರುತ್ತಿದ್ದವು. ಪ್ರಮುಖ ಆಭರಣಗಳು ಕಡಗಾಲು, ವಡ್ಡಾಣಂ (ಡಾಬು) ಕಾಲುಂಗುರ, ಮುಕ್ಕುಪಟಿಕ (ಮೂಗುತಿ) ಕಮಲು (ಕಿವಿಯೋಲೆ) ನಿಮ್ಮನ ಮುರಾಲು ಮುಂತಾದವನ್ನು ತೊಡುತ್ತಾರೆ. ಕೈಗೆ ಕಪ್ಪು ಬಳೆ ತೊಡುತ್ತಾರೆ.

**ಅಲಂಕಾರದಲ್ಲಿ ಅಚ್ಚೆ**

ದೊಂಬಿದಾಸರಲ್ಲಿ ಅಚ್ಚೆ ಹಾಕಿಸಿಕೊಳ್ಳುವ ಸಂಪ್ರದಾಯವಿದೆ. ಅದರಿಂದ ದೇಹದ ಸೌಂದರ್ಯ ಹೆಚ್ಚುತ್ತದೆ, ಎಂಬ ನಂಬಿಕೆ ಅವರದು. ಸಾಮಾನ್ಯವಾಗಿ ರಟ್ಟೆ, ಮುಂಗೈ,

ಮೊಣಕಾಲು, ಹಣೆ, ಕೆನ್ನೆಗಳ ಮೇಲೆ ಹಚ್ಚೆ ಹಾಕಿಸಿಕೊಳ್ಳುತ್ತಾರೆ. ದೇವರ ಚಿತ್ರಗಳು, ತುಳಸಿ, ಅರಳಿದ ಹೂ, ರಥ, ಬಾಳೆ ಗಿಡದ ಚಿತ್ರಬಿಡಿಸಿಕೊಳ್ಳುತ್ತಿದ್ದರು. ಹಾಗೂ ತಮ್ಮ ಪ್ರೀತಿ ಪಾತ್ರರಾದವರ ಹೆಸರುಗಳನ್ನು ಮುಂಗೈ ಮೇಲೆ ಹಾಕಿಸಿಕೊಳ್ಳುತ್ತಿದ್ದರು.

ಕೇಶವಿನ್ಯಾಸ

ಕೇಶವಿನ್ಯಾಸ ಈ ಸಮುದಾಯವನ್ನು ಗುರುತು ಹಚ್ಚುವ ಒಂದು ಸಂಕೇತವಾಗಿತ್ತು. ಈ ಸಮುದಾಯದ ಎಲ್ಲಾ ಪುರಷರು ಕಡ್ಡಾಯವಾಗಿ ಕೂದಲುಗಳನ್ನು ಸ್ತ್ರೀಯರಂತೆ ಬೆಳೆಸಿಕೊಳ್ಳುತ್ತಿದ್ದರು ಯಾರಾದರೂ ಅಪ್ಪಿ ತಪ್ಪಿ ಕ್ರಾಪು ಮಾಡಿಸಿಕೊಂಡರೆ ಅದು ಸಾಮಾಜಿಕ ಅಪರಾಧವೆಂದು ಪರಿಗಣಿಸುತ್ತಿದ್ದರು. ಇವರ ಕೇಶವು ಬಯಲಾಟ ಯಕ್ಷಗಾನದ ಪಾತ್ರನಿರ್ವಹಣೆಯಲ್ಲಿ ಅಗತ್ಯವಾಗಿತ್ತು ಇವರ ಬಯಲಾಟಕ್ಕೆ ಕುತ್ತು ಬಂದಂತೆ ಕೇಶ ವಿನ್ಯಾಸದ ನಂಬಿಕೆಗಳು ಬದಲಾಗುತ್ತಾ ಬಂದವು. ಹಾಗಾಗಿ ಆಧುನಿಕ ಕೇಶ ವಿನ್ಯಾಸ ಇವರಲ್ಲೂ ಜಾರಿಗೆ ಬಂತು.

# ೮

# ಸಾಹಿತ್ಯ ಮತ್ತು ಭಾಷೆ

## ಸಾಹಿತ್ಯ

ದೊಂಬಿದಾಸರ ಸಾಹಿತ್ಯ ಮೌಖಿಕ ನೆಲೆಯದ್ದು, ಮೂಲದಲ್ಲಿ ತೆಲುಗರಾದರೂ ಕನ್ನಡ ನಾಡಿನಲ್ಲಿ ನೆಲೆನಿಂತ ಮೇಲೆ ಕನ್ನಡವನ್ನು ಚೆನ್ನಾಗಿ ಕಲಿತು ಕನ್ನಡದಲ್ಲೇ ಸಾಹಿತ್ಯ ರಚನೆ ಮಾಡಿ ಬಯಲಾಟ, ಲಾವಣಿ ತತ್ವಪದಗಳನ್ನು ರಚಿಸಿ ನಾಡಿನ ಉದ್ದಗಲಕ್ಕೂ ಸಂಚರಿಸಿ ಪ್ರಚಾರ ಪಡಿಸಿದ್ದಾರೆ.

**ಮೌಖಿಕ ಸಾಹಿತ್ಯ**

ಈ ಸಾಹಿತ್ಯದಲ್ಲಿ ಜನಪದ ಕಥೆಗಳೇ ಹೆಚ್ಚು ಜನಪ್ರಿಯವಾದ ಪ್ರಕಾರಗಳು. ಕಥೆಗಳ ವಿಶಿಷ್ಟ ಲಕ್ಷಣಗಳೆಂದರೆ ಸಾಂಪ್ರದಾಯಿಕತೆ ಬಲ್ಲವರಿಂದ ಕಥೆಯನ್ನು ಕೇಳಿದ ಮೇಲೆ ಅದನ್ನು ಹೇಳವ ಸಂದರ್ಭ ಪ್ರಾಪ್ತವಾದಾಗ ಅದನ್ನು ಹೇಗೆ ನೆನಪಿನಲ್ಲಿಟ್ಟು ಕೊಳ್ಳಲಾಗುತ್ತದೆಯೋ ಅಂತೆಯೇ ಅದನ್ನು ಪುನರ್ ಉಚ್ಚರಿಸಲಾಗುತ್ತದೆ. ಈ ಪುನರುಚ್ಚಾರಣೆ ಆಯಾ ಕತೆಗಾರನ ನೆನಪಿನ ಶಕ್ತಿ ಕಲ್ಪನಾ ಸಾಮರ್ಥ್ಯ ಅನುಭವಗಳಿಗನುಗುಣವಾಗಿ ಬೆಳೆಯುತ್ತಾ ಹೋಗುತ್ತದೆ. ದೊಂಬಿದಾಸ ಸಮುದಾಯಕ್ಕೆ ಈ ಶಕ್ತಿ ದೈವದತ್ತವಾಗಿ ಬಂದಿದೆ ಎಂದರೆ ಅತಿಶಯೋಕ್ತಿಯಲ್ಲ. ಏಕೆಂದರೆ ಈ ಸಮುದಾಯ ತನ್ನ ಹಿರಿಯರಿಂದ ಕೇಳಿದ ಕಥೆ, ಹಾಡು, ನಾಟಕಗಳನ್ನು ತಾವು ಕಲಿತು ಆಡತ್ತಿದ್ದರು. ಈ ಅಸಾಧಾರಣವಾದ ಜ್ಞಾಪಕ ಶಕ್ತಿ ಇವರಿಗೆ ಪರಂಪರಾಗತವಾಗಿ ಬಂದದು.

ದೊಂಬಿದಾಸರು ಒಳ್ಳೆಯ ಬಯಲಾಟದ ಕಲಾವಿದರು ಹಾಗೂ ಖ್ಯಾತ ವೃತ್ತಿ ಗಾಯಕರು. ಒಂದು ಕಾಲದಲ್ಲಿ ಇವರ ನಾಟಕಗಳು ತುಂಬ ಜನ ಪ್ರಿಯವಾಗಿದ್ದವು. ಇವರ ಹಾಡು ಲಾವಣಿಗಳು ಜನಸಾಮಾನ್ಯರನ್ನು ಸುಲಭವಾಗಿ ಮುಟ್ಟುವ ರೀತಿಯಲ್ಲಿದ್ದವು. ಐತಿಹಾಸಿಕವಿರಲಿ, ಪೌರಾಣಿಕರಲ್ಲಿ ಸೊಗಸಾಗಿ ಹಾಡುತ್ತಿದ್ದರು.

ಜೀಶಂಪರವರು ಗುರುತಿಸಿರುವಂತೆ ದೊಂಬಿದಾಸರು ಹಾಡುವ ಕೆಲವು ಮುಖ್ಯ ಕಾವ್ಯಗಳನ್ನು ಈ ರೀತಿ ವಿಂಗಡಿಸಬಹುದು.

**ಶಿವಕಥೆಗಳು :** ೧. ಶ್ರೀ ಗೌರಿ ಮದುವೆ, ೨. ಗಂಗೇ ಗೌರಿ ಜಗಳ ೩. ಗಂಗೇಗೌರಿ ವಾದ ೪. ಗಂಗೇ ಗೌರಿ ಸವಾಲು.

ಕೃಷ್ಣ ಕಥೆಗಳು : ೧. ಶ್ರೀಕೃಷ್ಣ ಕೊರವಂಜಿ, ೨. ಶ್ರೀಕೃಷ್ಣ ಪಾರಿಜಾತ, ೩. ದೇವಗನ್ನೆಯರು.

ರಮ್ಯ ಲಾವಣಿಗಳು : ೧. ಪ್ರೇಮ ಸತ್ಯಭೋಜ ೨. ಬಾಲನಾಗಮ್ಮ ೩. ಬಸವಕುಮಾರ ೪. ಲೋಹಿತ ಕುಮಾರ. ೫. ಬಂಜೆ ಹೊನ್ನಮ್ಮ.

ವಾಸ್ತವಿಕ ಲಾವಣಿಗಳು: ೧. ತಟವಾಣಿ ಹೆಣ್ಣು ೨. ಅತ್ತೆ ಸೊಸೆ. ೩. ಮಾರೆಗೌಡ (ಕೋಣವೇಗೌಡ). ೪. ಘಾತುಕ ಅಣ್ಣಯ್ಯ ೫. ಧರ್ಮರಾಯ ಕರ್ಮರಾಯ. ೬. ಕಲಿಯುಗ ಬಾಲೆ.

ಐತಿಹಾಸಿಕ ಲಾವಣಿ

ಈ ಪ್ರಕಾರದಲ್ಲಿ ಪ್ರಮುಖ ಲಾವಣಿ– ಮಾಗಡಿ ಕೆಂಪೇಗೌಡ, ಕಿತ್ತೂರುರಾಣಿ ಚೆನ್ನಮ್ಮ, ಮುಂಡರಗಿ ಭೀಮರಾಯ, ನರಗುಂದ ಬಂಡಾಯ, ಸ್ವಾತಂತ್ರ್ಯ ಸಂಗ್ರಾಮ ಕುರಿತಂತೆ ಹತ್ತು ಹಲವು ಲಾವಣಿಗಳ ರಚಿಸಿ ಹಾಡಿ ಪ್ರಚಾರಮಾಡಿದ್ದಾರೆ. ಫ್ಲೀಟ್‌ರವರು ಸಂಗ್ರಹಿಸಿರುವ ನರಗುಂದ ಬಂಡಾಯ ಲಾವಣಿಗಳು ದೊಂಬಿದಾಸರು ಹಾಡಿದವೆಂದು ತಿಳಿದು ಬಂದಿದೆ.

ಶೈವ ಸಂಪ್ರದಾಯಕ್ಕೆ ಸಂಬಂಧಿಸಿದ 'ಶ್ರೀಗೌರಿ ಮದುವೆ' ದೊಂಬಿದಾಸರು ಪ್ರಚುರಪಡಿಸಿ ಹಾಡುವ ಅತ್ಯಂತ ಜನಪ್ರಿಯವಾದ ಲಾವಣಿಗಳಲ್ಲಿ ಒಂದು. ಪೌರಾಣಿಕ ಕಥಾವಸ್ತುವೊಂದರ ಜೊತೆಯಲ್ಲಿ ಸಾಮಾಜಿಕ ವಿಷಯಗಳನ್ನು ಬೆರೆಸಿ ಕಥೆಗಾರ ನವುರಾದ ಹಾಸ್ಯವನ್ನು ತರುವಲ್ಲಿ ಯಶಸ್ವಿಯಾಗಿದ್ದಾನೆ. ಈ ಲಾವಣಿಯಲ್ಲಿ ವಿವಿಧ ಜಾತಿಗಳನ್ನು ಎತ್ತಿ ಆಡುವಾಗ ಎಲ್ಲಿಯೂ 'ಜಾತಿನಿಂದೆ' ಬರದಂತೆ ಅವರು ವಹಿಸುವ ಎಚ್ಚರ ಅಭೂತಪೂರ್ವವಾದದ್ದು. ಗಿರಿರಾಜನ ಮಗಳಾದ ಶ್ರೀಗೌರಿಗೆ ಮದುವೆ ಮಾಡಬೇಕೆಂಬ ಉದ್ದೇಶದಿಂದ ತಂದೆ ಹಲವು ಗಂಡುಗಳನ್ನು ತೋರಿಸಿ ಮದುವೆಗೆ ಒಪ್ಪುವಂತೆ ಸೂಚಿಸುತ್ತಾನೆ. ಆದರೆ ಗೌರಿ ಸಕಲೆಂಟು ಕುಲ ಜಾತಿಗಳ ಆಚಾರವಿಚಾರಗಳ ಬಗ್ಗೆ ತನ್ನದೇ ಆದ ರೀತಿಯಲ್ಲಿ ನವುರಾದ ಹಾಸ್ಯ–ಲೇಪನದೊಂದಿಗೆ ಹೀಗೆಳೆಯುತ್ತಾಳೆ. ಇದನ್ನು ಕೇಳಿದ ತಂದೆಗೆ ಕೋಪ ಬಂದು ಶ್ರೀಗೌರಿಯನ್ನು ಕಾಡಿಗೆ ಬಿಡುವಂತೆ ಆದೇಶಿಸುತ್ತಾನೆ. ಅಲ್ಲಿ ಗೌರಿ ಘೋರ ತಪಸ್ಸುಮಾಡಿ ಜಂಗಮನಾದ ಶಿವನನ್ನು ಲಗ್ನವಾಗುತ್ತಾಳೆ. ಈ ಲಗ್ನಕ್ಕೆ ದೇವಾನುದೇವತೆಗಳು ಸಾಕ್ಷಿಯಾಗುತ್ತಾರೆ. ಬ್ರಾಹ್ಮಣ, ಒಕ್ಕಲಿಗ, ಕುರುಬ, ಕ್ಷತ್ರಿಯ, ಕುಂಬಾರ ಹೀಗೆ ಸಕಲೆಂಟು ಜಾತಿಗಳ ಪ್ರಸ್ತಾಪ ಬಂದರೂ ಎಲ್ಲಿಯೂ ಜಾತಿ ನಿಂದನೆಯ ಲವಶೇಷವು ಸುಳಿಯದೆ ಕೇವಲ ಹಾಸ್ಯ ಮತ್ತು ಜಾತ್ಯಾತೀತ ಮನೋಭಾವ ಮಾತ್ರ ಗಮನಕ್ಕೆ ಬರುವುದು ಈ ಲಾವಣಿ ವಿಶೇಷ.

ಇವರಾಡುವ ತಟವಾಣಿಹೆಣ್ಣು, ಅತ್ತೆ–ಸೊಸೆ, ಘಾತುಕ ಅಣ್ಣಯ್ಯ ಲಾವಣಿಗಳು ಜನಸಾಮಾನ್ಯರ ನಡುವೆ ಇರುವ ಮಾನವ ಸಂಬಂಧಗಳು ಮತ್ತು ಅವುಗಳ ವೈರುಧ್ಯಗಳ ಚಿತ್ರಣವೇ ಆಗಿವೆ. ತಟವಾಣಿಹೆಣ್ಣು ಕಾವ್ಯದಲ್ಲಿ ಗಂಡ ದಂಡಿಗೆ ಹೋದ ಸಂದರ್ಭದಲ್ಲಿ ಪರಪುರುಷನ ಪ್ರೇಮಪಾಶದಲ್ಲಿ ಸಿಲುಕಿ ತನ್ನ ಗಂಡನಿಗೆ ಮೋಸಮಾಡಿ ದಾರಿ ತಪ್ಪಿ

ತಾಯಿಯೇ ತನ್ನ ಮಕ್ಕಳನ್ನು ಕೊಲ್ಲುವ ಸಂದರ್ಭದ ಕರುಳು ಮಿಡಿಯುವಂತ ಚಿತ್ರಣಗಳು ಒಳಗೊಂಡಿವೆ. ಕೊನೆಗೆ ದೇವರು ಅವಳಿಗೆ ಶಿಕ್ಷೆ ಕೊಡುವ ಸನ್ನಿವೇಶವನ್ನು ಮನೋಜ್ಞವಾಗಿ ಚಿತ್ರಿಸಿ, ಈ ತರಹದ ಕೆಟ್ಟ ಕೆಲಸಗಳನ್ನು ಇತರರು ಮಾಡದಂತೆ ಎಚ್ಚರಿಸುವ ಸಂದೇಶವನ್ನು ಈ ಜನಪದ ಕಥೆಗಳ ಮೂಲಕ ಹೇಳುತ್ತಾರೆ.

ಅತ್ತೆ-ಸೊಸೆಯರ ವಿರಸ ಮಾನವನ ಉಗಮದಷ್ಟೇ ಹಳೆಯದು. ಇವರ ವಿರಸವನ್ನು ಚಿತ್ರಿಸುವ ಸ್ವಾರಸ್ಯಕರ ಕಥೆ ಈ ಲಾವಣಿಯಲ್ಲಿ ಚಿತ್ರಿತವಾಗಿದೆ. ಅತ್ತೆಗೆ ತೊಂದರೆ ಕೊಡುವ ಸೊಸೆಯ ವರ್ತನೆಗೆ ಹೇಗೆ ಶಾಸ್ತಿಯಾಯಿತೆಂಬುದು ಈ ಕಥೆಯ ತಿರುಳಾಗಿದೆ. ಈ ಪ್ರಸಂಗ ನೀತಿವಾಕ್ಯದ ಪ್ರಾರಂಭದ ಸಾಲುಗಳು ಹೀಗೆ ಪ್ರಾರಂಭವಾಗುತ್ತವೆ.

"ಅತ್ತೆ ಮೇಲೆ ಸೊಸೆ ತಿರುಗಿ ಬಿದ್ದರೆ
ಮೋಕ್ಷದ ದಾರಿ ಅವಳಿಗಿಲ್ಲ
ಮಾಡಿದವಳುಂಬುತಾಳೆ
ಮಾಡಿದಂಥ ಕಡುಬ
ಇದು ಏನು ಸುಳ್ಳಲ್ಲ"

ಅತ್ತೆ ಕಂಡರೆ ಆಗದ ಸೊಸೆ ತನ್ನ ಗಂಡನಿಗೆ ಚಾಡಿ ಹೇಳಿ ಮುದುಕಿಯನ್ನು ನೀರಿಗೆ ತಳ್ಳಿಸುವುದು, ದೇವರ ದಯೆಯಿಂದ ಮುದುಕಿ ಸಾಯದೆ ಬದುಕುಳಿದು, ಚಳಿಯಿಂದ ನಡುಗುತ್ತಾ ಪಕ್ಕದಲ್ಲಿದ್ದ ಪಾಳುಗುಡಿಯಲ್ಲಿ ವಿಗ್ರಹದ ಹಿಂಭಾಗ ರಕ್ಷಣೆ ಪಡೆಯುವುದು, ಆ ಸಂದರ್ಭದಲ್ಲಿ ನಾಲ್ಕು ಜನ ಕಳ್ಳರು ಬಂದು ಈ ದಿನ ಹೆಚ್ಚು ಒಡವೆ ವಸ್ತ್ರಗಳು ದೊರೆತರೆ ದೇವರಿಗೂ ಒಂದು ಪಾಲು ಕೊಡುವುದಾಗಿ ದೇವರಲ್ಲಿ ವಿನಂತಿಸುವುದು, ಈ ಮಾತನ್ನು ಕೇಳಿಸಿಕೊಂಡ ಮುದುಕಿ ಚಳಿಯಿಂದ ನಡುಗುತ್ತ ಏನೇನೋ ಒದರುವುದು ಹೀಗೆ ಕಥೆ ಸಾಗುತ್ತದೆ. ಇದನ್ನು ಕೇಳಿದ ಕಳ್ಳರು ದೇವರೇ ಮಾತನಾಡಿದರೆಂದು ಭಾವಿಸುತ್ತಾರೆ. ಒಬ್ಬ ಸಾಹುಕಾರನ ಮನೆಗೆ ನುಗ್ಗಿ ಒಡವೆ ವಸ್ತ್ರಗಳನ್ನು ಕದ್ದು ತರುತ್ತಾರೆ. ಮಾತಿನಂತೆ ಆ ಗುಡಿಗೆ ಮರಳಿಬಂದು ದೇವರಿಗೂ ಒಂದು ಪಾಲೆಂದು ತೆಗೆದು ಇಟ್ಟು ಹೊರಟುಹೋಗುತ್ತಾರೆ. ಮುದುಕಿ ಇದೆಲ್ಲವನ್ನೂ ಗಂಟುಕಟ್ಟಿಕೊಂಡು ಮನೆಗೆ ಬರುತ್ತಾಳೆ. ಮುದುಕಿಯನ್ನು ನೋಡಿದ ಮಗ-ಸೊಸೆಗೆ ಆಶ್ಚರ್ಯವೋ ಆಶ್ಚರ್ಯ! ಬದುಕಿಬಂದಿರುವುದಲ್ಲದೆ ಒಡವೆ-ವಸ್ತ್ರಗಳನ್ನೂ ತಂದಿದ್ದಾಳೆ! ಇದು ಹೇಗೆಂದು ವಿಚಾರಿಸುತ್ತಾರೆ. ಇದೆಲ್ಲಾ ನೀರಿನಲ್ಲಿ ಸಿಕ್ಕಿತು, ಇನ್ನೂ ಬೇಕಾದಷ್ಟು ಅಲ್ಲಿ ಇದೆ ಎನ್ನುತ್ತಾಳೆ. ದುರಾಸೆಯ ಸೊಸೆ ಗಂಡನಿಗೆ ತನ್ನನ್ನೂ ನೀರಿಗೆ ದೂಕು, ನಾನು ನನಗೆ ಬೇಕಾದಷ್ಟು ಒಡವೆ-ವಸ್ತ್ರಗಳನ್ನು ತರುತ್ತೇನೆ ಎಂದು ಹೇಳಿ ಗಂಡನಿಂದ ನೀರಿಗೆ ದೂಡಿಸಿಕೊಳ್ಳುತ್ತಾಳೆ. ಆದರೆ ಅವಳು ನೀರಿನಿಂದ ಹೊರ ಬರಲೇ ಇಲ್ಲ. ಮುದುಕಿ ಮಗನಿಗೆ ಮತ್ತೊಂದು ಮದುವೆ ಮಾಡಿ ಸುಖವಾಗಿರುತ್ತಾಳೆ.

ದೊಂಬಿದಾಸರು ಹಾಡುವ ಮತ್ತೊಂದು ಲಾವಣಿ ಘಾತುಕ ಅಣ್ಣಯ್ಯ ಅಥವಾ ಪಾಪಿಗೇಡಿ ಅಣ್ಣಯ್ಯ. ಇದು ಅಣ್ಣತಂಗಿಯರಿಬ್ಬರ ಕಥೆ. ವರ್ಷಕ್ಕೊಮ್ಮೆ ನಡೆಯುವ

ದೀಪಾವಳಿ ಹಬ್ಬಕ್ಕೆ ತಂಗಿಯನ್ನು ಕರೆಯಲು ಅಣ್ಣ ಹೋಗುತ್ತಾನೆ. ತಂಗಿ ಅಣ್ಣನನ್ನು ಕಂಡು ಸಂಭ್ರಮಿಸಿ, ಸತ್ಕರಿಸುತ್ತಾಳೆ. ತವರಿಗೆ ಹೋಗುವ ಸಂತಸದಲ್ಲಿ ತನ್ನಲ್ಲಿದ್ದ ಎಲ್ಲಾ ಒಡವೆಗಳನ್ನು ಧರಿಸಿಕೊಳ್ಳುತ್ತಾಳೆ. ಒಳ್ಳೆಯ ಸೀರೆಯನ್ನು ಉಟ್ಟುಕೊಳ್ಳುತ್ತಾಳೆ. ಅಣ್ಣ ತಂಗಿ ತವರುಮನೆಯ ದಾರಿ ಹಿಡಿಯುತ್ತಾರೆ. ಕಾಡಿನ ಮಧ್ಯೆ ಬರುವಾಗ ತಂಗಿಯ ಮೈಮೇಲಿನ ಒಡವೆ-ವಸ್ತ್ರಗಳು ಅಣ್ಣನ ಕಣ್ಣು ಕುಕ್ಕುತ್ತವೆ. ಈ ಒಡವೆ-ವಸ್ತ್ರಗಳನ್ನು ದೋಚಬೇಕೆಂಬ ದುರಾಲೋಚನೆ ಮೂಡುತ್ತದೆ. ತಂಗಿಯ ಕೈಕಾಲು ಕಟ್ಟಿ ಒಡವೆ-ವಸ್ತ್ರಗಳನ್ನು ಬಿಚ್ಚಿಕೊಂಡು ಅವಳನ್ನು ಕೊಲ್ಲಲು ಕಲ್ಲನ್ನು ಎತ್ತಿಕೊಳ್ಳುತ್ತಾನೆ. ಅದರ ಕೆಳಗಿದ್ದ ಸರ್ಪವೊಂದು ಅವನನ್ನು ಕಚ್ಚುತ್ತದೆ. ಆ ಸಂದರ್ಭದಲ್ಲಿಯೂ ತನ್ನ ಅಣ್ಣನ ಸಾವನ್ನು ಕಂಡು ಮರುಗುವ ತಂಗಿ ಶಿವಪಾರ್ವತಿಯಲ್ಲಿ ಮೊರೆಯಿಟ್ಟು ತನ್ನ ಅಣ್ಣನನ್ನು ಬದುಕಿಸಿಕೊಳ್ಳುತ್ತಾಳೆ. ಅಣ್ಣನಿಗೆ ತನ್ನ ತಪ್ಪಿನ ಅರಿವಾಗುತ್ತದೆ. ಹೀಗೆ ಕಥೆ ಸುಖಾಂತ್ಯಗೊಳ್ಳುತ್ತದೆ. ಇದರ ಪ್ರಭಾವ ಜನಪದರಲ್ಲಿ ಎಷ್ಟಿದೆ ಎಂದರೆ ಗಂಡನ ಮನೆಯಿಂದ ತವರು ಮನೆಗೆ ಮಗಳನ್ನು ಕರೆತರಲು ಅಣ್ಣನನ್ನು ಕಳುಹಿಸಬಾರದೆಂಬ ನಂಬಿಕೆ ಈಗಲೂ ಇದೆ.

ಇವರಾಡುವ ಮತ್ತೊಂದು ಲಾವಣಿ ಮಾರೇಗೌಡ ಅಥವ ಕೋಣವೇಗೌಡ ಎಂಬ ಜಿಪುಣ ಶ್ರೀಮಂತನನ್ನು ಕುರಿತದ್ದು. ಲಾವಣಿ ಹೀಗೆ ಪ್ರಾರಂಭವಾಗುತ್ತದೆ –

"ಕಾಸಿಪುರಿಯ ಪಟ್ಟಣದಲ್ಲಿ
ನೀಟುಗಾರ ಮಾರೇಗೌಡ
ಮಾರೇಗೌಡ್ನ ಮನೆಯೆಂಬೋದು
ಹ್ಯಾಗಿರುವುದೋ ಕಂಡಿಲ್ಲ ನೀವು
ಸಾಲಿಗೆ ಸಾವಿರ ಕಂಬದ ಮನೆ
ಮೂಲೆ ಮುನ್ನೂರು ಕಂಬದ ಮನೆ
ದೊಡ್ಡಪಡಸಾಲೆ ಮನೆಯೇ ಉಂಟು
ಮಾಡಿಯ ಮೇಲೆ ಮಾಡಿ ಉಂಟು
ಚಿನ್ನದ ಕಳಸ ಬೆಳ್ಳಿಯ ಕಳಸ
ಮತ್ತೆ ಕಳಸವ ಎತ್ತಿದ ಗೌಡ"

ಇಷ್ಟೊಂದು ಆಗರ್ಭ ಶ್ರೀಮಂತಿಕೆಯುಳ್ಳ ಗೌಡನ ಬದುಕಾದರೂ ಎಂಥದ್ದು? ತನ್ನ ಹೆಂಡತಿಗೆ ಅಡುಗೆ ಮಾಡಲು ಮೂರು ವರ್ಷದ ಮುಗ್ಗಿದ ಜೋಳ. ಆರು ವರ್ಷದ ಬುರುಡೆಯ ರಾಗಿಯನ್ನ ಅಳೆದು ಮೂರು ಪಾವಿನಷ್ಟು ಕೊಡುತ್ತಾನೆ. ಮತ್ತು ಹೆಂಡತಿಗೆ ಹೇಳುತ್ತಾನೆ. ಈ ರಾಗಿ ಜೋಳವನ್ನು ಕೇರಿ ಸ್ವಚ್ಛಮಾಡಿ ಅದರಲ್ಲಿರುವ ಕಲ್ಲು ಮಣ್ಣು ಕುಸುಬಿಯನ್ನು ತೆಗೆಯಬೇಡ. ಹಾಗೆಯೇ ಬೀಸಿ ಗುಡಾಣವಿಟ್ಟು ಅಂಬಲಿ ಕಾಯಿಸು.

ಅದಕ್ಕೆ ಉಪ್ಪುಕೂಡ ಹಾಕಬೇಡ. ಮನೆ ಹಿಂದಲ ಹೊಲಕ್ಕೆ ಹೋಗಿ ಅಣ್ಣೇಸೊಪ್ಪನ್ನು ಕೊಯ್ದುತಂದು ಹಾಗೆಯೇ ಬೇಯಿಸು, ಅದರಲ್ಲಿರುವ ಹುಳ ಉಪ್ಪಟೆ ತೆಗೆಯಬೇಡ

ಎಂದು ಹೇಳುತ್ತಾನೆ. ಹೀಗೆ ಕಾಯಿಸಿ ಬೇಯಿಸಿದ ಅಂಬಲಿ ಸೊಪ್ಪನ್ನು ತಿನ್ನುವ ಕ್ರಮಕೂಡ ವಿಚಿತ್ರವಾಗಿದೆ. ಕೊಟ್ಟಿಗೆಗೆ ಹೋಗಿ ಸಗಣಿ ತಗೊಂಡು ಬಂದು ನಡುಮನೆಯಲ್ಲಿ ಕಟ್ಟೆಕಟ್ಟಿ ಅದರಲ್ಲಿ ಅಂಬಲಿ ಮತ್ತು ಬೇಯಿಸಿದ ಅಣ್ಣೇಸೊಪ್ಪನ್ನು ಸುರಿಯುತ್ತಾನೆ. ಮುಂದುಗಡೆ ಬಾಗಿಲನ್ನು ಭದ್ರಪಡಿಸುವಂತೆ ಹೇಳುತ್ತಾನೆ. ಯಾರಾದರೂ ಬಂದು ಕೇಳಿಯಾರು ಎಂಬ ಆತಂಕ. ಅಂಬಲಿ ಮತ್ತು ಸೊಪ್ಪನು ಕೈಯಿಂದ ತಿಂದರೆ ತಡವಾಗುತ್ತೆಂದು, ಮಂಡಿಯೂರಿಕುಳಿತು ನಾಯಿ ನೆಕ್ಕಿದಂಗೆ ನೆಕ್ಕುತ್ತಾನೆ. ಕತ್ತೆ ತಿಂದಹಾಗೆ ಸೊಪ್ಪನ್ನ ತಿನ್ನುತ್ತಾನೆ.

ಗೌಡ ಹೀಗೆ ಅಂಬಲಿ ಕುಡಿಯುವ ಸಮಯದಲ್ಲಿ ಒಂದು ನೊಣ ಅದರಲ್ಲಿ ಬೀಳುತ್ತದೆ. ಇದನ್ನು ಕಂಡು ಗೌಡನಿಗೆ ತುಂಬಾ ದುಃಖವಾಗುತ್ತದೆ. ಈ ಹಾಳಾದ ನೊಣ ಎಷ್ಟೆಂದು ಅಂಬಲಿ ಕುಡಿಯಿತಲ್ಲಾ, ನನ್ನ ಹೊಟ್ಟೆಗೆ ಸಾಲದಾಯಿತಲ್ಲ ಎಂದು ಆ ನೋಣವನ್ನು ಹುಲಿ ಹಿಡಿದಂಗೆ ಹಿಡಕೊಂಡು ಬಾಯಿಯಲ್ಲಿಟ್ಟು ಸೀಪಿ ಎಸೆಯುತ್ತಾನೆ. ಹೀಗೆ ಅವನ ಜಿಪುಣತನದ ಚಿತ್ರಗಳು ಸಾಲುಸಾಲಾಗಿ ಮೂಡಿಬಂದು ಕೇಳುಗರನ್ನು ನಕ್ಕು-ನಕ್ಕು ಹೊಟ್ಟೆ ಹುಣ್ಣಾಗಿಸುತ್ತದೆ. ಈ ಗೌಡನಿಗೆ ನೂರು ಎಕರೆ ಜಮೀನಿತ್ತು. ದಿನಾ ಹನ್ನೆರಡು ಹೇರು ಕಟ್ಟುತ್ತಿದ್ದ, ಮೊದಲನೇ ಹೇರಿಗೆ ಚಿನ್ನದ ನೊಗ ಕೊನೆಯ ಹೇರಿಗೆ ಬೆಳ್ಳಿಯ ನೊಗ. ಇಷ್ಟೊಂದು ಶ್ರೀಮಂತಿಕೆ ಇದ್ದ ಜಿಪುಣನ ಕಥೆಕೇಳಿ ಜನ ಆನಂದ ಪಡುತ್ತಾರೆ.

ಬಂಜೆತನದ ನೋವು ಸಂಕಟವನ್ನು ಪ್ರತಿಬಿಂಬಿಸುವ ಬಂಜೆ ಹೊನ್ನಮ್ಮ, ಬಾಲ ನಾಗಮ್ಮನಂತಹ ರಮ್ಯ ಲಾವಣಿಗಳು ದೀರ್ಘಲಾವಣಿಗಳಾಗಿದ್ದು ಸಂಪೂರ್ಣವಾದ ಕಾವ್ಯವಾಗಿ ನಿಲ್ಲುವಂತಹವುಗಳು. ಬಂಜೆತನದ ಅವಮಾನಗಳನ್ನು ನೀಗಿಕೊಳ್ಳಲಿಕ್ಕಾಗಿ ಒಂದು ಮಗುವನ್ನು ಕರುಣಿಸುವಂತೆ ಶಿವನನ್ನು ಬೇಡಿಕೊಳ್ಳುವ ಪ್ರಸಂಗ ಮನಮಿಡಿಯುವಂತಿದೆ.

ಕುಂಟನಾದರೂ ಆಗಲಿ ಶಿವನೆ
ಕುರುಡನಾದರೂ ಆಗಲಿ ಶಿವನೆ
ಇವತ್ತಾದರೂ ಹುಟ್ಟಲಿ ಮಗು
ನಾಳೆ ಬೆಳಗ್ಗೆ ಸಾಯಲಿ ಮಗು
ಬಂಜೆ ಎಂಬೊ ಸೊಲ್ಲು ಶಿವನೆ
ಹೋದರೆ ಸಾಕಲ್ಲ ಶಿವನೆ

ಎಂದು ಶೋಕ ಮಾಡುವ ಹೊನ್ನಮ್ಮನ ಕಥೆಯನ್ನು ದೊಂಬಿದಾಸರ ಕಂಠದಲ್ಲಿಯೇ ಕೇಳಬೇಕು.

ಪೌರಾಣಿಕ ಕಥಾವಸ್ತುವುಳ್ಳ ಕೃಷ್ಣ-ಕೊರವಂಜಿ, ಐತಿಹಾಸಿಕ, ಕಾವ್ಯಗಳಾದ ಮಾಗಡಿ ಕೆಂಪೇಗೌಡ, ಕಿತ್ತೂರು ರಾಣಿ ಚೆನ್ನಮ್ಮ ಇತ್ಯಾದಿ ಕಾವ್ಯಗಳನ್ನು ಮೋಹಕ ಕಥೆಗಳನ್ನಾಗಿ ತಮ್ಮ ಏಕತಾರಿಯ ಮಿಡಿತಕ್ಕೆ ಅಳವಡಿಸಿಕೊಂಡು ಸುಮಧುರವಾಗಿ ಹಾಡುತ್ತಾರೆ (ಅನುಬಂಧ ಗಮನಿಸಿ).

ದೊಂಬಿದಾಸರು ಹಾಡುವ ಎಲ್ಲಾ ಲಾವಣಿಗಳಲ್ಲಿಯೂ ಸಾಮಾನ್ಯ ಜನರ ದುಃಖದುಮ್ಮಾನಗಳು ಆಸೆ–ಆಕಾಂಕ್ಷೆಗಳು, ನೀತಿ ಬೋಧನೆಗಳು ಹಾಸು ಹೊಕ್ಕಾಗಿರುತ್ತವೆ.

ಈ ತರಹದ ಲಾವಣಿಗಳ ಜೊತೆಗೆ, ಈ ನಾಡಿನ ದಾಸಶ್ರೇಷ್ಠರು ಮತ್ತು ದಾರ್ಶನಿಕರ ತತ್ವಪದಗಳನ್ನು ಹಾಡುತ್ತಾರೆ. ಅವರಾಡುವ ಪ್ರಮುಖ ತತ್ವಪದಗಳು ಇಂತಿವೆ.

೧. ಶೈವ ಸಂಪ್ರದಾಯಕ್ಕೆ ಸಂಬಂಧಿಸಿದ ತತ್ವಪದಗಳು: ಅ) ಗುರು ಸಂಜೀವ ಸ್ವಾಮಿಗಳ ರಚನೆಗಳು (ಹೊಸಹಳ್ಳಿ ಗುರು ಶಿವಾಯ ಮಠ ಮಂಡ್ಯ). ಆ) ಶ್ರೀ ಗುರು ಕೃಷ್ಣ ಚೈತನ್ಯರು ರಚಿಸಿದ ತತ್ವಪದಗಳು (ದತ್ತಾತ್ರೇಯ ಪೀಠ, ವೀರಜ್ಜನಹಳ್ಳಿ ಮಡಕಶಿರ ಆಂಧ್ರ ಪ್ರದೇಶ).

೨. ದಾಸರ ಪದಗಳು, (ಕನಕದಾಸ, ಪುರಂದರದಾಸರು ಇತ್ಯಾದಿ)

೩. ಶಿಶುನಾಳ ಶರೀಫರ ತತ್ವಪದಗಳು.

೪. ನಾಯಕನ ಹಟ್ಟಿ ತಿಪ್ಪೆರುದ್ರಸ್ವಾಮಿ ಕುರಿತ ತತ್ವಪದಗಳು.

೫. ಕೈವಾರ ತಾತಯ್ಯನವರ ಕುರಿತ ತತ್ವಪದಗಳು.

೬. ಸರ್ವಜ್ಞನ ವಚನಗಳು.

೭. ಬಸವಣ್ಣ ಮತ್ತು ಅಕ್ಕಮಹಾದೇವಿಯವರ ವಚನಗಳು ಹಾಗೂ ಶಂಕರಾಚಾರ್ಯರ ಕುರಿತ ತತ್ವಪದಗಳು.

ಜನಪದ ನಾಟಕಗಳ ಪ್ರಸ್ತಾಪ ಕುಮಾರ ವ್ಯಾಸನಲ್ಲಿಯೂ ಬರುತ್ತದೆ. ಈ ನಾಟಕಗಳನ್ನು ಅಲ್ಲಿ 'ನಾಡಾಡಿಗಳ ನಾಟಕ' ಎಂದು ಕರೆಯಲಾಗಿದೆ. ದೊಂಬಿದಾಸರು, ಬಹುರೂಪಿಗಳು ಇಂತಹ ನಾಟಕಗಳನ್ನು ಜನಪ್ರಿಯಗೊಳಿಸಿರಬೇಕು. ಕುಮಾರವ್ಯಾಸ ನೀಡುವ ಈ ನಾಟಕದ ಚಿತ್ರವನ್ನು ಗಮನಿಸಬಹುದು.

"ಬೇಡನಾದನ ಜಾತರಿಪು ಮಾ
ತಾಡಸಿದನಹಿಪತಿಯನೆಲೆ ನಾ
ಡಾಡಿಗಳ ನಾಟಕದ ಥಣಾಯಲ್ಲಾರು ನೀನೆಂದ"

(ಕಂಠೀರವ ನರಸರಾಜ ವಿಜಯದಲ್ಲಿ ದಶಾವತಾರ ನಾಟಕದ ಬಣ್ಣನೆ ಬರುತ್ತದೆ).

"ಹರಿಯ ದಶಾವತಾರದ ನಾಟಕವ ತೋರಿ
ಮೆರೆದ ಭಾಗವತರ ಚಂದ
ನರಸರಾಜೇಂದ್ರ ಚಂದ್ರಮನೋಲಗದಲಿ
ಪರಿಶೋಭಿಸಿದುದೇಪೇಳ್ವೆ" (ಕನ್ನಡ ವಿಷಯ ವಿಶ್ವಕೋಶ:೧೦೪೦).

ಹೀಗೆ ಬಯಲಾಟಗಳು ಅತ್ಯಂತ ಪ್ರಾಚೀನ ಕಾಲದಿಂದಲೂ ಶಿಷ್ಟ ಮತ್ತು ಜನಪದ ಮೂಲಗಳೆರಡರಲ್ಲೂ ಪ್ರಚಲಿತವಾಗಿದ್ದು ಬೆಳೆದು ಬಂದಿವೆ. ದೊಂಬಿದಾಸರು ಬಯಲಾಟದ ಕಲಾವಿದರೂ ಆಗಿದ್ದರು. ಯಕ್ಷಗಾನದ ಮೂಲಪುರುಷರೆಂದರೂ ತಪ್ಪಾಗಲಾರದು. ಇವರಾಡುತ್ತಿದ್ದ ಪ್ರಮುಖವಾದ ಬಯಲಾಟಗಳು ಇಂತಿವೆ. ಸತ್ಯ ಹರಿಶ್ಚಂದ್ರ, ಪ್ರಹ್ಲಾದ ಚರಿತ್ರೆ, ಶಿವಮಹಾತ್ಮೆ, ರಾಜಸತ್ಯವ್ರತ, ಕೃಷ್ಣಪಾರಿಜಾತ, ನಳಚರಿತ್ರೆ,

ಕಂಸವಧೆ, ಗಿರಿಜಾ ಕಲ್ಯಾಣ, ಕರಿಬಂಟನ ಕಾಳಗ, ಪ್ರಮೆ ಸತ್ಯಬೋಜ, ಗಂಗೆ-ಗೌರಿ, ಮಾರ್ಕಂಡೇಯ, ಸಾರಂಗದ, ಚಿತ್ರಕೇತು ಮಹಾರಾಜ, ಭೂ ಕೈಲಾಸ, ಸತಿ ಸಕ್ಕೂಬಾಯಿ, ನಲ್ಲತಂಗ, ಕನಕಾಂಗಿ ಕಲ್ಯಾಣ, ಶಾಂಭವಿ ಚರಿತ್ರೆ, ಎಲ್ಲಮ್ಮನ ಕಥೆ, ಪಾರಿಜಾತ, ಚಂದ್ರಹಾಸ, ರೇಣುಕೆ ಎಲ್ಲಮ್ಮ, ಜೋಕುಮಾರನ ಕಥೆ ಇತ್ಯಾದಿ.

**ಮಾಲದಾಸರಿ (ಹೊಲೆಯದಾಸ) ಪೌರಾಣಿಕ ಕಥೆ**

ವಿಷ್ಣುಭಕ್ತಿ ಸಂಕೀರ್ತನೆಗಳಿಂದ ತಾನು ಮಾತ್ರ ಧನ್ಯನಾದುದಲ್ಲದೆ, ಸಂಕೀರ್ತನೆಯ ಶ್ರವಣಮಾತ್ರದಿಂದಲೇ ಇತರರನ್ನೂ ಸಹ ಧನ್ಯರನ್ನಾಗಿ ಮಾಡಿದ ಭಕ್ತಾಗ್ರಣಿ ಮಾಲದಾಸರಿ! ಆತ ಹೇಳಬಾರದ ಕುಲಕ್ಕೆ ಸೇರಿದಾತ. ಮಾಲದಾಸರಿಯು ವಿಷ್ಣುಮೂರ್ತಿ ವಾಮನಾವತಾರವನ್ನು ಧರಿಸಿದ ಪುಣ್ಯ ಭೂಮಿಯಿಂದ ಮೂರು ಯೋಜನಗಳಷ್ಟು ದೂರದಲ್ಲಿ ವಾಸಿಸುತ್ತಿದ್ದ. ಆತ ಪ್ರತಿದಿನ ಸೂರ್ಯೋದಯಕ್ಕೆ ಮೊದಲೇ ಹೊರಟು ದೇವಾಲಯಕ್ಕೆ ಬಂದು, ಮಂಗಳ ರಾಗದಿಂದ ಸ್ವಾಮಿಯನ್ನು ಭಕ್ತಿ ಭರಿತ ಹೃದಯದಿಂದ ಭಜಿಸುತ್ತಿದ್ದ. ಅವನ ಶರೀರ ದುರ್ಗಂಧ ಭೂಯಿಷ್ಠವಾಗಿದ್ದರೂ ಸಹ ಆತನ ಹೃದಯ ನಿತ್ಯ ನಿರ್ಮಲವಾಗಿತ್ತು. ಕೊಳೆದುಂಬಿದ ಶರೀರದಿಂದ, ಹಿತ್ತಾಳೆಯ ಶಂಖ ಚಕ್ರಗಳನ್ನು ಎತ್ತಿಕೊಂಡು, ಕೈಯ್ಯಲ್ಲಿ ಚಿಟಿಕೆ ತಾಳಗಳನ್ನು ಹಿಡಿದುಕೊಂಡು ಬಂದು, ಸಂಕೀರ್ತನೆ ಮಾಡುತ್ತಾ ಭಕ್ತಿ ಪರವಶನಾಗಿ ಕಂಗಳಿಂದ ಕಂಬನಿ ಹರಿಸುತ್ತಾ ಮೈಮರೆತು ತಾಂಡವವಾಡುತ್ತಿದ್ದ.

ಪ್ರತಿದಿನ ಇದೇ ವಿಧವಾಗಿ ಹಾಡಿ, ಆಡಿ, ಕೊನೆಯದಾಗಿ ಸ್ವಾಮಿಗೆ ಸಾಷ್ಟಾಂಗ ಪ್ರಣಾಮಮಾಡಿ, ಸ್ವಾಮಿಗೆ ಅಭಿಷೇಕ ಮಾಡಿದ ಜಲವನ್ನು ತನ್ನ ಬೊಗಸೆಗೆ ಹಾಕಿಸಿಕೊಂಡು ಕುಡಿಯುತ್ತಿದ್ದ. ನಂತರ, ಶೂದ್ರರು ದಯೆಯಿಂದ ನೀಡಿದ ಸ್ವಾಮಿಯ ಪ್ರಸಾದವನ್ನು ತನ್ನ ಏಕತಾರಿಯ ಮೇಲೆ ಪಡೆದುಕೊಂಡು ತಿಂದು ಸೂರ್ಯ ಮೇಲೇರುವಷ್ಟರಲ್ಲಿ ತನ್ನ ಊರು ಸೇರುತ್ತಿದ್ದ.

ಒಂದು ದಿನ ಬೆಕ್ಕೊಂದು ಮಾಲದಾಸರಿಯ ಮನೆಯ ಪಕ್ಕದಲ್ಲಿದ್ದ ಕೋಳಿ ಗೂಡಿನೊಳಕ್ಕೆ ನುಗ್ಗಿತು. ಆ ಅರ್ಧರಾತ್ರಿ ಸಮಯದಲ್ಲಿ ಬೆಕ್ಕನ್ನು ನೋಡಿದ ಕೋಳಿಗಳು ಭಯದಿಂದ ಕೂಗಿದವು. ಕೋಳಿಗಳ ಕೂಗನ್ನು ಕೇಳಿಸಿಕೊಂಡ ಮಾಲದಾಸರಿ ಬೆಳಗಾಯಿತೆಂದು ಭಾವಿಸಿ ಸ್ವಾಮಿಯ ಸೇವೆಗಾಗಿ ಹೊರಟ. ದಾರಿಯಲ್ಲಿ ನಡೆಯುವಾಗ, ಮರೆವು ಮಾತಂಗಿಯ ಬಳ್ಳಿಯನ್ನು ತುಳಿದ ಕಾರಣದಿಂದ ದಾರಿ ಮರೆತು, ತಿರುಗಿ ತಿರುಗಿ ಆಲಯದ ದಾರಿ ತಿಳಿಯದೆ ಒಂದು ನಿರ್ಜನವಾದ ಅಡವಿಯನ್ನು ತಲುಪಿದ. ಅಲ್ಲಿ ಅವನು ಸುಮಾರು ಅರ್ಧ ಯೋಜನದಷ್ಟು ವಿಶಾಲವಾಗಿ ಕೊಂಬೆಗಳನ್ನು ಹರಡಿಕೊಂಡಿದ್ದ ಒಂದು ವಟ ವೃಕ್ಷವನ್ನು ನೋಡಿದ. ಆ ಆಲದಮರದ ಪಕ್ಕದಲ್ಲೇ ಇದ್ದ ಮಾರ್ಗದಲ್ಲಿ ನಡೆಯತೊಡಗಿದ. ಸ್ವಲ್ಪ ದೂರ ಹೋಗುವಷ್ಟರಲ್ಲಿ ಅವನಿಗೆ ನೊಣಗಳು ಮುತ್ತಿಕೊಂಡು ದುರ್ಗಂಧವನ್ನು ಸೂಸುತ್ತಿದ್ದ ಹಲವಾರು ಮಾನವ ಕಳೇಬರಗಳು ಕಾಣಿಸಿದವು. ಆ ದೃಶ್ಯ ಭೀಭತ್ಸವಾಗಿತ್ತು. ಆಶ್ಚರ್ಯಗೊಂಡ ಮಾಲದಾಸರಿ

ಸ್ವಲ್ಪ ಮುಂದೆ ಹೋಗುವಷ್ಟರಲ್ಲಿ, ಮನುಷ್ಯ ಕಳೇಬರವನ್ನೇ ಉಡದಾರವನ್ನಾಗಿಸಿಕೊಂಡು, ಗುಬುರಾಗಿ ಬೆಳೆದ ಗಡ್ಡದಿಂದ ಕೂಡಿ, ಭಯಂಕರವಾದ ಕೋರೆಹಲ್ಲುಗಳನ್ನು ಹೊರಗೆ ಚಾಚಿ ಕೆಂಪನೆಯ ದುಪ್ಪಟಿಯನ್ನು ಹೊದ್ದಿದ್ದ ಬ್ರಹ್ಮರಾಕ್ಷಸನೊಬ್ಬ ಎದುರಾದ. ಅವನು ಮಾಲದಾಸರಿನ್ನು ಕಂಡೊಡನೆಯೇ ಭಯಂಕರವಾಗಿ ನಕ್ಕು.

"ಆಹಾ!.. ಸರಿಯಾದ ಸಮಯಕ್ಕೆ ಸಿಕ್ಕಿದೆ. ಒಂದು ಹೆಜ್ಜೇನೂ ಮುಂದಿಡಬೇಡ.." ಎಂದು ಘರ್ಜಿಸುತ್ತಾ ಮಾಲದಾಸರಿಯ ಮೇಲೆ ಹಾರಿದ. ಮಾಲದಾಸರಿ ಸಮರದಲ್ಲಿ ನಿಪುಣನಾಗಿದ್ದುದರಿಂದ ಸ್ವಲ್ಪವೂ ವಿಚಲಿತನಾಗದೆ, ಸ್ವಲ್ಪ ಸಮಯ ಆ ಬ್ರಹ್ಮರಾಕ್ಷಸನ ಜೊತೆಯಲ್ಲಿ ತನ್ನಲ್ಲಿದ್ದ ಬಾಣಗಳಿಂದ ಹೋರಾಡಿದ. ಆದರೆ ಆ ಬ್ರಹ್ಮರಾಕ್ಷಸನ ಮುಂದೆ ಮಾಲದಾಸರಿಯ ಆಟವೇನೂ ಸಾಗಲಿಲ್ಲ. ಮಾಲದಾಸರಿಯನ್ನು ನಾನಾ ವಿಧವಾಗಿ ಹಿಂಸಿಸತೊಡಗಿದ. ಬ್ರಹ್ಮರಾಕ್ಷಸನ ಮುಂದೆ ತನ್ನ ಶಕ್ತಿಯಿಂದೇನೂ ಪ್ರಯೋಜನ ವಾಗುವುದಿಲ್ಲವೆಂಬುದನ್ನು ಗ್ರಹಿಸಿದ ಮಾಲದಾಸರಿ.

ಅಯ್ಯಾ ಬ್ರಹ್ಮರಾಕ್ಷಸ! ನೀನು ನನಗಿಂತಲೂ ಬಲಶಾಲಿ. ನಿನ್ನನ್ನು ದೇವತೆಗಳಿಂದಲೂ ಸಹ ಜಯಿಸಲು ಸಾಧ್ಯವಿಲ್ಲ. ಈಗ ನಾನು ನಿನ್ನ ಪಾಲಿಗೆ ಕೈಗೆ ಸಿಕ್ಕಿದ ಆಹಾರವಾಗಿದ್ದೇನೆ. ನನಗೆ ನನ್ನ ಶರೀರದ ಮೇಲೆ ಸ್ವಲ್ಪವೂ ಆಸೆಯಿಲ್ಲ. ಒಂದು ಪ್ರಾಣಿಯನ್ನು ಸಂತೋಷ ಪಡಿಸುವುದಕ್ಕಾಗಿ ಮರಣಿಸುವುದಕ್ಕಿಂತಲೂ ಬೇರೆ ಮುಕ್ತಿ ಮಾರ್ಗವಿನ್ನೇನು ಬೇಕು? ಇದಕ್ಕೆ ಶಿಬಿಚಕ್ರವರ್ತಿಯೇ ಸರಿಯಾದ ಉದಾಹರಣೆಯಲ್ಲವೆ? ಎಂದ.

ಮಾಲದಾಸರಿಯ ಮಾತುಗಳನ್ನು ಕೇಳಿದ ಬ್ರಹ್ಮ ರಾಕ್ಷಸ

"ಏಯ್! ವ್ಯರ್ಥವಾದ ಮಾತುಗಳು ನನಗೇಕೆ? ನೀನು ಮಹಾಬುದ್ಧಿವಂತ. ನಿನ್ನ ಶರೀರ ಬಹಳ ರುಚಿಯಾಗಿರುತ್ತದೆ. ನನಗೆ ಆಹಾರವಾಗಲು ಸಿದ್ಧನಾಗು" ಎಂದು ಘರ್ಜಿಸಿದ. ಅದಕ್ಕೆ ಮಾಲದಾಸರಿ.

"ಅಯ್ಯಾ ಬ್ರಹ್ಮರಾಕ್ಷಸ, ನೀನು ಸರ್ವಜ್ಞ, ನಾನು ನರಮಾನವ, ಹೀನಕುಲದಲ್ಲಿ ಜನಿಸಿದವನು. ವಿದ್ಯಾಹೀನ. ಶಾಸ್ತ್ರಗಳನ್ನು ಓದಿದವನಲ್ಲ. ನಿನ್ನೊಡನೆ ಮಾತಾಡಲು ಸಮರ್ಥನಲ್ಲ. ಏಳು ಮಾತುಗಳನ್ನು ಆಡಿದರೆ ಮಿತ್ರರಾಗುತ್ತಾರೆ. ನನಗೊಂದು ವ್ರತವಿದೆ. ಇಲ್ಲಿಗೆ ಹತ್ತಿರದಲ್ಲೇ ವೈಕುಂಠವಾಸನ ದೇವಸ್ಥಾನವಿದೆ ಅಲ್ಲಿಗೆ ಹೋಗಿ ಸ್ವಾಮಿಯ ಸೇವೆ ಮುಗಿಸಿ ಬಂದು ನಿನಗೆ ಆಹಾರವಾಗುತ್ತೇನೆ" ಎಂದ. ಅವನ ಮಾತುಗಳನ್ನು ಕೇಳಿ ಕಿರುನಗೆನಕ್ಕ ಬ್ರಹ್ಮರಾಕ್ಷಸ.

"ಅಯ್ಯಾ ದಾಸರಿ ಬಹಳ ಬುದ್ಧಿವಂತತನದಿಂದ ಮಾತನಾಡುತ್ತೀಯ. ಬಹಳ ಚೆನ್ನಾಗಿ ಮಾತನಾಡಿದೆ. ಆದರೆ ನಿನ್ನ ಬೋಧನೆಯನ್ನು ಕೇಳುವುದಕ್ಕೆ ನಾನು ಸಿದ್ಧನಾಗಿಲ್ಲ" ಎಂದ.

"ಅಯ್ಯಾ ಬ್ರಹ್ಮರಾಕ್ಷಸ ನನ್ನ ಮಾತನ್ನು ನಂಬು ನಾನು ಮಾತಿಗೆ ತಪ್ಪುವವನಲ್ಲ" ಎಂದು ಪರಿಪರಿಯಾಗಿ ಕೇಳಿಕೊಂಡ. ಆದರೆ ಬ್ರಹ್ಮರಾಕ್ಷಸ ಅವನನ್ನು ಹರಿಸೇವೆಗೆ ಬಿಡಲು ಒಪ್ಪಲಿಲ್ಲ. ಕೊನೆಗೆ ಮಾಲದಾಸರಿ, ಯಾರ ಕರುಣೆಯಿಂದ ಈ ಜಗತ್ತು

ಜನಿಸಿತೋ, ಯಾರ ಕೃಪೆಯಿಂದ ಈ ಜಗತ್ತು ನಡೆಯುತ್ತಿದೆಯೋ, ಯಾರು ಈ ಜಗನ್ನಾಟಕ ಸೂತ್ರಧಾರಿಯೋ, ಅಂತಹ ಮಹಾಮಹಿಮನಾದ ವಿಷ್ಣುಮೂರ್ತಿಯ ಮೇಲೆ ಆಣೆಯಿಟ್ಟು ಹಿಂದಿರುಗಿ ಬರುವುದಾಗಿ ಹೇಳಿದ. ಆಗ ಬ್ರಹ್ಮರಾಕ್ಷಸ, ಮಾಲದಾಸರಿಯನ್ನು ಹರಿಸೇವೆಯನ್ನು ಮುಗಿಸಿ ಹಿಂದಿರುಗಿ ಬರಲು ಸಮ್ಮತಿಸಿದ.

ಮಾಲದಾಸರಿ, ಪುಂಡರೀಕಾಕ್ಷನ ಪೂಜೆ ಮುಗಿಸಿ, ಅವನ ಸ್ತೋತ್ರ ಮಾಡಿ, ಕೊಟ್ಟ ಮಾತಿನಂತೆ ಹಿಂದಿರುಗಿ ಬಂದು ಬ್ರಹ್ಮ ರಾಕ್ಷಸನ ಮುಂದೆ ನಿಂತು.

"ಓ ನಿಶಾಚರಾ! ನಿನ್ನ ದಯೆಯಿಂದ ಸ್ವಾಮಿ ಸೇವೆಯನ್ನು ಮುಗಿಸಿ ಬಂದೆ ಇದೋ ನನ್ನ ಶರೀರ, ಇದು ನನ್ನ ಶಿರ, ಇದು ನನ್ನ ಉದರ, ಇವು ಕೈಕಾಲುಗಳು, ಇನ್ನು ನೀನು ಈ ಶರೀರವನ್ನು ತೃಪ್ತಿಯಿಂದ ತಿಂದು ಮುಗಿಸು" ಎಂದು ವಿನಯವಾಗಿ ನುಡಿದ.

ಮಾಲದಾಸರಿಯ ಸತ್ಯಸಂಧತೆಯನ್ನು ಕಂಡು, ಬ್ರಹ್ಮರಾಕ್ಷಸನ ಹೃದಯ ಪುಲಕಗೊಂಡಿತು. ಕಂಗಳಲ್ಲಿ ಕಂಬನಿದುಂಬಿದವು, ಆ ಮಟಮಟ ಮಧ್ಯಾಹ್ನದಲ್ಲಿ ತನ್ನ ಮುಂದೆ, ಸಾವಿಗೆ ಅಂಜದೆ ಪ್ರಶಾಂತವದನನಾಗಿ ನಿಂತಿದ್ದ ಮಾಲದಾಸರಿಯನ್ನು ನೋಡಿ.

"ಮಹಾನುಭಾವ! ದೇವ ದಾನವ ಮಾನವ ಲೋಕಗಳಲ್ಲಿ ನಿನ್ನಂಥಹವನಿಲ್ಲ. ನಿನ್ನ ಸತ್ಯವಾಕ್ಯ ಪರಿಪಾಲನೆ ಅಸಾಧಾರಣವಾದುದು. ಅನುಪಮವಾದುದು. ನಿನ್ನ ಧೈರ್ಯ ಸ್ಥೈರ್ಯಗಳು, ನಿನ್ನ ವಿಷ್ಣುಭಕ್ತಿ ಅಸದೃಶ್ಯವಾದುದು" ಎಂದ. ಅದನ್ನು ಕೇಳಿದ ಮಾಲದಾಸರಿ ಆ ರಾಕ್ಷಸನನ್ನೊಮ್ಮೆ ಪ್ರೇಮದಿಂದ ಆಲಂಗಿಸಿಕೊಂಡು.

"ಓ ರಜನೀಚರೇಂದ್ರ! ನಿನ್ನ ಕೃಪಾಕಟಾಕ್ಷದಿಂದಾಗಿ, ವ್ರತಪಾಲನೆಯನ್ನು ಮುಗಿಸಿ ಧನ್ಯನಾದೆ. ನೀನೀಗ ಮಹಾ ಕ್ಷುದ್ಬಾಧೆಯಿಂದ ತೊಳಲಾಡುತ್ತಿದ್ದೀಯ. ನಿನಗೆ ನಿಜವಾಗಲೂ ನನ್ನ ಮೇಲೆ ಪ್ರೀತಿಯಿದ್ದಲ್ಲಿ ನನ್ನ ಶರೀರವನ್ನು ಆಹಾರವನ್ನಾಗಿ ತಿಂದು ಮುಗಿಸು" ಎಂದ. ಅದಕ್ಕೆ ಬ್ರಹ್ಮರಾಕ್ಷಸ–

"ಎಂತಹ ಮಾತನಾಡಿದೆ ಮಹಾನುಭಾವ! ಇದುವರೆಗೂ ಅದೆಷ್ಟೋ ಜನರನ್ನು ತಿಂದುಮುಗಿಸಿದೆ. ನನ್ನ ಹಸಿವೆ ತೀರಿತೆ? ಎಂದಾದರೊಂದುದಿನ ನಿನ್ನಂತಹ ಮಹಾನುಭಾವ ಬರಬಹುದೇನೋ, ಬಂದು ನನಗೆ ಮುಕ್ತಿ ದೊರಕಿಸಬಹುದೇನೋ ಎಂದು ಕಾಯುತ್ತಿದ್ದೆ, ನೀನಿಂದು ಬಂದೆ. ನಿನ್ನಂತಹ ಭಕ್ತಾಗ್ರೇಸನನ್ನು ರಕ್ಷಿಸದೆ ಹೋದರೆ ನನಗೆ ಮುಕ್ತಿ ಮಾರ್ಗವೆಲ್ಲಿಯದು?" ಎಂದು ಪಶ್ಚಾತ್ತಾಪ ತುಂಬಿದ ಧ್ವನಿಯಲ್ಲಿ ನುಡಿದ, ಅದಕ್ಕೆ ಮಾಲದಾಸರಿ–

"ಮಹಾನುಭಾವ, ನಿನ್ನ ಮಾತುಗಳನ್ನು ಕೇಳಿದರೆ ನೀನು ಸಂಸ್ಕಾರವಂತನಂತೆ ಕಾಣುತ್ತಿರುವೆ. ನೀನ್ಯಾರು ಮಾಹಾನುಭಾವ" ಎಂದು ಪ್ರಶ್ನಿಸಿದ. ಆದಕ್ಕೆ ಆ ಬ್ರಹ್ಮರಾಕ್ಷಸ–

"ನನ್ನ ಹೆಸರು ಕುಂಭಜಾನ, ದುಷ್ಟತನದಿಂದ, ದಾರಿಹೋಕರನ್ನು ಕೊಂದು ತಿನ್ನುತ್ತಿದ್ದೆ. ಪೂರ್ವದಲ್ಲಿ ನನ್ನ ಹೆಸರು ಸೋಮಶರ್ಮ, ಒಂದು ದುಷ್ಕೃತ್ಯದಿಂದಾಗಿ

ನನಗೀ ಬ್ರಹ್ಮರಾಕ್ಷಸನ ರೂಪ ಬಂದಿತು. ನೀನು ಸ್ವಾಮಿಗೆ ಹಾಡಿದ, ಹಾಡಿನ ಫಲವನ್ನು ನನಗೆ ನೀಡಿದರೆ. ನನ್ನೀಭೀಭತ್ಸರೂಪ ನಶಿಸಿಹೋಗುತ್ತದೆ. ನಿನಗೆ ಆತ್ಮರಕ್ಷಣೆಯನ್ನು ಮಾಡಿದ ಪುಣ್ಯ ದಕ್ಕುತ್ತದೆ" ಎಂದು ಪ್ರಾರ್ಥಿಸಿದ.

ಆತನ ಮಾತಿಗೆ ಕಿರುನಗೆ ನಕ್ಕ ಮಾಲದಾಸರಿ–

"ಹರಿ ಹರಿ ಎಲ್ಲಾದರೂ ಇಂತಹ ಕೆಲಸಮಾಡುವುದುಂಟೇ? ಕೇವಲ ನನ್ನ ಶರೀರವನ್ನು ಕಾಪಾಡಿಕೊಳ್ಳುವುದಕ್ಕಾಗಿ, ಸ್ವಾಮಿಗಾಗಿ ಹಾಡಿದ ಫಲವನ್ನು ಕೊಡಬೇಕೆ? ಈ ಶರೀರಕ್ಕಾಗಿ ಗೀತೆಯ ಫಲವನ್ನು ಕೊಡುವುದೆಂದರೆ, ಕರ್ಪೂರವನ್ನು ಕೊಟ್ಟು, ಉಪ್ಪನ್ನು ಪಡೆದಂತಾಗುತ್ತದೆ ಅಲ್ಲವೆ? ಎಂದು ಉತ್ತರಿಸಿದ. ಅದನ್ನು ಕೇಳಿದ ಬ್ರಹ್ಮರಾಕ್ಷಸ.–

"ಹೋಗಲಿ ಸಂಗೀತದ ಫಲದಲ್ಲಿ ಅರ್ಧಭಾಗವನ್ನು ನನಗೆ ನೀಡಿ ನನ್ನನ್ನು ರಕ್ಷಿಸು ಮಹಾಸಮುದ್ರದಿಂದ ಒಂದು ಗುಟುಕು ನೀರನ್ನು ನುಂಗಿದರೆ ಏನುನಷ್ಟ?" ಎಂದು ಪ್ರಶ್ನಿಸಿದ. ಅದಕ್ಕೆ ಮಾಲದಾಸರಿ–

"ಮೊದಲು ನೀನು ನನ್ನ ಶರೀರವನ್ನು ಕೇಳಿದೆ. ಆದರೆ ಈಗ ಮಾತು ಬದಲಿಸುತ್ತಿರುವುದು ಯಾವ ನ್ಯಾಯ? ನಾನು ನಿನಗೆ ಕೀರ್ತನೆಯ ಫಲವನ್ನು ನೀಡುತ್ತೇನೆಂದು ಹೇಳಿರಲಿಲ್ಲ. ನಿಶಾಚರ ಮಾತು ಬದಲಿಸದೆ, ನನ್ನ ಶರೀರವನ್ನು ಭುಜಿಸಿ ತೃಪ್ತಿಪಡು" ಎಂದು ಪ್ರಾರ್ಥಿಸಿದ.

ಆದರೆ ಆ ಬ್ರಹ್ಮರಾಕ್ಷಸ, ಪಟ್ಟು ಬಿಡದೆ ಮಾಲದಾಸರಿಯ ಕಾಲುಗಳ ಮೇಲೆ ಬಿದ್ದು, ದಯಾಹೃದಯಿಗಳಾದ ವಿಷ್ಣು ಭಕ್ತರನ್ನು ಪ್ರಶಂಸಿಸಿ, ಅವರಂತೆಯೇ ನೀವೂ ಸಹ ದಯಾವಂತರಾಗಿ, ಹಾಡಿನ ಅರ್ಧ ಭಾಗದ ಪುಣ್ಯಫಲವನ್ನು ನನಗಿತ್ತು ನನ್ನನ್ನು ಕೃತಾರ್ಥನನ್ನಾಗಿ ಮಾಡಿ. ನನ್ನ ಈ ವಿರೂಪವನ್ನು ತೊಲಗಿಸಿ" ಎಂದು ಪ್ರಾರ್ಥಿಸಿದ. ಮಾಲದಾಸರಿ ಅವನ ಕೋರಿಕೆಯನ್ನು ತಿರಸ್ಕರಿಸಿದ. ಆದರೆ ಮಾಲದಾಸರಿಯನ್ನು ಪರಿಪರಿಯಾಗಿ ಬೇಡಿಕೊಂಡು, ಕೊನೆಗೆ, ಈ ದಿನ ಬೆಳಿಗ್ಗೆ ಹಾಡಿದ ಕೊನೆಯ ಗೀತೆಯ ಪುಣ್ಯವನ್ನಾದರೂ ನೀಡಿ ನನ್ನ ಮೇಲೆ ಕರುಣೆ ತೋರಿಸು ಎಂದು ಭಿನ್ನವಿಸಿಕೊಂಡ.

ಕೊನೆಗೆ ಬ್ರಹ್ಮರಾಕ್ಷಸನ ಮೇಲೆ ದಯೆತೋರಿದ ಮಾಲದಾಸರಿ–

"ಆಯಿತು ಮೇಲೇಳು" ಎಂದು ಅವನನ್ನು ತನ್ನ ಪಾದಗಳ ಮೇಲಿಂದ ಎಬ್ಬಿಸಿ, ಮೇಲಕ್ಕೆತ್ತಿ, ಅವನ ಪೂರ್ವವೃತ್ತಾಂತವೇನೆಂದು ಕೇಳಿದ. ಬ್ರಹ್ಮರಾಕ್ಷಸ ತನ್ನ ಕಥೆಯನ್ನು ಹೇಳಿದ. ನಂತರ ಮಾಲದಾಸರಿಯನ್ನು–

"ನಿನ್ನ ಮಂಗಳ ಕೈಶಿಕಿ ಗಾನದ ಫಲವನ್ನು ನೀಡಿ ನನ್ನನ್ನು ರಕ್ಷಿಸು" ಎಂದು ಪ್ರಾರ್ಥಿಸಿದ.

"ಅದರ ಫಲವೇನೆಂಬುದು ನನಗೇ ತಿಳಿದಿಲ್ಲ. ಅದನ್ನು ನಿನಗೆ ನಾನು ಹೇಗೆ ನೀಡಬಲ್ಲೆ? ನಿನ್ನನ್ನು ಭಗವಂತನೇ ರಕ್ಷಿಸಬೇಕು" ಎನ್ನುತ್ತಿದ್ದಂತೆಯೇ, ಆ ಬ್ರಹ್ಮರಾಕ್ಷಸನ ಭಯಂಕರ ಮುಖದ, ವಿಕಾರದೇಹಕ್ಕೆ ಬದಲಾಗಿ, ಊರ್ಧ್ವತ್ರಿಪುಂಡ್ರಧಾರಿಯಾಗಿ,

ಹಿಮಧವಳಯಜ್ಞೋಪವೀತಗಳೊಡನೆ, ಕಂಠದಲ್ಲಿ ತುಳಸಿ ಮಾಲೆ ಧರಿಸಿ, ಜಲತುಂಬಿದ ಕಮಂಡಲವನ್ನು ಹಿಡಿದ, ಬ್ರಹ್ಮವರ್ಚಸ್ಸಿನಿಂದ ಶೋಭಿಸುತ್ತಿದ್ದ "ಸೋಮಶರ್ಮ" ನೆಂಬ ಭಾಗವತೋತ್ತಮ ಮಾಲದಾಸರಿಯ ಮುಂದೆ ಪ್ರತ್ಯಕ್ಷನಾದ. ನಂತರ ಸೋಮ ಶರ್ಮ, ಮಾಲದಾಸರಿಯನ್ನು ಕುರಿತು–

ಜಯಜಯ ಗಾಯಕ ಸಾರ್ವಭೌಮ, ಜಯಜಯ ದೇಶಿಕ ಚರಣ ಶರಣ, ಜಯಜಯ ಸಮಚಿತ್ತ ಎಂದು ಮಾಲದಾಸರಿಯನ್ನು ಸ್ತುತಿಸಿ, ಪೂಜಿಸಿ, ಪುನರ್ಜನ್ಮ ಭಯದಿಂದ, ಶಾರೀರಕ ಸುಖಗಳಿಂದ ವಿರಕ್ತನಾಗಿ, ಬದರೀವನಾದಿ ಪುಣ್ಯ ಕ್ಷೇತ್ರಗಳ ಯಾತ್ರೆಗಳನ್ನು ಮಾಡಿ ಮೋಕ್ಷವನ್ನು ಪಡೆದ. ಶ್ರೀ ಜಿ ಎಸ್ ಶಾಮಶಾಸ್ತ್ರಿ ಅವರ ಈ ಕಥೆಯು ತೆಲುಗು ಮೂಲದ ನೀತಿಕಥಾಮೂಲದ ಭಾಗ ೧ರ ಮನವಾರಸತ್ವಂ ಸಂಕಲದಿಂದ ಕನ್ನಡಾನುವಾದವನ್ನು ಕಾಕೋಳು ರಾಮಯ್ಯ ಅವರು ಮಾಡಿರುತ್ತಾರೆ.

**ಗಾದೆ, ಒಗಟು–ಒಡಪುಗಳು**

ಗಾದೆ ಮತ್ತು ಒಗಟುಗಳು ಪ್ರಪಂಚದ ಎಲ್ಲಾ ಭಾಗಗಳಲ್ಲಿ ದೊರೆಯುವ ಹಾಗೂ ಪ್ರಚಲಿತದಲ್ಲಿರುವ ಒಂದು ಜನಪ್ರಿಯ ಸಾಹಿತ್ಯ ಪ್ರಕಾರ. ಇವು ಎಲ್ಲಾ ಸಮುದಾಯ ಬುಡಕಟ್ಟುಗಲ್ಲಿಯೂ ಪ್ರಚಲಿತದಲ್ಲಿವೆ. "ಜನಜೀವನ ರೂಪಿಸುವ, ನಿರೂಪಿಸುವ ಮಹತ್ಸಾಧನೆಗಳು ಅದರ ಭಾವನೆಗಳ ವಿಧಾನಗಳ ಸಂಸ್ಕೃತಿ, ನಾಗರೀಕತೆಯ ಪ್ರತಿಫಲ ಗಾದೆಗಳು". ಎಂದು ರಾ ಗೌ 'ಜನಪದ ಸಾಹಿತ್ಯರೂಪಕಗಳು' ಎಂಬ ಕೃತಿಯಲ್ಲಿ ವಿವರಿಸಿದ್ದಾರೆ. ಒಂದು ವಸ್ತುವನ್ನು ಮತ್ತೊಂದು ವಸ್ತುವಿನ ವ್ಯಾಜ್ಯದಿಂದ ಚಮತ್ಕಾರ ಯುತವಾಗಿ ವರ್ಣಿಸುವುದು, ಆ ಅವ್ಯಕ್ತ ವಸ್ತುವನ್ನು ಕಂಡು ಹಿಡಿಯುವಂತೆ ಹೇಳು ವುದು ಒಗಟು (ಸಿಪಿಕೆ). ಒಗಟಿನ ಉದ್ದೇಶವು ಮೂಲತಃ ಶೈಕ್ಷಣಿಕವಾದುದು ಎಂದು ಹೇಳಲಾಗಿದೆ. ಅದು ಬುದ್ಧಿಯನ್ನು ಹರಿತಗೊಳಿಸುತ್ತದೆ. ಸಂಕ್ಷಿಪ್ತತೆ, ಹಾಸ್ಯಗುಣ, ಮತ್ತು ಪ್ರಾಸಗುಣಗಳು ಎಲ್ಲಾ ಒಗಟುಗಳ ಅನಿವಾರ್ಯ ಲಕ್ಷಣವಾಗಿವೆ.

ಜನಪದ ವೃತ್ತಿಗಾಯಕರಾದ ದೊಂಬಿದಾಸರಲ್ಲಿಯೂ ಈ ಗಾದೆ ಮತ್ತು ಒಗಟುಗಳು ಹಾಸುಹೊಕ್ಕಾಗಿ ಇವರು ಹೇಳುವ ಕಥೆ, ಹಾಡು, ಹರೀಕಥೆ ಪುರಾಣಗಳಲ್ಲಿ ಲಾವಣಿ ಗಳಲ್ಲಿಯೂ ಇವು ಕಾಣಿಸಿಕೊಳ್ಳುತ್ತವೆ. ಕೆಲವು ಒಗಟುಗಳು ಇಂತಿವೆ.

೧. ಕಾಡಿನಲ್ಲಿ ಹುಟ್ಟುತ್ತದೆ. ಕಾಡಿನಲ್ಲಿ ಬೆಳೆಯುತ್ತದೆ. ಹೆಂಗಸರ ಮುಂದು ಕುಣಿಯೋದು– ನಾನೂ ಯಾರು (ಒನಕೆ).

೨. ನೀನು ಮಲಗಿದರೂ ನಾನು ಮಲಗುವುದಿಲ್ಲ. ನೀನು ಕೂತರೂ ನಾನು ಕೂರುವುದಿಲ್ಲ. ನೀನು ನಿಂತರೂ ನಾನೂ ನಿಲ್ಲುವುದಿಲ್ಲ–ನಾನು ಯಾರು– –– – ಗಡಿಯಾರ.

೩. ಮೂರಕ್ಷರದ ಮರ ಎಂಬುದು ಯಾವುದು – ಕೈಮರ.

೪. ಎಲೆಯಿಲ್ಲದ ಮರದಡಿಯಲ್ಲಿ ಮೊಲೆಯಿಲ್ಲದವಳು ನಿಂತಿದ್ದಳು. ಗಂಡು ಅಲ್ಲದವನು ಹೋಗಿ ಮುಟ್ಟಿದ– ಕಣ್ಣು ಇಲ್ಲದ ಮಗು ಹುಟ್ಟಿತು. ನಾನು ಯಾರು – ಕೋಳಿ, ಹುಂಜ, ಮೊಟ್ಟೆ.

೫. ಮೂಗಿಗೆ ವಾಸನೆ, ಬಾಯಿಗೆ ಅಮೃತ–ನಾನು ಯಾರು– ಕರಿಮೀನಿನ ಸಾರು.

೬. ಅಂಗಾಲು ಮೇಲೆ ಮಾಡಿ ನೀರು ಕುಡಿಯುವ ದಾತ, ಕಳ್ಳು ಇಲ್ಲದ ದಾತನ ಕೇಳಿದ ನಿಮ್ಮ ಊರಿನಲ್ಲಿ ಹಬ್ಬ ಯಾವತ್ತು– ಹೋತ, ಮೇಕೆ.

೭. ಹಗಲೆಲ್ಲ ಹಾಳು ತೋಟ, ಇರುಳೆಲ್ಲಾ ನಿನ್ನ ತೋಟ, ಪೂಜಾರಿ ದೇವರಿಗೆ ಮುಡಿಸೋದಲ್ಲ – ನಕ್ಷತ್ರ.

**ಒಡಪುಗಳು**

ದಾಸರು ಪ್ರಮುಖವಾಗಿ ಹಾಡುವ ಗಂಗೆಗೌರಿ ಎಂಬ ಲಾವಣಿ ಭಾಗದಲ್ಲಿ 'ಗಂಗೆ ಗೌರಿ ಜಗಳ' ಅಥವಾ ಗಂಗೆ–ಗೌರಿ ವಾದದ ಪ್ರಸಂಗಲ್ಲಿ ಒಗಟು ಒಡಪುಗಳನ್ನು ಪ್ರಶ್ನೆ ರೂಪದಲ್ಲಿ ಹೇಳುವ, ಅವುಗಳನ್ನು ಬಿಡಿಸಿ ಅರ್ಥ ಹೇಳುವ ಸನ್ನಿವೇಶವಂತೂ ತುಂಬಾ ರಸವತ್ತಾಗಿದ್ದು ಜ್ಞಾನದ ಬಂಡಾರವೇ ಅಡಗಿರುವಂತೆ ಭಾಸವಾಗುತ್ತದೆ. ಅದರ ಸನ್ನಿವೇಶದ ತುಣುಕುಗಳನ್ನು ಕುತೂಹಲ ತಣಿಸಲಿಕ್ಕಾಗಿ ಇಲ್ಲಿ ನೀಡಿದೆ.

ಶಿವನ ಇಬ್ಬರು ಹೆಂಡತಿಯರಾದ ಗೌರಿ ಮತ್ತು ಗಂಗೆಯರ ಮಧ್ಯ ನಡೆಯುವ ಒಡಪಿನ ಮಾತು ಹೀಗೆ ಪ್ರಾರಂಭವಾಗುತ್ತದೆ.

ಗೌರಿ : ಅಟ್ಟಿ ಹರಳಿ ತುಪ್ಪ ಸೋರೇದು ಕಾಯಿ ಮೇಲೆ ಮುಳ್ಳುಂಟು ಕಾಣೆ, ನನ್ನ ಸವತಿ ಮೇಲೆ ಮುಳ್ಳುಂಟು ಹಲಸಿನ ಕಾಯಲ್ಲ ನಾರಿ ಕಂಡಿದ್ದರೆ ಒಡಿದೇಳು.

ಗಂಗೆ : ಬಲ್ಲೇನು ಬಾವಾಕಿ ಎಲ್ಲನು ಹೇಳೇನು ಸಣ್ಣವಳಲ್ಲ ಕಾಣೆ ನನಸವತಿ ಚಿಕ್ಕೋಳು ಅಲ್ಲ ಕಾಣೆ. ಚಿಕ್ಕೋಳು ತಾನಾದ್ರೆ ತಿಳಿದುಕೊಳ್ಳೆ ಮತ್ತೆ ಕರಳು ತಾನಲ್ಲವೇನೆ.

ಗೌರಿ : ಅಂಗಂತ ಅರಬೋದು ಹೊಲದಂಚುಮೇಯೋದು ಗುಂಬದಲ್ಲಿ ಹಾಲ ಕರೆಯೋದು ನಾರಿ ಕಂಡಿದ್ದರೆ ಒಡಿದೇಳೆ.

ಗಂಗೆ : ಬಲ್ಲೇನು ಬಾವಾಕಿ ಎಲ್ಲಾನು ಹೇಳೇನು ಸಣ್ಣವಳಲ್ಲ ಕಾಣೆ ಎಲ ಗೌರಿ ಚಿಕ್ಕವಳಲ್ಲ ಕಾಣೆ ಚಿಕ್ಕವಳು ಆದರೆ ತಿಳಿದುಕೊಳ್ಳೆ ಮತ್ತೆ ಕಬ್ಬಿನ ಹಾಲಲ್ಲವೆ.

ಗೌರಿ : ಅಂಗೈಲಿ ಇರುವುದು ಶೃಂಗಾರವಂಬೋದು ತಿಂಗಳು ಬೆಳಕು ಕಾಣೆ ನನಸವತಿ ತಿಂಗಳ ಬೆಳಕಮ್ಮ ತಾವುಂಟು ನಾರಿಕಂಡಿದ್ದರೆ ಒಡಿದೇಳು.

ಗಂಗೆ : ಬಲ್ಲೇನು ಬಾವಾಕಿ ಎಲ್ಲಾನು ಹೇಳೇನು ಚಿಕ್ಕೋಳು ಅಲ್ಲ ಕಾಣೆ ಸವತಿಗೌರಿ ಸಣ್ಣವಳಲ್ಲ ಕಾಣೆ, ಚಿಕ್ಕವಳಾದರೆ ತಿಳಿದುಕೊಳ್ಳೆ ಮತ್ತೆ ಕನ್ನಡಿ ತಾನಲ್ಲವೆ.

ಗೌರಿ : ಓಣೀಲಿ ಉಟ್ಟುವುದು ಓಣಿಯಲ್ಲಿ ಬೆಳೆಯುವುದು ಹೋಗುವವರ ಸೆರಗ ಹಿಡಿಯುವುದು. ಈ ಕತೆ ನಾರಿ ಕಂಡಿದ್ದರೆ ಒಡಿದೇಳು.

ಗಂಗೆ : ಬಲ್ಲೇನು ಬಾವಾಕೆ ಎಲ್ಲನು ಹೇಳೇನು ಸಣ್ಣವಳಲ್ಲ ಕಾಣೆ ನನ್ನ ಸವತಿ. ಚಿಕ್ಕವಳಲ್ಲ ಕಾಣೆ. ಚಿಕ್ಕವಳಾದರೆ ತಿಳಿದು ಕೊಳ್ಳೆ ಮತ್ತೆ ಉತ್ತರಾಣಿ ಕಡ್ಡಿಯಲ್ಲವೆ.

ಹೀಗೆ ಬುದ್ದಿಗೆ ಕಸರತ್ತು ನೀಡುವ ಹಲವು ಒಡಪುಗಳನ್ನು ಇವರ ಸಾಹಿತ್ಯ ಮತ್ತು ನಿಜ ಜೀವನದಲ್ಲಿ ಕಾಣಬಹುದು.

ಭಾಷೆ

ಭಾಷೆ ಒಂದು ಸಾಮಾಜಿಕ ಕ್ರಿಯೆ. ಮಾನವ ತನ್ನ ಉಪಯೋಗಕ್ಕಾಗಿ ರೂಪಿಸಿ ಕೊಂಡ ಭಾಷೆಯನ್ನು ತನ್ನ ಸಮಾಜದ ಏಳಿಗೆಗಾಗಿ ಸಂಸ್ಕೃತಿಯ ವಿಕಾಸಕ್ಕಾಗಿ ಉಪಯೋಗಿಸುತ್ತಾನೆ. ಸಮಾಜದ ಪ್ರತಿಯೊಬ್ಬ ವ್ಯಕ್ತಿಯು ತನ್ನ ಅನುಭವ ಆಲೋಚನೆ ಗಳನ್ನು ಮತ್ತು ಅನಿಸಿಕೆಗಳನ್ನು ಬೇರೊಬ್ಬನಿಗೆ ತಿಳಿಸಲು ಭಾಷೆಯನ್ನು ಉಪಯೋಗಿ ಸುತ್ತಾನೆ. ತನ್ನ ಅಂತಃಕರಣದ ಭಾವನೆಗಳನ್ನು ಇನ್ನೊಬ್ಬನಿಗೆ ಹೇಳುವ ಅಗತ್ಯವೇ ಭಾಷೆಯ ಉಗಮಕ್ಕೆ ಕಾರಣವಾಯಿತು. ಎಫ್ ಡಿ ಸೂಸನ್ ಎಂಬ ವಿಜ್ಞಾನಿ ಇದನ್ನು ಕುರಿತಂತೆ "ಮಾನವನು ತನ್ನ ಅನಿಸಿಕೆಗಳನ್ನು ಅಭಿವ್ಯಕ್ತಿ ಪಡಿಸುವುದಕ್ಕಾಗಿ ರೂಢಿಸಿಕೊಂಡಿರುವ ಸಂಕೇತಗಳ ವ್ಯವಸ್ಥೆಯೇ ಭಾಷೆ". ಎಂದಿದ್ದಾನೆ.

ಭಾಷೆ ಎಂಬುದು ಒಂದು ಸಮಾಜದ ಒಟ್ಟು ಆಸ್ತಿಯೇ ಹೊರತು ಒಂದು ನಿರ್ದಿಷ್ಟ ಕುಟುಂಬದ ಆಸ್ತಿಯಂತೂ ಖಂಡಿತ ಅಲ್ಲ. ಪ್ರತಿಯೊಂದು ಸಮುದಾಯಕ್ಕೆ ತನ್ನದೇ ಆದ ಭಾಷೆ ಇರುತ್ತದೆ. ಹಾಗೇ ದೊಂಬಿದಾಸರಿಗೂ ಅವರದೇ ಆದ ಭಾಷೆ ಯೊಂದಿದೆ. ಅವರ ಮಾತೃಭಾಷೆ ತೆಲುಗು.

ಕರ್ನಾಟಕದಲ್ಲಿ ಬಂದು ನೆಲೆನಿಂತಮೇಲೆ ಕನ್ನಡ ಭಾಷೆಯನ್ನು ಕಲಿತು ಜನಪದ ಕಾವ್ಯಗಳನ್ನು ಹಾಡಿ ಸಾಂಸ್ಕೃತಿಕ ವೃತ್ತಿ ಗಾಯಕರಾಗಿ ಜನಪ್ರಿಯರಾಗಿದ್ದಾರೆ. ಇವರಾಡುವ ಮಾತೃಭಾಷೆ ತೆಲುಗಿನ ಜೊತೆಗೆ ಕನ್ನಡದ ಉಪಭಾಷೆಯಾಗಿ ತೆಲುಗು-ಕನ್ನಡ ಭಾಷಿಕರಿಗೆ ಅರ್ಥವಾಗದ ಮರುಗು ಭಾಷೆ(Code Language)ಯಾಗಿ ಮಾರ್ಪಾಡಾಗಿದೆ.

ಇದು ಹಳೆಯ ತಲೆಮಾರಿನವರ ನಡುವೆ ಈಗಲೂ ಚಾಲ್ತಿಯಲ್ಲಿದ್ದು ಲಿಪಿ ಇಲ್ಲದ ಭಾಷೆಯಾಗಿದೆ. ಆಧುನೀಕತೆಯ ದುಷ್ಪರಿಣಾಮ ಮತ್ತು ಯುವ ಜನಾಂಗ ಈ ಭಾಷಾ ಪ್ರಯೋಗದಿಂದ ದೂರ ಉಳಿದ ಕಾರಣ ಪ್ರೋತ್ಸಾಹವಿಲ್ಲದೆ ಇಂದು ದೊಂಬಿದಾಸರ ಮರಗು ಭಾಷೆ ಕ್ಷೀಣಿಸುತ್ತಾ ಬಂದಿದೆ. ಈ ಭಾಷೆ ಸಮುದಾಯದ ಸಾಂಸ್ಕೃತಿಕ ಕಾರ್ಯ ಚಟುವಟಿಕೆಗಳಲ್ಲಿ ಮತ್ತು ತಮ್ಮ ಅಲೆಮಾರಿ ಬದುಕಿನಲ್ಲಿ ಪ್ರಮುಖ ಪಾತ್ರ ವಹಿಸಿತ್ತು. ತಮ್ಮ ರಕ್ಷಣೆಗಾಗಿ ಅನ್ಯಭಾಷಿಕರಿಗೆ ಅರ್ಥವಾಗದಿರಲೆಂದು ತನ್ನೊಳಗೆ ರಹಸ್ಯವಾಗಿ ಸಂಭಾಷಿಸಿಕೊಳ್ಳಲು ರೂಪಿತಗೊಂಡಿತ್ತು.

ಈ ಮರುಗು ಭಾಷೆಯನ್ನು ಕನ್ನಡ, ತೆಲಗು, ಇತ್ಯಾದಿ ಭಾಷೆಗಳ ನಡುವೆ ಬಿಡಿ ಬಿಡಿ ಪದಗಳ ರೂಪದಲ್ಲಿ ಇಲ್ಲವೆ ಪೂರ್ಣ ವಾಕ್ಯಗಳ ರೂಪದಲ್ಲಿ ಬಳಸುತ್ತಿದ್ದರು. ಒಟ್ಟಿನಲ್ಲಿ ಈ ಭಾಷೆ ಬೇರೆಯವರಿಗೆ ಅರ್ಥವಾಗದ ರೀತಿಯಲ್ಲಿ ಪ್ರಯೋಗಿಸಲಾಗುತ್ತಿತ್ತು. ಈ ಭಾಷೆಯ ಕೆಲವು ಪದಪುಂಜಗಳನ್ನು ಉದಾಹರಣೆಗಾಗಿ ಇಲ್ಲಿ ದಾಖಲಿಸಿದೆ.

| ಮರಗು ಭಾಷೆ | ಕನ್ನಡ |
|---|---|
| ನರಜೀವನಮು | ಅನ್ನ |
| ಕುಮಾಯಿ, ಸ್ಯಾವಡಿ | ಊಟ |

| | |
|---|---|
| ಪಚ್ಚಾಮು | ಸಾಂಬಾರು |
| ಜಿಗಟಾಲ್ಲು, ಮಿರುಪುಳ್ಳು | ಅಕ್ಕಿ, ರಾಗಿ (ಧಾನ್ಯಗಳು) |
| ಮ್ಯಾಸಾಮು | ಮಾಂಸ |
| ಕಾಜಾಲು | ಮೀನು |
| ಕಂಚಗಾಲು, ಉಲ್ಸಾಮು | ಹಣ |
| ನಲ್ಲನೀಳ್ಳು | ಸಾರಾಯಿ |
| ರೀಕ್ಷಂ | ಹೆಂಡ |
| ಮೀಟಾಮು | ಉಪ್ಪು |
| ಯರಮಂಡ | ಈರುಳ್ಳಿ |
| ಸೇಗ್ತಾ ಉಂಡಾಡು | ಹೋಗುತ್ತಿದ್ದಾನೆ. |
| ಎಲ್ಕೋಡು, ಕಾಪೋಡು | ಗೌಡ |
| ಸುಲ್ಲ | ಹುಡುಗಿ |
| ಸಿರ್‌ಪ್‌ಗಾಡು, ವಂಕಾಡು | ಗಂಡಸು |
| ಸಿರ್‌ಫಾ, ಮಂಕಿ,– | |
| ಮಸಕೋಟಿ, ಸ್ಯಾರಾಮು | ಹೆಂಗಸು |
| ನಾಗನಸುಲ್ಲ | ಕೆಟ್ಟವಳು |
| ಸುಂಟಿಕಾಯಿ | ನಪುಂಸಕ |
| ಸಿಟ್ಲಿಂಗಾಡು, ಶಾಹ್‌ರಾ ಸಗಾಡು | ಅಳಿಲು |
| ಮುಕ್ಕರಾಸಗಾಡು | ಹಂದಿ |
| ತಾಬೇಲು, ಮುರುಮುಗಾಡು | ಆಮೆ, ಮುರುಕಾಟಿ |
| ವಲಂಗಾಡು | ಉಡ |
| ಕೀಗ್ರಾಡು | ಕೀರ |
| ಸಪ್ಪಡದಿ, ಕಾಸಂಬಡ್ಡ | ಬೆಕ್ಕು |
| ಬಡಸ್ಯಾ(ಸೆ)ಮ | ದನದಮಾಂಸ |
| ಕೊಕ್ಕಡಾಯಿ | ಕೋಳಿ |
| ಕರಕೋಟ್ಲು | ಒಣಮಾಂಸ |
| ಕೈಕ | ನಾಯಿ |
| ಪಟುಕಲೋಡು | ವಿಶ್ವಕರ್ಮ |
| ಮಿಸ್ಲುಮ್‌ಗಾಡು | ಮುಸ್ಲಿಂ |
| ಜಿಡ್ಲಾಡು | ಕುರುಬ |
| ತೊರ್ರೋಡು | ನಾಯಕ |

| | |
|---|---|
| ತೆಣೆಂಗಾಳು | ಬ್ರಾಹ್ಮಣ |
| ವೇರುಲೇನೋಡು | ಸವಿತ ಸಮಾಜ. |
| ಮಟ್ಲಾಡು, ಹೀಲ್ಗಾಡು | ಪೋಲಿಸ್. |
| ತ್ಯಾಮಾನ್ನು | ಬಲಶಾಲಿ |
| ಸೊಕ್ಕ, ಕೆಂದಲು | ಬಟ್ಟೆ |
| ಕರವ, ಸ್ವಾವಡಿ | ಮನೆ |
| ನಾರವಾಣಮು | ತೆಂಗಿನಕಾಯಿ |
| ಸೇಗು | ಹೋಗು |
| ನಾಗನ, ನಚ್ಕೋ | ಸುಮ್ಮನಿರು |
| ನಾಪು | ಕೊಡು |
| ಕೈಪ್ಕೋ | ತಿನ್ನು |
| ಕಾಸಿಗ್ಮು | ದೆವ್ವ |
| ಬರಾಮ | ಮುಚ್ಕೊ, ಸುಮ್ಮನಿರು |
| ಮಿಡುಸ್ಗಾಡು | ಕಳ್ಳ |

ನಾಗರೀಕತೆ ಬೆಳೆದಂತೆ ಟಿವಿ ಸಿನಿಮಾದಂಥ ಆಧುನಿಕ ತಂತ್ರಜ್ಞಾನ ತನ್ನ ಅದಿಪತ್ಯವನ್ನು ಸ್ಥಾಪಿಸಿದರ ಪರಿಣಾಮದಿಂದಾಗಿ ಪಾರಂಪರಿಕ ವೃತ್ತಿಯಾದ ಹಾಡುಗಾರಿಕೆ ಬಯಲಾಟಗಳು ಕ್ಷೀಣಿಸುತ್ತ ಬಂದಂತೆ, ಇವರ ಸಾಂಸ್ಕೃತಿಕ ಬದುಕಿನ ಅವಿಬಾಜ್ಯ ಅಂಗವಾಗಿ ಬೆಳೆಯುತ್ತಿದ್ದ "ಮರುಗು ಭಾಷೆ" ಬಳಕೆಯು ಹೊಸತಲೆಮಾರಿನವರಿಂದ ದೂರವೇ ಉಳಿಯುತ್ತಿದೆ. ಈ ತರಹದ (ಮರುಗು) ಗುಪ್ತ ಭಾಷೆಗಳನ್ನು ಉಳಿಸಲು ಅನುಕೂಲಕರವಾದ ವಾತಾವರಣ ನಿರ್ಮಾಣ ಮಾಡುವ ಅವಶ್ಯಕತೆ ಇಂದು ಇದೆ. ಇವುಗಳನ್ನು ಉಳಿಸಿ ಮುಂದಿನ ಪೀಳಿಗೆಗೂ ಬಳುವಳಿಯಾಗಿ ಕೊಡಲು ಹೆಚ್ಚು ಹೆಚ್ಚು ಸಂಶೋಧನೆ ನಡೆಸುವ ಅಗತ್ಯ ಇದೆ.

**ವ್ಯವಹಾರಿಕ ಮತ್ತು ಪ್ರಾದೇಶಿಕ ಭಾಷೆ**

ಕರ್ನಾಟಕದಲ್ಲಿ ವ್ಯವಹಾರಿಕ ಭಾಷೆಯಾಗಿ ಕನ್ನಡವನ್ನು ಬಳಸುತ್ತಾರೆ. ರಾಜ್ಯದ ಹಲವು ಪ್ರಾಂತ್ಯಗಳಲ್ಲಿ ಪ್ರಾಂತೀಯ ಮತ್ತು ಸ್ಥಳೀಯ ಭಾಷೆಗಳು ಬಳಕೆಯಲ್ಲಿದ್ದು ಸಹಜವಾಗಿ ವ್ಯವಹಾರಿಕ ದೃಷ್ಟಿಯಿಂದ ಈ ಸ್ಥಳೀಯ ಭಾಷೆಗಳನ್ನು ಕಲಿತು ವ್ಯವಹರಿಸುತ್ತಿದ್ದಾರೆ.

ಉದಾ: ಉತ್ತರ ಕನ್ನಡ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಕನ್ನಡದೊಂದಿಗೆ ತುಳು ಮತ್ತು ಕೊಂಕಣಿ, ಮಹಾರಾಷ್ಟ್ರದ ಗಡಿಯಲ್ಲಿರುವವರು ಮರಾಠಿ, ಹೈದರಾಬಾದ್, ಕರ್ನಾಟಕ ಭಾಗದಲ್ಲಿರುವವರು ಉರ್ದು ಮತ್ತು ತೆಲುಗು ಭಾಷೆಯನ್ನು ವ್ಯವಹಾರಿಕ ಭಾಷೆಗಳಾಗಿ ಬಳಸುತ್ತಾರೆ.

| ಕನ್ನಡ | ತೆಲುಗು | ಕನ್ನಡ | ತೆಲುಗು |
|---|---|---|---|
| **ಶರೀರದ ಅಂಗಗಳು** | | | |
| ಬುದ್ಧಿಹಲ್ಲು | ಬುದ್ಧಿಪಲ್ಲು | ಕಾಲ್ಬೆರಳು | ಕಾಲುವೇಲು |
| ಕೈಬೆರಳು | ಚೇತವೇಳ್ಳು | ಹೆಬ್ಬೆರಳು | ಯಮಟೇಳ್ಳು |
| ಕಣ್ಣು | ಕನ್ನು, ಕಂಡ್ಲು | ಕರುಳು | ಪೇಗಲು |
| ತುಟಿ | ಪೆದುವುಲು | ಹಿಮ್ಮಡಿ | ಅರಿಕಾಲು |
| ಭುಜ | ಭುಜಮು | ಕಣತಲೆ | ಕಣವುಟುಲು |
| ಸೊಂಟ | ನಡಮು | ಕರ್ಣತಮ್ಮಟೆ | ಸೆವ್ವ ತಮಟ |
| ಮಣಿಕಟ್ಟು | ಮಾಕಲು | ಕಿವಿ | ಶೆವ್ವುಲು |
| ಶಂಕಳು | ಸಂಕ | ಮೊಣಕೈ | ಮೂಶ್ಯೆಡಲು |
| ತಲೆಬುರುಡೆ | ತಲಬುರ್ | ಕತ್ತು-ಕುತ್ತಿಗೆ | ಗೊಂತು |
| ಗರ್ಭ | ಗರ್ಭಮೂ | ಗರ್ಭಾಶಯ | ಗರ್ಭಾತೀರ್ |
| ಗಂಟಲು | ಗೊಂತು | ಕೆನ್ನೆಗಳು | ಸೆಂಪುಲು |
| ಗುದ | ಗುದ್ದ | ಮುತ್ರಕೋಶ | ಮೂತ್ರಕೊಶಂ |
| ತೊಡೆ | ತೊಡ | ಮಂಡಿ | ಮಾಕಾಲಿ |
| ಚರ್ಮ | ತೊಲು | ಮೊಲೆ ತೊಟ್ಟು | ಎದೆತೊಟ್ಟು |
| ಮುಖ | ಮುಖಂ | ಎದೆ | ಎದ |
| ಹೊಟ್ಟೆ | ಪಟ್ಟ | ನಾಲಿಗೆ | ನಾಲಹ |
| ಕೀಲು | ಕೀಲು | ಗಲ್ಲ | ಗಲ್ಲಂ |
| ತೋರುಬೆರಳು | ತೋರವೇಳು | ಅಂಗಾಲು | ಅಂಗಾಲು |
| ಅಂಗಳು | ಅಂಗಳು | ಮುಸುಡಿ | ಮೂತಿ |
| ಹಲ್ಲು | ಪಂಡಲು | ಮೆದುಳು | ಮಿದುಳು |
| ಉಗುರು | ಗೊರಲು | ಹೊಳ್ಳೆ | ಹೊಳ್ಳ |
| ಶಿರ | ಶಿರಂ | ಮೂಗು | ಮುಕು |
| ನಾಡಿ | ನಾಡಿ | ಹೊಕ್ಕಳು | ಪಟ್ಟು |
| ಅನ್ನನಾಳ | ಅನ್ನಂನಾಳ | ರೆಪ್ಪೆ | ರೆಪ್ಪ |
| ಪಕ್ಕೆಲುಬು | ಪಕ್ಕೆಲುಬು | ಮೀನಕಂಡ | ಶ್ಯಾವಖಂಡ |
| ಪಿತ್ತ | ಪಿತ್ತ | ಬೆನ್ನು | ವೆನ್ನು |
| ಉದರ | ಕಡಪು | ಕಣ್ಣುಗುಡ್ಡೆ | ಕಣ್ಣುಗುಡ್ಡ |
| ಮಾಂಸಖಂಡ | ನೆಂದರಖಂಡ | ಪಾದ | ಪಾದುಂ |
| ಶ್ವಾಸಕೋಶ | ಶ್ವಾಸಕೋಶ | ರೆಪ್ಪೆಕೂದಲು | ರೆಪ್ಪಎಂಟಿಕ |
| ಕೂದಲು | ಎಂಟಿಕ | ಭ್ರೂಣ | ಭ್ರೂಣಂ |

| ಕನ್ನಡ | ತೆಲುಗು | ಕನ್ನಡ | ತೆಲುಗು |
| --- | --- | --- | --- |
| ಹುಬ್ಬು | ಹುಬ್ಬು | ಮಧ್ಯಬೆರಳು | ಮಧ್ಯವೇಲು |
| ವಸಡು | ಜಂತ | ಮುಷ್ಠಿ | ಮುಷ್ಠಿ |
| ಬಾಯಿ | ನೊರು | ಮೀಸೆ | ಮೀಸಾಮು |
| ನರ | ನರಂ | ಜುಟ್ಟು | ಜಡ |
| ಬೆನ್ನೆಲುಬು | ಪಕ್ಕೆಲಬು | ಹಣೆ | ಹಣೆ |
| ಜೋಲ್ಲು | ಜೋಲ್ಲು | ಶಿಶ್ನ | ಮಡ್ಡ |
| ರಕ್ತ | ರಕ್ತಂ | ಮೂಳೆ | ಎಮಕ |
| ಅಂಗೈ | ಅರಸ್ಟೆ | ಕತ್ತುಪಟ್ಟಿ | ಗೊಂತುಪಟ್ಟಿ |
| ಹೃದಯ | ಹೃದಯಂ | ಕೈ | ಚೇಯಿ |
| **ರೋಗಗಳು ಮತ್ತು ದೇಹದ ಸ್ಥಿತಿಗಳು** | | | |
| ಅಜೀರ್ಣ | ಅಜೀರ್ಣಮು | ಕುರುಡ | ಗುಡ್ಡೊಡು |
| ಅತಿಸಾರ | ಅತಿಸಾರಮು | ಮೇಹರೋಗ | ಮೇಹರೋಗಮು |
| ಅಂಡವಾಯು | ಅಂಡವಾಯುಂ | ಕಣ್ಣೀರು | ಕಣ್ಣಿಳ್ಲು |
| ಆಕಳಿಸು | ಆವಲಿಂಪು | ಕಫ | ಕಫಮು |
| ವಾಂತಿ | ವಾಂತಿಲು | ಕಾಮಾಲೆ | ಗುರುಬುಟ್ಟು |
| ಚಳಿಜ್ವರ | ಸನ್ನಿಜ್ವರ | ಒಕ್ಕಣ್ಣು | ಒಕ್ಕನ್ನು |
| ಗೋನುಬೆನ್ನು | ಗೂನುವೇನು | ತೊನ್ನು | ತೊನ್ನು |
| ಮಲಬದ್ಧತೆ | ಮಲಬದ್ದತ | ಹುಳು | ಪುರುಗ |
| ತುರಿತ | ದುರದ | ಕಜ್ಜಿ | ಗಜ್ಜಿ |
| ಕೆಮ್ಮು | ದಗ್ಗು | ರಕ್ತಹೀನತೆ | ರಕ್ತಹಿನತ |
| ರಕ್ತಸ್ರಾವ | ರಕ್ತಸ್ರಾವಮು | ವಾಯುನೋವು | ವಾಯುನೊಪ್ಪಿ |
| ಗಂಟಲುಕೆರೆತ | ಗೊಂತುತುರಿಕ | ಗಂಟಲುಕಟ್ಟುವುದು | ಗೊಂತುಕಟೆದಿ |
| ಗಡ್ಡೆ | ಗಡ್ಡ | ಮೂಕತೆ | ಮೂಗತನಮು |
| ಬೊಕ್ಕತಲೆ | ಬೊಕ್ಕತಲ | ಗಾಯ | ಗಾಯಂ |
| ತಲೆಸುತ್ತುವುದು | ತಲಸುತ್ತು | ಬೊಜ್ಜುಮೈ | ಬೊಜ್ಜುವಲ್ಲು |
| ಅರ್ಬುದರೋಗ | ಆರ್ಬುದರೊಗಂ | ನೆಗಡಿ | ಪಡಸಮ |
| ಹೊಟ್ಟೆತೊಳಸುವುದು | ಕಡಪ ಕಡಗೆದಿ | ಆರೋಗ್ಯ | ಆರೋಗ್ಯಂ |
| ಉಗುಳು | ಎಂಗಲಿ | ಉಬ್ಬಸ | ಉಬ್ಬಸಂ |
| ನೋವು | ನೊಪ್ಪಿ | ತಲೆನೋವು | ತಲನೊಪ್ಪಿ |
| ಹೊಟ್ಟೆನೋವು | ಕಡಪುನೊಪ್ಪಿ | ಮಲ | ಪಿಯ |
| ತೆಳ್ಳಗಿರುವುದು | ತೆಳ್ಳಗವುನದಿ | ನಿದ್ರಾರೋಗ | ನಿದ್ರಾರೋಗಂ |

| ಕನ್ನಡ | ತೆಲುಗು | ಕನ್ನಡ | ತೆಲುಗು |
|---|---|---|---|
| ನಿದ್ರೆ | ನಿದ್ರ | ನಿದ್ರಾಹೀನತೆ | ನಿದ್ರಾಹೀನತ |
| ಕಲ್ಲು | ರಾಯಿ | ಬೆವರು | ಸೆಮಟ |
| ಹುಚ್ಚು | ಪಿಚ್ಚು | ಮತಿಭ್ರಮಣೆ | ಮತಿಭ್ರಮಣ |
| ಕೀವು | ಸಿಮ | ಬಿಳಿಸೆರಗು | ತೆಲ್ಲಸೆರಗು |
| ಬಾಯರಿಕೆ | ದಾಮು | ಮೊಡವೆ | ಗುಳ್ |
| ಮೂಲವ್ಯಾದಿ | ಮಲಬದ್ಧಕಲು | ಹುಣ್ಣು | ಪುಂಡು |
| ಬಿಗಿಹಿಡಿತ | ಭದ್ರಂಗಪಟಕು | ಮಚ್ಚೆ | ಮಚ್ಚ |
| ಕ್ಷಯ | ಕ್ಷಯಮು | ಕುಂಟ | ಕುಂಟೊಡು |
| ಸಿಡುಬು | ಅಮವಾರು | ಬಿಳಿತೊನ್ನು | ತೆಲತೊನ್ನು |
| ಧ್ವನಿ | ಸ್ವರಮು | ಬಿಕ್ಕಳಿಕೆ | ಎಕ್ಕುಳು |
| **ವೇಷ ಭೂಷಣ** | | | |
| ಅಂಗಿ | ಸೊಕ್ಕ | ಕುಪ್ಪಸ | ರವಿಕ |
| ಟೋಪಿ | ಟೋಪಿ | ಉಣ್ಣೆ | ಉಣ್ಣೆ |
| ಬಟ್ಟೆ | ಬಟ್ಟಲು | ಸೊಂಟಿಪಟ್ಟಿ | ನಡಮುಪಟ್ಟಿ |
| ಕಂಬಳಿ | ಕೆಂಬಡಿ | ಪ್ಯಾಂಟು | ಪ್ಯಾಂಟು |
| ಮಫ್ಲರ್ | ಮಫ್ಲರ್ | ಲಂಗ | ಲಂಗಾ |
| ದಾರ | ದಾರಂ | ಕಾಲುಚೀಲ | ಕಾಲತಿತ್ತಿ |
| ರೇಷ್ಮೆ | ರೇಷ್ಮೆಂ | ಉಡಿದಾರ | ಉಡಿದಾರಂ |
| ಸೆರಗು | ಸೆರಗು | | |
| **ಬಾಂಧವ್ಯ** | | | |
| ಅತಿಥಿ | ಸುಟ್ಟಲು | ಅಧ್ಯಾಪಕ | ಅಧ್ಯಾಪಕಡು |
| ಮಾಮ | ಮಾಮ | ಗುರು | ಗುರುವುಲು |
| ಗ್ರಾಹಕ | ಗ್ರಾಹಕೆಡು | ಚಿಕ್ಕಪ್ಪ | ಪಿನ್ನಬ್ಬ |
| ಶಿಷ್ಯ | ಶಿಷ್ಯಡು | ಜಮೀನ್ದಾರ | ಜಮೀನ್ದಾರಡು |
| ಓರಗಿತ್ತಿ | ತೊಡುಕ್ವಾಡಲು | ದತ್ತುಮಗಳು | ದತ್ತುಕೂತರು |
| ತಾತ | ತಾತಗಾರು | ಅಜ್ಜಿ | ಅವ್ವ |
| ಅಳಿಯ | ಅಲ್ಲುಡು | ಮಿತ್ರ | ಮಿತ್ರುಡು |
| ತಾಯಿಯ ತಂದೆ | ತಾತಡು | ತಾಯಿಯ ತಾಯಿ | ಅವ್ವ |
| ಗಂಡ | ಮೊಗಡು, ಬಾರ್ತ | ಹೆಂಡತಿ | ಪೆಂಡ್ಲಾಮು, ಬಾರ್ಯ |
| ಭಾವಮೈದುನ | ಭಾಮರ್ದಿ | ಸೊಸೆ | ಕ್ವಾಡಲು |
| ತಂದೆ | ತಂಡ್ರಿ, ನಾಯನ | ಮಗ | ಕ್ವಾಡಕು |

| ಕನ್ನಡ | ತೆಲುಗು | ಕನ್ನಡ | ತೆಲುಗು |
|---|---|---|---|
| ಮಗಳು | ಕೂತರು | ತಂಗಿ | ಶಲ್ಲಲು, ಚೆಲ್ಲಿಲು |
| ಸೋದರ | ತಮ್ಮುಡು | ಸೋದರಮಾವ | ಮ್ಯಾನಮಾಮ |
| ಸೋದರತ್ತೆ | ಮ್ಯಾನಅತ್ತ | ಚಿಕ್ಕಮ್ಮ | ಪಿನ್ನಮ್ಮ |
| ಸಂಬಂಧಿಕ | ವಿಯ್ಯಯಡು | ಬಳಗದವರು | ಸುಟ್ಟಾಳು |
| **ಮನೆಬಳಕೆ ವಸ್ತುಗಳು** | | | |
| ಅಲ್ಮಾರ | ಅಲ್ಮಾರಮು | ಗೋಡೆಯಾಲ್ಮಾರಿ | ಗೋಡೆಯಾಲ್ಮಾರಮು |
| ಒನಕೆ, ಹಾರೆ | ರ್‍ವಾಹಲಿ | ಕೆಂಡ, ಇದ್ದಲು | ಅಗ್ಗಿ ನಿಪ್ಪುಲು |
| ಅಗ್ಗಿಷ್ಟಕೆ | ಅಗ್ಗಿಷ್ಟಕ | ಕಬ್ಬಿಣ | ಇನಮು |
| ಸೌಧೆ | ಕಟ್ಟಲು | ಸೌಟು | ಸವಟು |
| ರೊಟ್ಟಿಡಬ್ಬಿ | ಪಿಂಡಿಡಬ್ಬಮು | ಬಾಚಣಿಗೆ | ದುವ್ವಾನ |
| ಪರಿವಾಣ | ಕುಂಡಲು | ಕುರ್ಚಿ | ಕುರ್ಚಿ |
| ಮುಳ್ಳು ಚಮಚ | ಮುಲ್ಲುಚಂಚಾ | ಬುದ್ಧಿವಂತ | ಪನಾಲು |
| ಜಾಡಿ | ಜಲ್ಲೆಡ | ಚಾಪೆ | ಸಾಪ |
| ಚಮಚ | ಚಂಚಾ | ಜರುಡಿ | ಜಲ್ಲೆಡ |
| ಬೀಗದಕ್ಕೈ | ತಾಳಮುಚ್ಚೈ | ಹೊಗೆಗೊಡು | ಪೊಗಗೂಡು |
| ಕೊಡೆ | ಕೊಡ | ಜಾಲಿ | ಮುಂಡ್ಲು |
| ಪರಕೆ | ಪೊರಕ | ಉಯ್ಯಾಲೆ | ಉಯ್ಯಾಲ |
| ಬುಟ್ಟಿ | ಗಂಪ | ಮೇಜು | ಮೇಜಾ |
| ಪೆಟ್ಟಿಗೆ | ಪೆಟ್ಟಿ | ಮುಚ್ಚಳ | ಮೂಸೇದಿ |
| ಬಟ್ಟಲು | ಗಿನ್ನೆ | ಬೀಗ | ತಾಳಮು |
| ತಿಜೋರಿ | ತಿಜೋರಿ | ಒಲೆ | ಪೊಯ್ಯಿ |
| ತಟ್ಟೆ | ತಟ್ಟ | ಕನ್ನಡಿ | ಅದ್ದಂ |
| ಕಡ್ಡಿಪೆಟ್ಟಿಗೆ | ಅಗ್ಗಿಪೆಟ್ಟಿ | ಹಲ್ಲುಕಡ್ಡಿ | ಪೊಂಡಲುಪುಲ್ಲ |
| ಹಲ್ಲುಮಡಿ | ಪೊಂಡಲುಪುಡಿ | ಹೂದಾನಿ | ಪೂದಾನಿ |
| ಗಡಿಗೆ | ದುತ್ತ | ಮಕ್ಕಳ ಗಾಡಿ | ಪಿಲ್ಲಲಗಾಡಿ |
| ಬತ್ತಿ | ವತ್ತಿ | ಮಂಜುಗಡ್ಡೆ | ಮಂಜುಗಡ್ಡ |
| **ಆಭರಣಗಳು** | | | |
| ಉಂಗುರ | ಉಂಗುರಮು | ಕಡಗ | ಎಂಡಿಗಾಜು |
| ಸರ | ಸರಮು | ಬೆಂಡೋಲೆ | ಕಮುಲು |
| ಬೆಳ್ಳಿ | ಎಂಡಿ | ಬಳೆ | ಗಾಜುಲು |
| ಬೈತಲೆಬಟ್ಟು | ಪಾಪಿಡಿಬಟ್ಟು | ಪದಕ | ಪದಕಮು |

| ಕನ್ನಡ | ತೆಲುಗು | ಕನ್ನಡ | ತೆಲುಗು |
|---|---|---|---|
| ವಾಲೆ | ಕಮುಲು | ತೋಡೆ | ತೊಡ್ಲು |
| ಡಾಬು | ವಡ್ಡಾಣಂ | ಮಾಣಿಕ್ಯ | ಮಾಣಿಕ್ಯಮು |
| ಮಾಲೆ | ಮಾಲ | ಕಿರೀಟ | ಕಿರೀಟಂ |
| ಹವಳ | ಹವಳಮು | ಮುತ್ತು | ಮುತ್ಯಾಲು |
| ಕಂಠಹಾರ | ಕಂಠಿಹಾರಂ | ಕಾಲುಂಗುರ | ಕಾಲುಂಗ್ರಾಲು |
| **ವಾದ್ಯಗಳು** | | | |
| ಗಂಟೆ | ಗಂಟ | ತಂತಿವಾದ್ಯ | ತಂತಿವಾದ್ಯಮು |
| ಮದ್ದಲೆ | ಮದ್ದಲ | ಮೃದಂಗ | ಮೃದಂಗಮು |
| ತಮಟೆ | ತಮಟ | ತಬಲ | ತಬಲಂ |
| ಶಂಖ | ಶಂಖಮು | | |
| **ಧಾನ್ಯಗಳು ಮತ್ತು ಖಾದ್ಯಪದಾರ್ಥಗಳು** | | | |
| ಕಾಳು, ಧಾನ್ಯ | ಗಿಂಜಲು | ತೊಗರಿಬೇಳೆ | ಕಂದುಬ್ಯಾಳು |
| ಹಿಟ್ಟು | ಪಿಂಡಿ | ಉದ್ದು | ಉದ್ದು |
| ಉಪ್ಪಿನಕಾಯಿ | ಊರುಗಾಯಿ | ಪಲ್ಯ | ಪಲ್ಯಮು |
| ಕಾಫಿ | ಕಾಫಿ | ಅವರೆಕಾಯಿ | ಅನಪಕಾಯಿ |
| ಗೋಧಿ | ಗೋಮಲು | ತುಪ್ಪ | ನೆಯ್ಯಿ |
| ಬಟಾಣಿ | ಬಟಾಣಿಲು | ಕಡಲೆ | ಸೆನಗಲು |
| ರೊಟ್ಟಿ | ರೊಟ್ಟೆ | ಅನ್ನ | ಅನ್ನಮು |
| ಚಹ | ತೇಪನೀಳು | ಚಪಾತಿ | ಚಪಾತಿಲು |
| ಗೋಂದು | ಗೋಂದು | ಉಪಾಹಾರ | ಉಪಾಹಾರಮು |
| ಅವಲಕ್ಕಿ | ಅಟುಗುಲು | ಸಕ್ಕರೆ | ಚಕ್ಕರ |
| ಹೊಟ್ಟು | ಪೊಟ್ಟು | ಜೋಳ | ಜೊನ್ನಲು |
| ತರಕಾರಿ | ಕೂರಗಾಯಲು | ಎಣ್ಣೆ | ನೂನ |
| ಅಂಬಲಿ | ಕೊರಟ | ಮೊಸರು | ಪೆರಗು |
| ಬೇಳೆಕಾಳು | ಬ್ಯಾಳಗಿಂಜಲು | ಹಾಲು | ಪಾಲು |
| ಬಿಸ್ಕತ್ತು | ಬಿಸ್ಕತ್ತು | ಮುಸುಕಿನ ಜೋಳ | ಪಂಡ್ಲುಜೊನ್ನ |
| ಆಹಾರ | ಬೋಜನಮು | ಮಾಂಸ | ನಂಜರ |
| ಭತ್ತ | ವಡ್ಲು | ರಾತ್ರಿ ಊಟ | ರೈಬೋಜನಮು |
| ದನದ ಮಾಂಸ | ಎದ್ದನಂಜರ | ಕುರಿ ಮಾಂಸ | ಗೊರ್ರೆ ನಂಜರ |
| ಹಂದಿ ಮಾಂಸ | ಪಂದಿ ನಂಜರ | ಕಲ್ಲುಸಕ್ಕರೆ | ಕಲ್ಲುಸಕ್ಕರ |

| ಕನ್ನಡ | ತೆಲುಗು | ಕನ್ನಡ | ತೆಲುಗು |
|---|---|---|---|
| **ಸಂಬಾರ ಪದಾರ್ಥಗಳು** | | | |
| ಶುಂಠಿ | ಶುಂಠಿ | ಏಲಕ್ಕಿ | ಏಲಕ್ಕಿ |
| ಕರ್ಪೂರ | ಕರ್ಪೂರಮು | ನೆಲ್ಲಿಕಾಯಿ | ನೆಲ್ಲಿಕಾಯಿಲು |
| ಕರಿಜೀರಿಗೆ | ಕರಿಜೀರಿಗ | ಮೆಣಸು | ಮಿರುಪುಗಿಂಜಲು |
| ಜಾಪತ್ರೆ | ಜಾಪತ್ರಲು | ಜೀರಿಗೆ | ಜೀರಿಗ |
| ತುಳಸಿ | ತುಳಸಿ | ಮೆಣಸಿನಕಾಯಿ | ಮಿರುಪುಕಾಯಿ |
| ಅಡಿಕೆ | ವಕ್ಕ | ಅರಿಶಿನ | ಅರಿಶಿನಮು |
| **ಮರಗಳು ಮತ್ತು ಅವುಗಳ ಭಾಗಗಳು** | | | |
| ಸೀಬೆಹಣ್ಣಿನ ಮರ | ಜಿಪಕಾಯಿಮಾನು | ಮಾವಿನ ಮರ | ಮಾವಿಡಮಾನು |
| ಹುಣಿಸೇ ಮರ | ಸಿಂತಮಾನು | ಮರ | ಮಾನು |
| ಮುಳ್ಳು | ಮುಂಡ್ಲು | ಕಲ್ಲು | ರಾಳ್ಳು |
| ಆಲದಮರ | ಪಾಲುಮಾನು | ಜಾಲೀಗಿಡ | ಮುಂಡ್ಲುಮಾನು |
| ಬೀಜ | ಓಿತಲು | ಕೊಂಬೆ | ಕೊಂಬ |
| ಕಾಂಡ | ಕಾಂಡಮು | ನಾರು | ನಾರು |
| ಎಲೆ | ಆಕು | ಹೂವು | ಪೂವ |
| **ಹೂವುಗಳು, ಹಣ್ಣುಗಳು, ಮತ್ತು ತರಕಾರಿಗಳು** | | | |
| ಮಾವು | ಮಾವಿಡ | ಕಬ್ಬು | ಸೆರಕು |
| ಸೌತೆಕಾಯಿ | ದ್ರಾಸಕಾಯಿ | ಅಲುಗೆಡ್ಡೆ | ಉರಳಗಡ್ಡೆ |
| ಹುಣಸೆ ಹಣ್ಣು | ಸಿಂತಪಂಡು | ಕುಂಬಳ ಕಾಯಿ | ಗುಮ್ಮಡಕಾಯಿ |
| ಹಲಸಿನ ಹಣ್ಣು | ಪಣಸಪಂಡು | ಹಾಗಲ ಕಾಯಿ | ಕಾಕರಕಾಯಿ |
| ಬಾಳೆಹಣ್ಣು | ಬಾಳೆಪಂಡು | ಸೋರೆಕಾಯಿ | ಸ್ವಾರಕಾಯಿ |
| ಖರ್ಜೂರ | ಖರ್ಜೂರಮು | ಕಲ್ಲಂಗಡಿ | ಕಲ್ಲಂಗಡಿಪಂಡು |
| ಕೆಂಪುಮೂಲಂಗಿ | ಎರ್ರಮುಲ್ಲಂಗಿ | ಸೇವಂತಿಗೆ | ನಾವಂತಿಪೂವು |
| ಗುಲಾಬಿ | ಗುಲಾಬಿ | ಹುಲ್ಲು | ಕಸುವು |
| ಮಲ್ಲಿಗೆ | ಮಲ್ಲಿ | ಸಂಪಿಗೆ | ಸಂಪಿ |
| ಸಪೋಟಾ | ಸಪೋಟ | ತಂಬಾಕು | ವಕ್ಕಾಕು |
| ತೆಂಗಿನಕಾಯಿ | ತೆಂಗಕಾಯಿ | ವೀಳ್ಯದೆಲೆ | ಆಕು |
| ಪುದೀನಾ | ಪುದೀನಾ | ಈರುಳ್ಳಿ | ಯರಗಡ್ಡ |
| ಹೂಕೋಸು | ಪೂ ಕೂಸು | ಬಾದಾಮಿ | ಬಾದಾಮಿ |
| ಸೇಬು | ಸೇಬು | ಕಿತ್ತಳೆ | ಕಿತ್ತಳೆ |

| ಕನ್ನಡ | ತೆಲುಗು | ಕನ್ನಡ | ತೆಲುಗು |
|---|---|---|---|
| **ಕಟ್ಟಡ ಮತ್ತು ಅದರ ಭಾಗಗಳು** | | | |
| ಅಸ್ಪತ್ರೆ | ಅಸ್ಪತ್ರಿ | ಕಟ್ಟಡ | ಕಟ್ಟಡಲು |
| ಕೋಣೆ | ಮೂಲ್ಲಿಲು | ಕಿಡಕಿ | ಕಿಟಿಕಿಲು |
| ಮಾಳಿಗೆ | ಮೇಡ | ಗುಡಿಸಲು | ಕಸುವುಇಲ್ಲು |
| ಬಾಗಿಲು | ವಕಾಲಿ | ಹೊಸ್ತಿಲು | ಗಡಪ |
| ಕಲ್ಲು | ರಾಯಿ | | |
| **ಪ್ರಾಣಿಗಳು** | | | |
| ಒಂಟೆ | ಒಂಟ | ನಾಯಿ | ಕುಕ್ಕ |
| ಹೆಣ್ಣು ನಾಯಿ | ಪೆಂಟಕುಕ್ಕ | ಹೇಸರಗತ್ತೆ | ಗಾಡದಿ |
| ಹಸು | ಆವು | ಅಳಿಲು | ಉಡತ |
| ಖಡ್ಗಮೃಗ | ಖಡ್ಗಮೃಗಮು | ಕುದುರೆ | ಗುರುಮು |
| ಹೆಣ್ಣು ಕುದುರೆ | ಪೆಂಟಿಗುರುಮು | ಚಿರತೆ | ಮುಟ್ಟಾಗಾಡು |
| ಮುಂಗಸಿ | ಯಂಟವ | ಬಾಲ | ತ್ವಾಕ |
| ಪಶು | ಗೊಡ್ಲು | ನಾಯಿಮರಿ | ಕುಕ್ಕಪಿಲ್ಲ |
| ಮೇಕೆ | ಮ್ಯಾಹ | ಮೇಕೆ(ಗಂಡು) | ಪೋತು |
| ಕರು | ದೂಡ | ಬೆಕ್ಕು | ಪಿಲಕುನ |
| ಮೇಕೆಮರಿ | ಮ್ಯಾಕಪಿಲ್ಲ | ಕುದುರೆಮರಿ | ಗುರುಮುಪಿಲ್ಲ |
| ಬೆಕ್ಕಿನ ಮರಿ | ಪಿಲಕುನಪಿಲ್ಲ | ಕೋತಿ | ಕೋತಿ |
| ವಾನರ | ವಾನರಡು | ಹುಲಿ | ಪುಲಿ |
| ಎತ್ತು | ಎದ್ದುಲು | ಕರಡಿ | ಎಲುಗಬಂಟಿ |
| ತೋಳ | ತೊಡೇಲು | ಎಮ್ಮೆ | ಎನಮು |
| ಇಲಿ | ಯೆಲಕ | ನರಿ | ನಕ್ಕ |
| ಬೇಟೆನಾಯಿ | ಯಾಟಕುಕ್ಕ | ಮುಳ್ಳುಹಂದಿ | ಮುಲ್ಲುಪಂದಿ |
| ಆನೆ | ಏನಗ | | |
| **ಹುಳುಗಳು ಮತ್ತು ಕೀಟಗಳು** | | | |
| ಹೆಬ್ಬಾವು | ದಾಸಪಾಮು | ನಾಗರಹಾವು | ನಾಗಪಾಮು |
| ಎರೆಹುಳು | ಯಾರಮುರುಗ | ಏಡಿ | ಯಂಡ್ರಕಾಯಿ |
| ತಿಗಣೆ | ನಲ್ಲುಲು | ಜೇರುಂಡೆ | ಜಿರ್ರಪುರುಗ |
| ಹಲ್ಲಿ | ಪಲ್ಲಿ | ವಿಷ | ವಿಷಂ |
| ಹೇನು | ಪೇನು | ಚಿಟ್ಟೆ | ರೆಕ್ಕೆಪುರುಗ |
| ಗೆಜ್ಜಲ | ಸೆದ್ದಲು | ಚೇಳು | ತೇಲು |

| ಕನ್ನಡ | ತೆಲುಗು | ಕನ್ನಡ | ತೆಲುಗು |
|---|---|---|---|
| ನೊಣ | ಹೀಗ | ಜೇಡ | ಜಾಡ |
| ಸೊಳ್ಳೆ | ದೋಮ | ಮಿನು | ಜಾಪಲು |
| ಕಪ್ಪೆಮರಿ | ಕಪ್ಪಪಿಲ್ಲ | | |
| **ಹಕ್ಕಿಗಳು** | | | |
| ಮೊಟ್ಟೆ | ಗುಡ್ಡ | ಗೊಬೆ | ಗೂಬ |
| ಪಾರಿವಾಳ | ಪಾರಿವಾಳಮು | ಕೋಗಿಲೆ | ಕೋಕಿಲ |
| ಕಾಗೆ | ಕಾಕ | ಹದ್ದು | ಗದ್ದ |
| ರಣಹದ್ದು | ಗ್ರದ್ದ | ಗುಬ್ಬಚ್ಚಿ | ಪಿಟ್ಟಲು |
| ಗೂಡು | ಗೂಡು | | |
| **ಸಂಖ್ಯೆಗಳು** | | | |
| ಒಂದು | ಒಗಟಿ | ಎರಡು | ರೆಂಡು |
| ಮೂರು | ಮೂಡು | ನಾಲ್ಕು | ನಾಲ್ಗು |
| ಐದು | ಐದು | ಆರು | ಆರು |
| ಏಳು | ಏಡು | ಏಂಟು | ಎನಮದಿ |
| ಒಂಭತ್ತು | ತೊಂಬಿದಿ | ಹತ್ತು | ಪದಿ |
| ಹನ್ನೋಂದು | ಪದಕೊಂಡು | ಹನ್ನೆರೆಡು | ಪನ್ನೆಂಡು |
| ಹದಿಮೂರು | ಪದಮೂಡು | ಹದಿನಾಲ್ಕು | ಪದನಾಲ್ಗು |
| ಹದಿನೈದು | ಪದಿನೈದು | ಹದಿನಾರು | ಪದಿನಾರು |
| ಹದಿನೇಳು | ಪದಏಡು | ಹದಿನೆಂಟು | ಪದ್ದೆನೆಮಿದಿ |
| ಹತ್ತೋಂಭತ್ತು | ಪತ್ತೊಂಬಿದಿ | ಇಪ್ಪತ್ತು | ಇರವೈ |
| ಮೂವತ್ತು | ಮುಪ್ಪೈ | ನಲವತ್ತು | ನಲಪ್ಪೈ |
| ಐವತ್ತು | ಯಬ್ಬೈ | ಆರವತ್ತು | ಆರವೈ |
| ಎಪ್ಪತ್ತು | ಡೆಬ್ಬೈ | ಎಂಭತ್ತು | ಎಂಬೈ |
| ತೊಂಭತ್ತು | ತೊಂಬೈ | ನೂರು | ಒಕನೂರು |
| ಒಂದುಸಾವಿರ | ಒಕವೆಯ್ಯಿ | ಹತ್ತುಸಾವಿರ | ಪದಿವೆಯ್ಯಿ |

**ಲಿಪಿಯ ಬಳಕೆ :** ಕರ್ನಾಟಕದಲ್ಲಿ ತಲೆಮಾರುಗಳಿಂದ ನೆಲೆಸಿರುವುದರಿಂದ ಕನ್ನಡ ಭಾಷೆಯ ಲಿಪಿಯನ್ನು ಬಳಸುತ್ತಾರೆ. ತೆಲುಗು ಭಾಷೆಯ ಲಿಪಿಯೂ ಇವರಿಗೆ ತಿಳಿದಿದೆ.



೯೭. ದೊಂಬಿದಾಸ ಸಮುದಾಯ

# ೯

# ಪ್ರದರ್ಶಕ ಕಲೆಗಳು

**ರಾ**ಮಾಯಣ, ಮಹಾಭಾರತ ಮತ್ತು ಭಾಗವತಗಳಿಂದ ಅಸಂಖ್ಯಾತ ಬಿಡಿ ಬಿಡಿ ಪ್ರಕರಣಗಳನ್ನು ಆಯ್ಕೆ ಮಾಡಿಕೊಂಡು ದೊಂಬಿದಾಸರು ಬಯಲಾಟಗಳನ್ನು ಪ್ರದರ್ಶಿಸುತ್ತಿದ್ದರು. ಈ ಪ್ರಸಂಗಗಳನ್ನೇ ಆಯ್ಕೆ ಮಾಡಿಕೊಂಡು ಹರಿಕಥೆಯ ರೂಪದಲ್ಲಿ ಕಥೆಗಳನ್ನು ಮಾಡುತ್ತಾರೆ. ಸಿನಿಮಾ ಪ್ರಭಾವದಿಂದಾಗಿ ಕೆಲವು ಸಾಮಾಜಿಕ ನಾಟಕಗಳನ್ನು ಸಹ ಕಲಿತು ಪ್ರದರ್ಶಿಸುತ್ತಾರೆ.

ಬಯಲಾಟಗಳಲ್ಲಿ ತಾವೇ ಸ್ವತಃ ವೇಷಕಟ್ಟಿ ಪಾತ್ರ ಮಾಡುವುದರ ಜೊತೆಗೆ ಹಳ್ಳೀಗಾಡಿನ ಒಕ್ಕಲು ಮಕ್ಕಳಿಗೆ ಬಯಲಾಟಗಳನ್ನು ಕಲಿಸುವ (ನಿರ್ದೇಶನ) ಕಾಯಕಕ್ಕೂ ಇಳಿದ್ದಿದ್ದಾರೆ. ಹಳ್ಳಿಗಳಲ್ಲಿ ನಾಟಕ ಕಲಿಸುವ ಭಾಗವತರಾಗಿದ್ದಾರೆ.

ಈ ಸಮುದಾಯ ದಾಸಪರಂಪರೆಗೆ ತೀರ ಹತ್ತಿರವಾದದ್ದು ಎಂದೆ ಹೇಳಬೇಕಾಗುತ್ತದೆ. ದಾಸವೇರಣ್ಯರಾದ ಕನಕ, ಪುರಂದರ, ಶಿಶುನಾಳ, ತಾತಯ್ಯನವರಂತೆ ಇವರೂ ಕೂಡ ಒಂದೇ ಕಡೆ ಕುಳಿತು ಪಂಡಿತರಾಗಿ ಪ್ರೌಢ ಸಾಹಿತ್ಯ ರಚಿಸಿದವರಲ್ಲ. ಬದಲಾಗಿ ಊರೂರು ಸುತ್ತಿ ಜನ ಜೀವನದ ಅತಿ ಹತ್ತಿರದ ಸಂಪರ್ಕ ಪಡೆದು ಊರಿಂದೂರಿಗೆ ಸಂಚಾರ ಕೈಗೊಂಡು ಸಾಹಿತ್ಯ, ಮತ್ತು ಸಂಸ್ಕೃತಿಯನ್ನು ಸರಳವಾದ ಭಾಷೆಯಲ್ಲಿ ಪ್ರಸ್ತುತ ಪಡಿಸುತ್ತಿದ್ದರು. ಹೊರನೋಟಕ್ಕೆ ಈ ಜನ ಭಿಕ್ಷುಕರಾಗಿ ಕಂಡು ಬರುತ್ತಿದ್ದರಾದರೂ ಆ ಮೂಲಕ ಪ್ರಚಾರ ಪಡಿಸುತ್ತಿದ್ದ ಉದಾತ್ತ ತತ್ವಗಳು ಅವರ ತಂತಿನಾದದ ಜೊತೆಗೆ ಹೊರ ಹೊಮ್ಮುತ್ತಿದ್ದ ಜನಪದ ಕಾವ್ಯಗಳು ಭಿಕ್ಷೆ ಹಾಕಲು ಬಂದ ಮನೆಯೊಡತಿ ತಾನೇ ಇವರಿಂದ ಜ್ಞಾನದ ಬಿಕ್ಷೆ ಪಡೆದಂತೆ ಪರವಶಳಾಗುತ್ತಿದ್ದಳು. ಅಂತಹ ಮಾಂತ್ರಿಕ ಶಕ್ತಿ ಇವರಿಗೆ 'ಇತ್ತು (ಜೀಶಂಪ:೧೯೮೧:xxxi).

"ವೃತ್ತಿಗಾಯಕರ ಕಾವ್ಯಗಳು ಎಲ್ಲ ಸಂದರ್ಭದಲ್ಲಿಯೂ ಕಾವ್ಯಾಂಶದಿಂದ ತುಂಬಿ ತುಳಕ ಬೇಕಾಗಿಲ್ಲ, ಅಲ್ಲಿ ಕಥೆಗೆ ಪ್ರಧಾನ್ಯವೇ ಹೊರತು ಕಾವ್ಯಕ್ಕಲ್ಲ. ಇವೆಲ್ಲ ಹಾಡಿನಲ್ಲಿ ಮೂಡಿರುವ ಕಥೆಗಳೇ ಹೊರತು ಕಾವ್ಯ ಸತ್ವವನ್ನು ಎಲ್ಲಾ ಕಡೆಯೂ ನಿರೀಕ್ಷಿಸುವುದಿಲ್ಲ. ಕಥೆಗಾಗಿ ಇಲ್ಲಿ ವೃತ್ತಿಗಾಯಕ ಇರುತ್ತಾನೆ. ಕಥೆಯನ್ನು ವೈವಿಧ್ಯಮಯಗೊಳಿಸಲು ಅದಕ್ಕೊಂದು ಹೊಸ ವಾತಾವರಣವನ್ನು ಕಲ್ಪಿಸಲು ನಿರೂಪಣೆಯನ್ನು ಹೆಚ್ಚು

ಹಿತವಾಗಿಸಲು ಅವನು ಸಂಗೀತವನ್ನು ಆಶ್ರಯಿಸುತ್ತಾನೆ. ಈ ಕಾವ್ಯಗಳ ರಚನೆ ಕೆಲವೆಡೆ ತುಂಬ ಸಡಿಲ, ಶಿಥಿಲ. ಹಾಡದೆಯೇ ಓದಿದಾಗ ಸಾಮಾನ್ಯ ಗದ್ಯ. ಅದು ಒರಟು ಭಾಷೆಯಲ್ಲಿ ಕೃತಕವಾದ ರೀತಿಯಲ್ಲಿ ಹೆಣೆದುಕೊಂಡಂತೆ ತೋರುತ್ತದೆ. ಇವು ಹಾಡಿ ಕೇಳಬೇಕಾದ ಕಾವ್ಯಗಳೇ ಹೊರತು ಓದಬೇಕಾದ ಕಾವ್ಯ ಎನಿಸುವುದಿಲ್ಲ. ಆದರೆ, ಅದರ ಲಯದ ಜಾಡನ್ನು ಹಿಡಿದು ಪಲ್ಲವಿಯನ್ನು ಅಳವಡಿಸಿಕೊಂಡು ಮಟ್ಟಿನ ಜಾಡಿನಲ್ಲಿ ಸಾಗಿದರೆ ಅವು ಹಾಡಿಸಿಕೊಳ್ಳುತ್ತವೆ. ತಮ್ಮ ಉದ್ದೇಶವನ್ನು ಈಡೇರಿಸಿಕೊಳ್ಳುತ್ತವೆ. ಸಾಧಾರಣವಾದ ಪಲ್ಲವಿಗಳು ಈ ಹಾಡಿನ ಸಂಗೀತವನ್ನು ನಿಯಂತ್ರಿಸುತ್ತವೆ. ತಂದನಾನು ತಂದಾನ, ತಾನನ, ತಂದನ್ನ ತಾನ, ಕೋಲಣ್ಣ ಕೋಲೆ ಮುಂತಾದ ಕೆಲವು ಲಯಬದ್ಧ ರಚನೆಗಳು ಇಡೀ ಕಾವ್ಯಕ್ಕೆ ಸಂಗೀತದ ಶರೀರವನ್ನು ತೊಡಿಸುತ್ತವೆ. ಹಿಮ್ಮೇಳದವರು, ವಾದ್ಯ ಸಂಗೀತ, ಇವುಗಳಿಂದಾಗಿ ಸಂಗೀತದ ಗುಂಗು ತನ್ನದೇ ಆದ ರಸಲೋಕವನ್ನು ಸೃಷ್ಟಿಸುತ್ತವೆ"

ದೊಂಬಿದಾಸರ ಒಟ್ಟು ಮೌಖಿಕ ಸಾಹಿತ್ಯ ಕುರಿತಂತೆ ಮುಂದುವರಿದು ಹೀಗೆ ಹೇಳುತ್ತಾರೆ. "ಆಡುವ ಮಾತು ತೆಲುಗಾದರು, ಹಾಡುವ ಲಾವಣಿಗಳಿಗೆ ಕನ್ನಡದ ಮೊರೆ ಹೋಗಬೇಕಾಯಿತು. ಅದು ಅವರ ಜೀವನದ ಸಮಸ್ಯೆಯಾದುದರಿಂದ ಕನ್ನಡವನ್ನು ಅವಲಂಬಿಸಿ ಕನ್ನಡತನವನ್ನು ರಕ್ತಗತ ಮಾಡಿಕೊಂಡರು, ಕನ್ನಡದಲ್ಲಿ ಕಥೆ ಕಟ್ಟಿದರು, ಲಾವಣಿಗಳನ್ನು ಹಾಡಿದರು ನಾಟಕವನ್ನೂ ಆಡಿದರು; ಕನ್ನಡಿಗರೇ ಆಗಿ ಹೋದರು. ದೊಂಬಿದಾಸರನ್ನು ಈಗ ತೆಲುಗರೆಂದು ಯಾರು ಹೇಳುತ್ತಾರೆ! ತಮ್ಮ ಅಪೂರ್ವ ಸಾಹಿತ್ಯದಿಂದ ಕನ್ನಡ ಜನಪದ ಸಾಹಿತ್ಯವನ್ನು ಶ್ರೀಮಂತಗೊಳಿಸಿದ ಅವರು 'ಕನ್ನಡಿಗರೇ' (ಜೀಶಂಪ:೧೯೮೧:೪).

"ದೊಂಬಿದಾಸರು ಸಾಮಾಜಿಕವಾಗಿ ಕೆಳವರ್ಗದ ವೃತ್ತಿಕಲಾವಿದರು. ಇವರಿಗೆ ಎಷ್ಟೋವೇಳೆ ಒಂದು ಸ್ಥಿರವಾದ ಬದುಕು ಕೂಡ ಇರುವುದಿಲ್ಲ ಅಲೆಮಾರಿಗಳಾಗಿ ಜೀವನ ನಡೆಸುತ್ತಾರೆ. ಅಡವಿಯಲ್ಲಿ ಹೊಲದ ಮಾತಿರಲಿ, ವಾಸವಾಗಿರಲು ಊರಲ್ಲಿ ಮನೆ ಇರುವುದಿಲ್ಲ. ಜೀವನ ನಿರ್ವಹಣೆಗೆ ಕಾಲು ಕಡ್ಡಿ ಕಾಸು ಇರುವುದಿಲ್ಲ, ಆದರೆ ಇವರು ಎದೆಯ ಜೋಳಿಗೆಯ ತುಂಬ ಪದಗಳು ತುಂಬಿರುತ್ತವೆ"(ಕುಪ್ಪೆ, ನಾಗರಾಜ: ೨೦೦೩:೨೫).

ಮೌಖಿಕ ಪರಂಪರೆಯಲ್ಲಿಯೇ ಅಗಾಧವಾದ ಸಾಹಿತ್ಯವನ್ನು ಉಳಿಸಿ ಬೆಳೆಸಿಕೊಂಡು ಸಮುದಾಯ ಈವರೆವಿಗೂ ಬಂದಿದೆ. ಈ ಮೌಖಿಕ ಪರಂಪರೆಗೆ ಅಕ್ಷರ ರೂಪ ಕೊಡುವ ಪ್ರಯತ್ನ ನಡೆಯಬೇಕು. ಮತ್ತು ಆ ಜ್ಞಾನದ ಭಂಡಾರವನ್ನು ಉಳಿಸಿ ಕೊಳ್ಳುವ ಕಡೆಗೆ ಗಂಭೀರ ಪ್ರಯತ್ನ ಮಾಡಬೇಕಿದೆ.

ಈ ನಿಟ್ಟಿನಲ್ಲಿ ಪಿ ಸಿ ದಿನೇಶ್‌ರವರ ಮಾತು ಹೆಚ್ಚು ಪ್ರಸ್ತುತ ಅನಿಸುತ್ತದೆ. "ದೊಂಬಿದಾಸರ ಕಂಠ ನಮ್ಮ ಜಾನಪದ ಕಲಾವಿದರ ದನಿಗಳಲ್ಲೇ ಶ್ರೇಷ್ಠವಾದದ್ದು, ಎಂದು ಎಲ್ಲರೂ ಹೇಳುತ್ತಾರೆ ಆದರೆ ಈ ದಲಿತ ಸಮುದಾಯದ ಗಂಟಲದನಿ

ಯಾರನ್ನೂ ಆಕರ್ಷಿಸುತ್ತಿಲ್ಲ. ನಾಗರೀಕತೆ ತನ್ನಿಂದ ಭಿನ್ನವಾದ ಯಾವ ಸೌಂದರ್ಯವನ್ನೂ ಮೆಚ್ಚುವುದಿಲ್ಲ. ಈಗ ದೊಂಬಿದಾಸರು ಹಾಡುವುದೇ ಕಡಿಮೆಯಾಗಿದೆ. ಆದರೆ ಈ ದೊಂಬಿದಾಸರ ಮುಖವನ್ನು ನೋಡುತ್ತಿದ್ದರೆ ಅವರ ಹೃದಯಾಳದಲ್ಲಿ ನೂರಾರು ಹಾಡುಗಳು ಮನೆ ಮಾಡಿಕೊಂಡಿವೆ. ಕೇಳುವವರಿದ್ದರೆ ಈ ಹಾಡುಗಳೆಲ್ಲ ಸಲೀಸಾಗಿ ಹೊರಹೊಮ್ಮಿ ಬರಲಿವೆ. ಆದರೆ ಕೇಳಲು ಯಾರಿದ್ದಾರೆ" (ಅವರೇ: ೨೦೦೩:೬೦).

ದೊಂಬಿದಾಸರು ಅಭಿನಯಿಸುತ್ತಿದ್ದ ಯಕ್ಷಗಾನ ಬಯಲಾಟಗಳೂ ಕೂಡ ಮೌಖಿಕ ಪರಂಪರೆಯವು. ಕೆಲವು ವಿದ್ವಾಂಸರು ಅಭಿಪ್ರಾಯಪಡುವಂತೆ ಯಕ್ಷಗಾನದ ಮೂಲ ಪುರುಷ ಇವರೇ ಪ್ರಾರಂಭದಲ್ಲಿ ಧೀಮ್ ತಕ್ಕಧೀಮ್ ಎಂದು ಕುಣಿಯುತ್ತಾ, ಮದ್ದಳೆ ಬಾರಿಸುತ್ತಾ ತಾರಕ ಸ್ವರದಲ್ಲಿ ಕಂದ ಪದ್ಯಗಳನ್ನು ಹಾಡುತ್ತ ಭಾವಾವೇಷದಿಂದ ಕುಣಿದು ಕುಪ್ಪಳಿಸುತ್ತಿದ್ದರೆಂದು ಸಮುದಾಯದ ಹಿರಿಯ ಕಲಾವಿದರು ಹೇಳುತ್ತಾರೆ. ಇವರು ಅಭಿನಯಿಸುತ್ತಿದ್ದ ನೂರಾರು ನಾಟಕಗಳ ಡೈಲಾಗ್‌ಗಳು ಹಾಡುಗಳು ಪೂರ್ತಿ ಮೌಖಿಕವಾಗಿರುತ್ತಿದ್ದವು. ಅವುಗಳನ್ನು ಯಾರು ಅಕ್ಷರ ರೂಪದಲ್ಲಿ ಸಂರಕ್ಷಿಸಿರಲಿಲ್ಲ. ಇವರಿಗೆ ಈ ವಿದ್ಯೆ ಕಲಿಸಿದ ಗುರುಗಳೂ ಸಹ ಯಾರೂ ಇಲ್ಲ. ಹಿರಿಯರು ಮಾಡುತ್ತಿದ್ದದನ್ನು ಕಿರಿಯರು, ಅಪ್ಪ ಮಾಡುತ್ತಿದ್ದದನ್ನು ಮಗ, ತಾತ ಮಾಡುತ್ತಿದ್ದನ್ನು ಮೊಮ್ಮಗ ಹೀಗೆ ಈ ವಿದ್ಯೆ ವಂಶಪಾರ್‍ಯಂಪರ್‍ಯವಾಗಿ ಬಂದಿದ್ದು.

ಸಾಂಪ್ರದಾಯಿಕ ನಾಟಕ ಕಂಪನಿಗಳು ಶಾಸ್ತ್ರೀಯವಾಗಿ ನಾಟಕವನ್ನು ಅಭ್ಯಾಸಮಾಡಿ ಜಗಮಗಿಸುವ ಸೀನರಿಗಳು ಶ್ರೀಮಂತವಾಗಿ ಕಂಗೊಳಿಸುತ್ತಿದ್ದ ವಸ್ತ್ರ ವಿನ್ಯಾಸ ಪ್ರಕಾಶಮಾನವಾದ ಬೆಳಕಿನ ವ್ಯವಸ್ಥೆ, ಸ್ತ್ರೀ ಪಾತ್ರಗಳನ್ನು ಅಭಿನಯಿಸುತ್ತಿದ್ದ ನಿಜವಾದ ಸ್ತ್ರೀಯರು, ಈ ಆಕರ್ಷಣೆಗಳ ಮುಂದೆ ಅಸಂಪ್ರದಾಯಕವಾದ ಈ ದಾಸರ ಬಯಲಾಟಗಳು ಪ್ರೋತ್ಸಾಹವಿಲ್ಲದೆ ನೇಪತ್ಯಕೆ ಸರಿದವು. ಈ ಕಲಾವಿದ ಸಮುದಾಯ ಮತ್ತೆ ನಿರುದ್ಯೋಗ ಸಮಸ್ಯೆಯತ್ತ ಮುಖ ಮಾಡಿತು. ಈ ಸಂದರ್ಭದಲ್ಲಿ ಅದು ಕಂಡುಕೊಂಡ ಉಪಾಯ, ತಾನೆ ಬಣ್ಣ ಹಾಕಿ ಅಭಿನಯಿಸುತ್ತಿದ್ದ ಬಯಲಾಟಗಳನ್ನು ತಕ್ಕಮಟ್ಟಿಗೆ ಅದಕ್ಕೆ ಶಾಸ್ತ್ರೀಯ ರೂಪಕೊಟ್ಟು ಹಳ್ಳಿಗಾಡಿನ ಜನ ಸಮುದಾಯಕ್ಕೆ ಕಲಿಸಲು (ನಿರ್ದೇಶಿಸಲು) ಪ್ರಾರಂಭಿಸಿದ್ದು. ಮೌಖಿಕವಾಗಿದ್ದ ಈ ನಾಟಕಗಳನ್ನು ಅಕ್ಷರ ರೂಪಕ್ಕೆ ತರಲು ಪ್ರಾರಂಭಿಸಿತು. ತನ್ನ ತಲೆಯೊಳಗಿದ್ದ ಡೈಲಾಗ್ ಮತ್ತು ಹಾಡುಗಳನ್ನು ಅಕ್ಷರ ಬಲ್ಲವರಿಂದ ಬರೆಯಿಸಲು ಪ್ರಾರಂಭಿಸಿತು. ಕೆಲವು ಅಕ್ಷರ ತಿಳಿದಿದ್ದ ಸಮುದಾಯದವರೆ ಈ ನಾಟಕದ ಪ್ಲಾಟುಗಳನ್ನು ಬರೆಯಲು ಪ್ರಾರಂಭಿಸಿದರು. ಮೌಖಿಕ ಪರಂಪರೆಯಲ್ಲಿದ್ದವುಗಳು ಅಕ್ಷರ ರೂಪಕ್ಕೆ ರೂಪಾಂತರಗೊಂಡವು. ಹೀಗೆ ರೂಪಾಂತರಗೊಂಡ ನೂರಾರು ನಾಟಕಗಳು ಈಗಲೂ ನೋಡಲು ಸಿಗುತ್ತವೆ. ಆದರೆ ಅವುಗಳನ್ನು ಸಂಗ್ರಹಿಸಿ ಮುದ್ರಣರೂಪಕ್ಕೆ ತಂದು ಸಂರಕ್ಷಿಸಿದರೆ ಈವರೆಗೂ ಮೌಖಿಕ ಪರಂಪರೆಯಲ್ಲಿದ್ದ ಜ್ಞಾನ ಸಂಪತ್ತು, ಪುಸ್ತಕ ರೂಪದಲ್ಲಿ ಎಲ್ಲರಿಗೂ ದೊರಕುವ ಸಾಧ್ಯತೆ ಇದೆ. ಈ ನಿಟ್ಟಿನಲ್ಲಿ ಪ್ರಯತ್ನ ನಡೆಯಬೇಕಿದೆ.

### ಬಯಲಾಟಗಳಲ್ಲಿ ಬಳಸುತ್ತಿದ್ದ ಆಭರಣಗಳು, ವಸ್ತ್ರಗಳು ಮತ್ತಿತರ ಪರಿಕರಗಳು

ಸ್ಟೇಜ್‌ಗೆ ಬಳಸುತ್ತಿದ್ದ ಪರದೆ, ಭುಜಕೀರ್ತಿ ಎದೆಕವಚ ಕಿರೀಟಗಳು, ಡಮಾಸ್ ಬಟ್ಟೆಯಿಂದ ತಯಾರಿಸಿದ ಚಮಕಿಮಣಿ ವಸ್ತ್ರಗಳು, ನಿಲುವು ಕೋಟು, ಕಚ್ಚೆಪಂಚೆ, ಕಾಲ್‌ಚೇಲ, ಪೇಟ, ತುರಾಯಿ, ಜರಿ, ಖಡ್ಗ, ಗದೆ, ಮಣಿಹಾರ, ತೋಳ್ಬುಜ, ನಡುಪಟ್ಟಿ, ಕೈಕಟ್ಟು, ಕಿರೀಟ, ಕಣ್ಮಣಿ, ಮೂಗು ಕೋರೆದವಡೆ, ದಪ್ಪಮೀಸೆ ತಲೆಗೆ ಮಂಜರಿ ಇತ್ಯಾದಿಗಳನ್ನು ಬಳಸುತ್ತಿದ್ದರು. ಸ್ತ್ರೀ ಪಾತ್ರದಾರಿಗೆ ಬೇಕಾದ ಅಂದ-ಚಂದ ಸೀರೆಗಳನ್ನು ಹಳ್ಳಿಗರಿಂದಲೇ ಕೇಳಿಪಡೆದು ವೇಷ ಹಾಕಿಕೊಳ್ಳುತ್ತಿದ್ದರು. ತಲೆಗೆ ಟೋಪನ್‌ಬಳಸುತ್ತಿರಲಿಲ್ಲ. ಆದಕ್ಕಾಗಿಯೇ ಉದ್ದನೆಯ ತಲೆ ಕೂದಲನ್ನು ಬೆಳೆಸಿಕೊಳ್ಳುತ್ತಿದ್ದರು.

ಅತ್ಯಂತ ಸರಳವಾದ ಬಣ್ಣಗಳನ್ನು ಉಪಯೋಗಿಸಿ ತಾವೇ ಮೇಕಪ್ ಮಾಡಿ ಕೊಳ್ಳುತ್ತಿದ್ದರು. ನಾಟಕದಲ್ಲಿ ಅಭಿನಯಿಸುವ ಕಲಾವಿದರ ಈ ಕಲೆಯಲ್ಲೂ ಪರಿಣಿತರಿದ್ದರು. ಇವರು ಬಳಸುತ್ತಿದ್ದ ಅತ್ಯಂತ ಪ್ರಮುಖವಾದ ಬಣ್ಣ ಹರುದಾಳದ ಕಲ್ಲು, ಹೆಂಚಿನ ಮೇಲೆ ತೇದು ಇಂಗಲೀಕವೆಂಬ ಕೆಂಪು ಬಣ್ಣವನ್ನು ಮಿಶ್ರಣಮಾಡಿ ಹಚ್ಚಿಕೊಳ್ಳುತ್ತಿದ್ದರು. ಉದ್ದನೆಯ ತಲೆ ಕೂದಲು ಬಿಡುತ್ತಿದ್ದರಾದರು ಮೀಸೆ ಬಿಡುತ್ತಿರಲಿಲ್ಲ. ರಾಜ ಮತ್ತು ದೈತ್ಯ (ರಾಕ್ಷಸ)ನ ಪಾತ್ರಕ್ಕೆ ಮೀಸೆ ಕಟ್ಟಿಕೊಳ್ಳುತ್ತಿದ್ದರು. ವಿಧೂಷಕ, ಕೋಡಂಗಿ ಇತ್ಯಾದಿ ಪಾತ್ರಗಳಿಗೆ ಕಪ್ಪುಮಸಿ ಮೀಸೆ ಬರೆದುಕೊಳ್ಳುತ್ತಿದ್ದರು. ವಸ್ತ್ರವಿನ್ಯಾಸ ಪ್ರಸಾದನ ಈ ಎಲ್ಲಾ ವಿಭಾಗದಲ್ಲೂ ಇವರು ಪರಿಣಿತರಿದ್ದರು ಮುಖಕ್ಕೆ ಹಚ್ಚಿದ ಬಣ್ಣ ತೊಳೆಯಲು ಬೆಣ್ಣೆ, ತುಪ್ಪ, ಬಳಸುತ್ತಿದ್ದರು. ಇದನ್ನು ಗ್ರಾಮಸ್ಥರಿಂದಲೇ ಕೇಳಿ ಪಡೆಯುತ್ತಿದ್ದರು.

### ವಾದ್ಯಪರಿಕರಗಳು

ದೊಂಬಿದಾಸರು ತಮ್ಮ ಸಾಂಪ್ರದಾಯಿಕ ವೃತ್ತಿಯಾದ ಭಿಕ್ಷಾಟನೆ ಮತ್ತು ಬಯಲಾಟದ ಪ್ರದರ್ಶನಗಳಲ್ಲಿ ಹಲವಾರು ವಾದ್ಯ ಪರಿಕರಗಳನ್ನು ಬಳಸುತ್ತಿದ್ದರು. ಈ ವಾದ್ಯಪರಿಕರ ಗಳಿಲ್ಲದೆ ವೃತ್ತಿ ನಡೆಯುತ್ತಿರಲಿಲ್ಲ. ಇವರು ಬಳಸುತ್ತಿದ್ದ ಪ್ರಮುಖ ವಾದ್ಯಗಳು ಇಂತಿವೆ. ಭಿಕ್ಷೆ ಬೇಡಲು ಏಕತಾರಿ, ಚಿಟುಕುತಾಳ, ಕಂಜರ, ದಮ್ಮಡಿ, ಶೃತಿ ಪೆಟ್ಟಿಗೆ, ಗೆಜ್ಜೆ, ತಂಬೂರಿ, ಏಕತಾರಿ, ಶಂಖ, ಜಾಗಟೆ, ಗರುಡಗಂಬ, ಬೌಂಕಿ (ಬಾಂಕಿ) ಇತ್ಯಾದಿಗಳನ್ನು ಬಳಸುತ್ತಿದ್ದರು.

ಬಯಲಾಟದ ಪ್ರದರ್ಶನಗಳಲ್ಲಿ ಹಾರ್ಮೋನಿಯಂ, ತಬಲ, ಪಿಟೀಲು, ವೀಣೆ, ಬಳಸುತ್ತಿದ್ದರು. ಬಹಳ ಹಿಂದೆ ಪುಂಗಿಕಾಯಿ ಎಂಬ ಚರ್ಮವಾದ್ಯ ಹಾಗೂ ಮುಖವೀಣೆ ಎಂಬ ಓಲಗದ ತರಹದ ವಾದ್ಯವನ್ನು ಬಳಸುತ್ತಿದ್ದರು.

ದಾಸರದೇ ಇನ್ನೊಂದು ಗುಂಪು ಕೋಲೆ ಬಸವ ಅಥವಾ ಗಂಗೆದ್ಲು ಎಂದು ಕರೆದುಕೊಳ್ಳುತ್ತದೆ. ಇವರು ಹಳ್ಳಿಗರಿಂದ ದಾನವಾಗಿ ಪಡೆದ ಹಸು ಮತ್ತು ಎತ್ತುಗಳನ್ನು ಪಳಗಿಸಿ ರಾಮಸೀತೆ ಆಟ ಆಡಿಸಿ ಭಿಕ್ಷೆ ಬೇಡುತ್ತಾರೆ. ಇವರು ಬಳಸುವ ಪ್ರಮುಖ ವಾದ್ಯಗಳು, ನಾದಸ್ವರ, ಶೃತಿಪೆಟ್ಟಿಗೆ, ಓಲಗ ಮತ್ತು ಡೋಲು.

ಭಿಕ್ಷೆಯ ರೂಪದಲ್ಲಿ ನೀಡುವ ದವಸಧಾನ್ಯ ಆಹಾರ ಪದಾರ್ಥಗಳನ್ನು

ಹಾಕಿಸಿಕೊಳ್ಳಲು ಅಸಿಬೇಚೀಲ, ಗೋಪಾಳ ಬುಟ್ಟಿ, ಭವನಾಶಿ, ಅಕ್ಷಯಪಾತ್ರೆ (ಪಂಚಲೋಹದ್ದು) ಬಳಸುತ್ತಿದ್ದರು.

ದೊಂಬಿದಾಸರು ಪ್ರಮುಖವಾಗಿ ಬಳಸುವ ತಂತಿ ವಾದ್ಯ ಏಕತಾರಿ. ಇದು ಭಾರತದ ಅತ್ಯಂತ ಪ್ರಾಚೀನವಾದ ವಾದ್ಯ ಎಂಬುದು ಜಾನಪದ ತಜ್ಞರ ಅಭಿಪ್ರಾಯ. ಈ ಏಕತಾರಿಯನ್ನು ಕಲಾವಿದರೆ ತಯಾರು ಮಾಡಿಕೊಳ್ಳುತ್ತಾರೆ.

**ತಯಾರಿಸುವ ವಿಧಾನ**

ಒಂದು ಗುಂಡಾಕಾರದ ದಪ್ಪನಾದ ಚೆನ್ನಾಗಿ ಬಲಿತ ಸೋರೆ ಬುರಡೆಯನ್ನು ಚೆನ್ನಾಗಿ ಒಣಗಿಸಿ ನೀರಿನಲ್ಲಿ ನೆನೆಸುತ್ತಾರೆ. ಇದರ ಅಂಕುಡೊಂಕುಗಳನ್ನು ಸರಿಪಡಿಸಿ ತಪ್ಪಲೆಯಾಕಾರಕ್ಕೆ ಸರಿಪಡಿಸಿಕೊಳ್ಳುತ್ತಾರೆ. ಅರ್ಧ ಮಾರು ಉದ್ದದ ಬಿದಿರಿನ ಗಳವನ್ನು ತೆಗೆದುಕೊಂಡು ಈ ಸೋರೆ ಬುರುಡೆಯನ್ನು ಎರಡು ಕಡೆ ಕೊರೆದು ಬಿದಿರಿನ ಗಳುವನ್ನು ಅದರ ಒಳಗೆ ತೂರಿಸುತ್ತಾರೆ. ಗಳು ಮತ್ತು ಬುರುಡೆಗೆ ಕೊರೆದ ತೂತುಗಳ ಮಧ್ಯ ಬಿಗಿಯಾಗಿ ಹಿಡಿದುಕೊಳ್ಳಲು ಮೇಣ ಮೆತ್ತುತ್ತಾರೆ. ಗಳುವಿನ ಒಂದು ಬದಿಯಲ್ಲಿ ಒಂದು ಸಣ್ಣ ತೂತು ಮಾಡಿ ಕಲಾತ್ಮಕವಾಗಿ ಕೆತ್ತಿದ ಮತ್ತೊಂದು ಬಿರಡೆ ಸಿಗಿಸುತ್ತಾರೆ. ಈ ಬಿರಡೆಗೆ ಒಂದು ತಂತಿ ಬಿಗಿದು ಮತ್ತೊಂದು ಬದಿಯ ಸೋರೆ ಬುರಡೆ ಮತ್ತು ಗಳು ಸೇರುವ ಜಾಗಕ್ಕೆ ಬಿಗಿದು ಕಟ್ಟುತ್ತಾರೆ. ಸೋರೆ ಬುರುಡೆ ಕುಳಿಬಿದ್ದು ಮಟ್ಟಸವಗಿರುವ ಜಾಗದಲ್ಲಿ ಒಂದು ಮಡಕೆ ಚೂರನ್ನು ಸರಿಯಾದ ಆಕಾರಕ್ಕೆ ತೇದು ಬಿಲ್ಲೆ ಮಾಡಿಕೊಂಡು ಆ ಬಿಲ್ಲೆಗೆ ಮೇಣ ಅಂಟಿಸಿ ಆ ಮೇಣದ ಮೇಲೆ ಒಂದು ನಾಣ್ಯ ಅಂಟಿಸುತ್ತಾರೆ. ಬಿರಡೆಯ ಮೂಲಕ ಹಾದು ಹೋದ ತಂತಿ ಈ ನಾಣ್ಯದ ಮೇಲೆ ಕೂರುವಂತೆ ಸರಿ ಹೊಂದಿಸಿಕೊಂಡು ಬಿರಡೆಯ ಸಹಾಯದಿಂದ ತಂತಿಯನ್ನು ತನಗೆ ಬೇಕಾದ ಶೃತಿಗೆ ತಕ್ಕಂತೆ ಬಿಗಿಗೊಳಿಸುತ್ತಾರೆ. ಈಗ ಏಕತಾರಿಯು ಧ್ವನಿ ಹೊರಡಿಸಲು ತಯಾರಾಗುತ್ತದೆ. ಅಲಂಕಾರಕ್ಕಾಗಿ ಮರದ ಬಿರಡೆಯ ತುದಿಗೆ ನವಿಲುಗರಿ ಸಿಕ್ಕಿಸುತ್ತಾರೆ. ಬುರುಡೆಗೆ ೩ ನಾಮ ಬಳಿದು ಅಲಂಕರಿಸುತ್ತಾರೆ. ಈ ತಂತಿವಾದ್ಯದ ಸುನಾದ ಮತ್ತು ಅದರ ಸೌಂದರ್ಯ ಎಂತಹ ಅರಸಿಕನನ್ನೂ ನಾದಲೋಕಕ್ಕೆ ಕರೆದೊಯ್ಯುತ್ತದೆ.

**ಮ್ಯಾಳಾಂ :** ನಾಟಕದ ಗುಂಪಿಗೆ ಮ್ಯಾಳಂ ಅಂತ ಕರೆಯುತ್ತಾರೆ. ಒಂದೊಂದು ಗುಂಪಿಗೆ ಒಬ್ಬ ಮುಖ್ಯಸ್ಥ ಇರುತ್ತಾರೆ. ನಾಟಕದ ಗುಂಪಿನ ಯಜಮಾನ ಎಲ್ಲಾ ಆಗುಹೋಗುಗಳಿಗೆ ಜವಾಬ್ದಾರನಾಗಿದ್ದು ಅವನ ತೀರ್ಮಾನವೇ ಅಂತಿಮ. ಈ ನಾಟಕದ ಗುಂಪಿನ ಪಾತ್ರದಾರಿಗಳನ್ನು ಪ್ರಮುಖವಾಗಿ ಮೂರು ಭಾಗಗಳಾಗಿ ವಿಂಗಡಿಸುತ್ತಾರೆ. ೧) ಶಾವುಕಾಡು (ಸಾವುಕಾಡು)–ರಾಣಿಪಾತ್ರದಾರಿ. ೨) ದೊರೆವೇಷಗಾಡು –ರಾಜನ ಪಾತ್ರದಾರಿ, ೩) ವತ್ತೇಷಗಾಡು –ಕೋಡಂಗಿ, ಸೂತ್ರದಾರಿ, ಸೈನ್ಯಾದಿಪತಿ, ಸಖಿ ಇತ್ಯಾದಿ ಪಾತ್ರಗಳು. ವಾದ್ಯ ಪರಿಕರಗಳನ್ನು ನುಡಿಸಲು ಬೇರೆ ವಾದ್ಯಗೋಷ್ಠಿ ತಂಡ ಇರುತ್ತಿರಲಿಲ್ಲ. ಪಾತ್ರದಾರಿಗಳೇ ತಮ್ಮ ಪಾತ್ರದ ಮಧ್ಯೆ ವಿರಾಮವಿದ್ದಾಗ, ವೇಷ ಮುಚ್ಚಿಕೊಳ್ಳಲು ತಲೆ ಮೇಲೆ ಟವಲ್ ಅಥವಾ ಪಂಚೆ ಹೊದ್ದುಕೊಂಡು ಹಾರ್ಮೋನಿಯಂ ತಬಲದಂತ ವಾದ್ಯಗಳನ್ನು ನುಡಿಸುತ್ತಿದ್ದರು.

ಕುಂಡಕಾಡು : ನಾಟಕದ ಗುಂಪಿಗೆ ಅಡಿಗೆ ಮಾಡಲು ಒಬ್ಬ ಮುಖ್ಯ ಅಡಿಗೆಯವ ನಿರುತ್ತಿದ್ದ. ಈತನನ್ನು "ಕುಂಡಕಾಡು" ಎಂದು ಕರೆಯುತ್ತಿದ್ದರು. ಅಡಿಗೆ ತಯಾರಿಸಿ ಬಡಿಸುವ ಜವಾಬ್ದಾರಿ ಇವನದಾಗಿರುತಿತ್ತು.

ತ್ಯಾಗಂ : ನಾಟಕ ಆಡಲು ಇಷ್ಟು ಹಣ ಎಂದು ಮಾತು ಕತೆ ನಡೆಸಿ ಹಳ್ಳಿಗರಿಂದ ವೀಳ್ಯೆ ಪಡೆದುಕೊಳ್ಳುತ್ತಿದ್ದರು. ಈ ಒಪ್ಪಿಗೆ ಹಣಕ್ಕೆ ತ್ಯಾಗಂ ಎಂದು ಕರೆಯುತ್ತಾರೆ.

ನಾಟಕದಿಂದ ಬಂದ ಹಣವನ್ನು ಅವರ ಸ್ಥಾನ ಮಾನಗಳಿಗೆ ಅನುಗುಣವಾಗಿ ಹಂಚಿಕೊಳ್ಳುತ್ತಿದ್ದರು. ಕುಂಡಕಾಡು, ಕೋಲ್ಕಾಡು, ಪಿನ್ನಪೆದ್ದ ಗೂಡದಾಸರಿಯನ್ನು ಒಳಗೊಂಡಂತೆ ಆ ಮ್ಯಾಳಾಂನಲ್ಲಿ ಭಾಗವಹಿಸಿದ ಎಲ್ಲರಿಗೂ ಹಂಚುತ್ತಿದ್ದರು.

## ಜನಪದ ಕ್ರೀಡೆಗಳು

ಜನಪದ ಕ್ರೀಡೆಗಳು ತಲತಲಾಂತರದಿಂದ ರೂಢಿಮೂಲದಿಂದ ಬಂದವುಗಳು. ಹೆಚ್ಚಾಗಿ ಗ್ರಾಮೀಣ ಪರಿಸರದಲ್ಲಿ ಕಂಡು ಬರುವ ಈ ಕ್ರೀಡೆಗಳು ದೈಹಿಕ, ಮಾನಸಿಕ, ಬೌದ್ಧಿಕ ಉಲ್ಲಾಸ ಮತ್ತು ಮನೋರಂಜನೆ ಪಡೆಯಲು ಅತ್ಯವಶ್ಯ. ವಯಸ್ಸಿಗೆ ಅನುಗುಣವಾಗಿ ಹತ್ತು ಹಲವು ತರಹದ ಆಟೋಟಗಳನ್ನು ಮನುಷ್ಯ ರೂಡಿಸಿ ಕೊಂಡು ಬಂದಿದ್ದಾನೆ. ಜೆ ಎನ್ ರೋಸ್‌ರವರು ವ್ಯಕ್ತಿಯ ಸ್ವಂತಿಕೆಯನ್ನು ಪ್ರದರ್ಶಿಸುವ ಎಲ್ಲಾ ಸಂತೋಷಕರ ಸಾಹಸಗಳ ಮತ್ತು ರಚನಾತ್ಮಕ ಚಟುವಟಿಕೆಗಳೇ ಆಟ ಎಂದಿದ್ದಾರೆ. ಸಾಂಸ್ಕೃತಿಕ ಹಿನ್ನಲೆಯಿಂದ ಬಂದ ಈ ಸಮುದಾಯ ತಮ್ಮ ಕಲಾ ಪ್ರದರ್ಶನಕ್ಕೆ ಅಗತ್ಯವಾಗಿ ಬೇಕಾಗುತ್ತಿದ್ದ ಶಾರೀರಿಕ ಚುರುಕುತನ ರೂಢಿಸಿಕೊಳ್ಳಲು ಹಲವು ತರಹದ ಆಂಗೀಕ ಚಟುವಟಿಕೆಗಳನ್ನು ಅಭ್ಯಾಸ ಮಾಡಿಕೊಳ್ಳುವುದು ಅಗತ್ಯವಾಗಿತ್ತು.

ರಂಗಮಂಟಪ ಏರಿ ವೇಷ ಹಾಕಿ ನಟಿಸುವ ಸಣ್ಣಾಟ, ದೊಡ್ಡಾಟಗಳನ್ನು ಆಟಗಳು ಅಥವಾ ಕ್ರೀಡೆಗಳೆಂದು ಕರೆದರೆ ತಪ್ಪಾಗಲಾರದು. ಹಬ್ಬಹರಿದಿನಗಳು ಮತ್ತು ಬಿಡುವಿನ ಸಂದರ್ಭಗಳಲ್ಲಿ ಪಗಡೆಯಾಟ, ಚೌಕಬಾರ, ತೆಂಗಿನಕಾಯಿ ಹೊಡೆಯುವ ಆಟ, ಹಳಿ–ಗುಳಿಮನೆ, ಉರಿಮೆ ಆಟ, ಅಣ್ಣೇಕಲ್ಲು ಹಾಗೂ ಪ್ರಾಂತೀಯವಾಗಿ ಬೇರೆ ಬೇರೆ ತರಹದ ಆಟಗಳನ್ನು ಆಡುತ್ತಿದ್ದರು.

### ಮಕ್ಕಳ ಆಟಗಳು

ಈ ಸಮುದಾಯದ ಮಕ್ಕಳಿಗೆ ಸಂಪೂರ್ಣ ಅಲೆಮಾರಿತನ ಇದ್ದ ಸಂದರ್ಭದಲ್ಲಿ ಆಟೋಟಗಳಿಗೆ ಅವಕಾಶ ಇರಲಿಲ್ಲ. ಬೆಳಗಾಗುತ್ತಿದ್ದಂತೆ ತಮ್ಮ ತಂದೆ ತಾಯಂದಿರ ಜೊತೆ ಈ ಮಕ್ಕಳು ಹೊಟ್ಟೆ ಪಾಡಿಗಾಗಿ ಊರೂರು ಅಲೆಯ ಬೇಕಾಗಿತ್ತು. ಬಾಲ್ಯಕ್ಕೆ ಮುದನೀಡುವ ಆಟೋಟಗಳಲ್ಲಿ ಭಾಗವಹಿಸಲು ಇವರಿಗೆ ಇದ್ದ ಅವಕಾಶ ತೀರಕಡಿಮೆ. ಸಿಕ್ಕ ಅವಕಾಶಗಳಲ್ಲಿ ಮಕ್ಕಳು ಆಡುತ್ತಿದ್ದ ಆಟಗಳು ಗೋಲಿ ಗಜ್ಜುಗ, ಲಗೋರಿ, ಕುಂಟಾಟ, ಮರಕೋತಿ, ಕಣ್ಣಾಮುಚ್ಚಾಲೆ, ಕುಂಟೋಬಿಲ್ಲೆ, ಕಬ್ಬಡಿ, ಚಿನ್ನಿದಾಂಡು, ಬುಗುರಿ, ಕಪ್ಪೆ ಆಟ, ಜೂಟು ಮುಟ್ಟು ಮುಂತಾದವು ಪ್ರಮುಖವಾದ ಆಟಗಳಾಗಿದ್ದವು.

### ಕಲಾವಿದರ ಪರಿಚಯ

ದೊಂಬಿದಾಸರ ಇಡೀ ಸಮುದಾಯವೇ ಕಲಾವಿದರಾಗಿದ್ದು ಇವರಲ್ಲಿ ಕಲಾವಿದರು ಕಲಾವಿದರಲ್ಲದವರು ಎಂದು ವಿಂಗಡಿಸುವುದು ಸಾಧ್ಯವಿಲ್ಲದ ಮಾತು. ಸಮುದಾಯ ದಲ್ಲಿರುವ ಕಲಾವಿದರೆಲ್ಲರ ಬಗ್ಗೆ ಮಾಹಿತಿ ಸಂಗ್ರಹಿಸುವುದಾದರೆ ಒಂದು ಬೃಹತ್ ಗ್ರಂಥವೇ ಸೃಷ್ಟಿಯಾಗುತ್ತದೆ. ಈ ಕೃತಿಯ ಪರಿಮಿತಿಯಲ್ಲಿ ನಮ್ಮ ನಡುವೆ ಇರುವ ಕೆಲವು ಪ್ರಶಸ್ತಿ ಪುರಸ್ಕೃತ ಕಲಾವಿದರ ಕುರಿತು ಕಿರು ಪರಿಚಯ ಮಾಡಿಕೊಡಲಾಗಿದೆ.

#### ೧. ಬಂಗಾರಮ್ಮ

ಗಂಡು ಮೆಟ್ಟಿನ ನಾಡು ದಾವಣಗೆರೆ ಜಿಲ್ಲೆಯಲ್ಲಿ ಅಸಂಖ್ಯಾತ ಕಲಾವಿದರಿದ್ದಾರೆ. ಶ್ರೀಮತಿ ಬಂಗಾರಮ್ಮನವರೊಬ್ಬ ಶ್ರೇಷ್ಠ ಜನಪರ ಕಲಾವಿದೆ. ಇವರು ಹುಟ್ಟಿದ್ದು ದಾವಣಗೆರೆ ಜಿಲ್ಲೆ ಜಗಳೂರು ತಾಲ್ಲೂಕು ಬಂಗಾರಕ್ಕನ ಗುಡ್ಡ ಎಂಬ ಪುಟ್ಟ ಹಳ್ಳಿಯಲ್ಲಿ ಇವರ ತಂದೆ ಸಣ್ಣ ಕರಡಪ್ಪ ಗವಾಯಿಗಳು, ಆ ಕಾಲಕ್ಕೆ ದೊಡ್ಡ ಕಲಾವಿದರಾಗಿದ್ದರು. ಗುರು ಬೋಧನೆ ಪಡೆದು ಪಾರಮಾರ್ಥದ ವಿಚಾರಗಳನ್ನು ಸಾಕಷ್ಟು ತಿಳಿದುಕೊಂಡಿದ್ದರು. ಇವರ ದೊಡ್ಡಪ್ಪ ದೊಡ್ಡಕರಡಪ್ಪನವರ ಮಾರ್ಗದರ್ಶನದಲ್ಲಿ ಬಂಗಾರಮ್ಮನವರು ಸಾಕಷ್ಟು ಕಲಿತರು. ದೊಡ್ಡಪ್ಪ ಪಿಟೀಲು ನುಡಿಸುತ್ತಾ ತತ್ವಪದಗಳು ಲಾವಣಿಗಳನ್ನು ಹಾಡುತ್ತಾ ಕಾಯಕ ಮಾಡುತ್ತಿದ್ದರೆ, ಬಂಗಾರಮ್ಮನವರು ಇವರ ಜೊತೆಯಲ್ಲಿ ಹೋಗು ತ್ತಿದ್ದರು. ರಕ್ತಗತವಾಗಿ ಈ ಕಲೆಯು ಅವರನ್ನು ಆವರಿಸಿಕೊಂಡಿತು.

ಬಂಗಾರಮ್ಮನವರು ಅದ್ಭುತವಾದ ಕಂಠಸಿರಿಯುಳ್ಳವರಾಗಿದ್ದಾರೆ. ೭೦ ವರ್ಷದ ಈ ಇಳಿವಯಸ್ಸಿನಲ್ಲೂ ಅದ್ಭುತವಾಗಿ ಹಾಡುಗಳನ್ನು ಹಾಡುತ್ತಾರೆ. ಅವರೇ ಹೇಳುವಂತೆ ಎರಡನೆ ತರಗತಿಯವರೆಗೆ ಓದಿದ್ದಾರೆ. ಕೇವಲ ಸಹಿ ಮಾಡಲಷ್ಟೆ ಬರುತ್ತದೆ. ಆದರೆ ಮೌಖಿಕವಾಗಿ ನೂರಾರು ತತ್ವಪದಗಳು ಹತ್ತಾರು ಲಾಲಿಪದ, ಸೋಭಾನೆ ಪದಗಳು ಬಯಲಾಟದ ಕಂದ ಪದಗಳನ್ನು ಹಾಡುತ್ತಾರೆ. ಸುತ್ತಮುತ್ತಲ ಹಳ್ಳಿಗರಿಗೆ ತತ್ವಪದಗಳನ್ನು ಕಲಿಸಿದ್ದಾರೆ. ತಮ್ಮ ಜೊತೆ ನಾಲ್ಕೈದು ಜನರ ತಂಡ ರಚಿಸಿಕೊಂಡು ಮೊಳಕಾಲ್ಮೂರು, ಹೊಸಪೇಟೆ, ಬಳ್ಳಾರಿ, ರಾಯಚೂರು, ಸಿಂಧನೂರು, ಮುಂತಾದ ಕಡೆ ಕಾರ್ಯಕ್ರಮ ನೀಡಿದ್ದಾರೆ. ಇವರು ಪ್ರಮುಖವಾಗಿ, ಶಿಶುನಾಳ ಷರೀಫ, ಶಂಕರಾಚಾರ್ಯ, ನಾಯಕನ ಹಟ್ಟಿ ತಿಪ್ಪೇರುದ್ರಸ್ವಾಮಿ ಮುಂತಾದ ದಾರ್ಶನಿಕರು ಮತ್ತು ಸಂತರ ಕುರಿತಾದ ತತ್ವಪದ ಗಳನ್ನು ಹಾಡುತ್ತಾರೆ.

ಇವರ ಕಲಾಸೇವೆಯನ್ನು ಗೌರವಿಸಿ ಪತ್ತು ಹಲವು ತಾಲ್ಲೂಕು, ಜಿಲ್ಲೆ ಮತ್ತು ರಾಜ್ಯಮಟ್ಟದ ಪ್ರಶಸ್ತಿಗಳು ಸಂದಿವೆ. ಕರ್ನಾಟಕ ಸರ್ಕಾರದ ಜಾನಪದ ಮತ್ತು ಯಕ್ಷಗಾನ ಅಕ್ಯಾಡಮಿ ೨೦೦೨ರಲ್ಲಿ ಇವರಿಗೆ ರಾಜ್ಯ ಪ್ರಶಸ್ತಿ ನೀಡಿ ಗೌರವಿಸಿದೆ.

ಕಲಾಸೇವೆಯ ಜೊತೆಗೆ ಸಾಮಾಜಿಕ ಜೀವನದಲ್ಲೂ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಅಪರೂಪಕ್ಕೆ ಎಂಬಂತೆ ಒಮ್ಮೆ ಗ್ರಾಮಪಂಚಾಯಿತಿ ಸದಸ್ಯರಾಗಿ ಆಯ್ಕೆಗೊಂಡು ಗ್ರಾಮ ಪಂಚಾಯಿತಿ ಅಧ್ಯಕ್ಷರಾಗಿ ಕೆಲಸಮಾಡಿದ್ದಾರೆ. ಈ ಸಂದರ್ಭದಲ್ಲಿ ತನ್ನ

ಸಮುದಾಯದ ನಿರ್ಗತಿಕರಿಗೆ ೬೨ ಮನೆಗಳನ್ನು ಕಟ್ಟಿಸಿದ್ದೇನೆ ಎಂದು ಹೆಮ್ಮೆಯಿಂದ ಹೇಳಿಕೊಳ್ಳುತ್ತಾರೆ. ಗ್ರಾಮ ಪಂಚಾಯಿತಿ ವ್ಯಾಪ್ತಿಗೆ ಬರುವ ಸುತ್ತ ೧೧ ಹಳ್ಳಿಗಳಲ್ಲಿ ಗ್ರಾಮಪಂಚಾಯಿತಿಯಿಂದ ಸಾಕಷ್ಟು ಕೆಲಸ ಮಾಡಿದ್ದಾರೆ.

ಗ್ರಾಮ ಪಂಚಾಯ್ತಿ ಅಧ್ಯಕ್ಷಗಿರಿ ಮಾಡಿದ ಇವರಿಗೆ ವಾಸಿಸಲು ಒಂದು ಒಳ್ಳೆಯ ಮನೆ ಇಲ್ಲ, ವಿದ್ಯುತ್ ಸೌಲಭ್ಯವಿಲ್ಲದ ಒಂದು ಜನತಾ ಮನೆ, ಎರಡು ಎಕರೆ ಖುಷ್ಕಿ ಜಮೀನು ಒಬ್ಬ ಗಂಡು ಮಗ, ೪ ಜನ ಹೆಣ್ಣು ಮಕ್ಕಳು ಇವಿಷ್ಟೆ ಇವರ ಆಸ್ತಿ. ಆದರೆ ಇವರ ಎದೆಯೊಳಗೆ ಎರಡು ಹಗಲು ಎರಡು ರಾತ್ರಿ ನಿರಂತರವಾಗಿ ಹಾಡುವಷ್ಟು ಪದಗಳು ಇವೆ. ಇವರಿಗೆ ಕನ್ನಡಭಾಷೆ ಮತ್ತು ದಾಸರ ಬಗ್ಗೆ ತುಂಬ ಅಭಿಮಾನ ಈ ಕುರಿತು ಅವರಾಡುವ ಅಭಿಮಾನದ ಪದ ಹೀಗಿದೆ.

ಮಾತೆ ಕನ್ನಡ ಮಾತೆ
ಜಾತಿ ಸುವಿನೀತೆ, ನೀ ನಿರ್ಮಲವಂತೆ,
ಎನ್ನಯ ಜನ್ಮಗೀತೆ,
ಶ್ರೇಷ್ಠದಾಸರ ಪಡೆದ, ಈ ಲೋಕದೊಳು
ಶ್ರೇಷ್ಠರೆಂದೆನಿಸಿದ
ವೀರಾಂಜನೇಯ, ವಿದ್ಯಾರಣ್ಯರು ಎಲ್ಲರು ನಿನ್ನಿಂದಲೆ ಬಂದಿಹರು।

ಈ ಜನಪದ ಕೋಗಿಲೆಗೆ ತನ್ನ ಸಮುದಾಯ ಈ ಅಭಿಜಾತ ಕಲೆಯ ಬಗ್ಗೆ ನಿರಾಸಕ್ತಿ ತೋರುತ್ತಿರುವ ಬಗ್ಗೆ ನೋವಿದೆ. "ತಾಳ ಬಡಕೊಂಡು ಊರೂರು ಸುತ್ತೋದು ನಮಗೇನು ಕರ್ಮಾನ" ಎಂದು ಈಗಿನ ಪೀಳಿಗೆ ಹೇಳುವ ಮಾತು ಇವರಿಗೆ ನೋವು ತಂದಿದೆ.

ಶ್ರೀ ರಾಮದಾಸಪ್ಪ

ದಾಸಪರಂಪರೆಯ ಮತ್ತೊಂದು ಹಿರಿಯ ಚೇತನ ರಾಮದಾಸಪ್ಪ, ೭೫ವರ್ಷದ ಇವರು ಪ್ರಸ್ತುತ ಶಿವಮೊಗ್ಗ ನಗರದಲ್ಲಿ ವಾಸವಾಗಿದ್ದಾರೆ. ಕಳೆದ ೩೫ವರ್ಷಗಳಿಂದ ಈ ಪರಂಪರೆಯಲ್ಲಿ ಖ್ಯಾತಿ ಪಡೆದ ಕಲಾವಿದರು. ಬಯಲಾಟದಲ್ಲಿ ಆಂಜನೇಯ ಮತ್ತು ಶಕುನಿಯ ಪಾತ್ರದಲ್ಲಿ ತಮ್ಮ ಛಾಪನ್ನು ಮೂಡಿಸಿದವರು. ಸ್ವತಃ ಅನೇಕ ತತ್ವಪದಗಳನ್ನು ಲಾವಣಿಗಳನ್ನು ರಚಿಸಿದ್ದಾರೆ. ಹರಿಕಥೆ, ತತ್ವಪದ, ಬಯಲಾಟದ ರಂಗಗೀತೆಗಳಿಗೆ ಹೆಸರಾದವರು. ಅಪರೂಪಕ್ಕೆ ಎಂಬಂತೆ ಸರ್ಕಾರಿ ನೌಕರಿಯಲ್ಲಿದ್ದು (ಕೆಳದರ್ಜೆ ನೌಕರರಾಗಿ) ನಿರಂತರವಾಗಿ ಕಲಾ ಸೇವೆಯಲ್ಲಿ ತಮ್ಮನ್ನು ತೊಡಗಿಸಿಕೊಂಡವರು. ಇವರಿಗೆ ಈ ಕಲೆ ರಕ್ತಗತವಾಗಿ ಬಂದದ್ದು. ಸಮುದಾಯದ ಹಿರಿಯರಿಂದ, ತಂದೆ-ತಾತಂದಿರಿಂದ ಕಲಿತದ್ದು ಯಾವುದನ್ನು ನಿರ್ದಿಷ್ಟವಾಗಿ ಗುರು ಮುಖೇನ ಶಾಸ್ತ್ರೀಯ ರೂಪದಲ್ಲಿ ಕಲಿತದಲ್ಲ.

ಇವರ ಕಲಾಸೇವೆಯನ್ನು ಗುರುತಿಸಿ ಹಲವು ಸಂಘ ಸಂಸ್ಥೆಗಳು ಇವರನ್ನು ಗೌರವಿಸಿವೆ. ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡಮಿ ೨೦೦೩ರ ಸಾಲಿನ ಜ್ಞಾನ-ವಿಜ್ಞಾನ ಪ್ರಶಸ್ತಿ ನೀಡಿ ಗೌರವಿಸಿದೆ.

**ಶ್ರೀ ಬಿ ಎ ಗುರುಮೂರ್ತಪ್ಪ**

ನಾಡಿನ ಪ್ರಖ್ಯಾತ ನಾಟಕ ಕಂಪನಿಯಾದ "ಶ್ರೀ ಗುಬ್ಬಿ ವೀರಣ್ಣ" ನಾಟಕ ಕಂಪನಿಯ ಕಲಾರತ್ನಗಳಲ್ಲಿ ಇವರೊಂದು ಅನರ್ಘ ರತ್ನ ಎಂದರೆ ತಪ್ಪಾಗಲಾರದು. ಇವರು ಈ ಸಮುದಾಯಕ್ಕೆ ಸೇರಿದ ಮುದೆನೂರು ವಂಶಸ್ಥರು. ಕಲಾವಿದರಾಗಿದ್ದ ಇವರು ತಮ್ಮದೆ ಮೇಳಗಳನ್ನು ಕಟ್ಟಿಕೊಂಡು ಊರೂರುಗಳಲ್ಲಿ ಬಯಲಾಟಗಳನ್ನು ಪ್ರದರ್ಶಿಸುತ್ತಿದ್ದರು. ಸುಂದರಕಾಯದ ಸ್ಪುರದ್ರೂಪಿಯಾಗಿದ್ದ ಗುರುಮೂರ್ತಪ್ಪನವರು ದಾಸರ ಬಯಲಾಟಗಳಲ್ಲಿ ಭಕ್ತ ಪ್ರಹ್ಲಾದ ನಾಟಕದಲ್ಲಿ ಪ್ರಹ್ಲಾದನ ಪಾತ್ರ ರಾಜ ರಾಣಿಯರ ಪಾತ್ರಗಳನ್ನು ಅತ್ಯಂತ ಯಶಸ್ವಿಯಾಗಿ ನಿರ್ವಹಿಸುತ್ತಿದ್ದರು.

ಸಂಗೀತ ಜ್ಞಾನ ಇವರಿಗೆ ರಕ್ತಗತವಾಗಿ ಬಂದಿತ್ತು. ವಿದ್ಯಾವಂತರೂ ಆಗಿದ್ದ ಇವರಿಗೆ ಸಂಸ್ಕೃತ ಭಾಷೆ ತಿಳಿದಿತ್ತು. ಸ್ವತಃ ೨೦೦–೨೫೦ ಕೀರ್ತನೆಗಳನ್ನು ರಚಿಸಿದ್ದರು. ಇಷ್ಟೆಲ್ಲ ಪ್ರತಿಭೆ ಇದ್ದ ಇವರು ದೊಂಬಿದಾಸರ ಮೇಳ ಕಟ್ಟಿಕೊಂಡು ಊರೂರು ಸುತ್ತುತ್ತಿದ್ದರು. ಒಮ್ಮೆ ದೊಂಬಿದಾಸರ ಬಯಲಾಟ ಮೈಸೂರಿನಲ್ಲಿ ನಡೆಯುತ್ತಿತ್ತು. ಆಕಾಲಕ್ಕೆ ಈ ಭಾಗದಲ್ಲಿ ಖ್ಯಾತಿ ಪಡೆದಿದ್ದ "ಶಾರದಾವಿಲಾಸ ನಾಟಕ ಕಂಪನಿಯ ಮಾಲಿಕರು, ಈ ದಾಸರ ಬಯಲಾಟ ನೋಡುತ್ತಿದ್ದರು. ಆಗ ಗುರುಮೂರ್ತಪ್ಪನವರು ಇವರ ಕಣ್ಣಿಗೆ ಬಿದ್ದರು. ಇಂತಹ ಪ್ರತಿಭಾವಂತ ಮತ್ತು ಸುಂದರ ಕಾಯದ ಯುವಕ ನಮ್ಮ ಕಂಪನಿಗೆ ಬಂದರೆ ಹೇಗೆ? ಎಂದು ಯೋಚಿಸಿ, ಆ ನಾಟಕ ಪೂರ್ತಿ ಮುಗಿಯುವವರೆಗೆ ಕಾದಿದ್ದು, ಶ್ರೀ ಗುರುಮೂರ್ತಪ್ಪನವರನ್ನು ಬೇಟಿ ಮಾಡಿ ತಮ್ಮ ಅಭಿಲಾಷೆ ತಿಳಿಸಿದರು. ಗುರುಮೂರ್ತಪ್ಪನವರು ಶಾರದವಿಲಾಸ ನಾಟಕ ಕಂಪನಿಯಲ್ಲಿ ಕೆಲಸ ಮಾಡಲು ಒಪ್ಪಿದರು. ತಿಂಗಳಿಗೆ ರೂ ೪೦ ಸಂಬಳ ಕೂಡ ನಿಗದಿಯಾಯಿತು. ಇದು ೧೯೨೬–೨೭ನೇ ಸಾಲಿನ ಮಾತು. ಅಲ್ಲಿಂದ ಇವರು ಹಿಂದಿರುಗಿ ನೋಡಲೇ ಇಲ್ಲ. ಈ ನಾಟಕ ಕಂಪನಿಯಲ್ಲಿ ಮೊದಲಿಗೆ ಸ್ತ್ರೀ ಪಾತ್ರಗಳನ್ನು ಅಭಿನಯಿಸುತ್ತಿದ್ದರು, ನಂತರ ರಾಜಪಾರ್ಟುಗಳನ್ನು ನಿರ್ವಹಿಸಲು ಪ್ರಾರಂಭಿಸಿದರು.

ಆ ಕಾಲದಲ್ಲಿ ಖ್ಯಾತರಾಗಿದ್ದ ಮಳವಳ್ಳಿ ಸುಂದರಮ್ಮನವರೂ ಕೂಡ ಈ ಶಾರದಾ ವಿಲಾಸ ಕಂಪನಿಯಲ್ಲಿ ರಾಣಿ ಪಾತ್ರ ನಿರ್ವಹಿಸುತ್ತಿದ್ದರು. ಈ ನಾಟಕ ಕಂಪನಿಯಿಂದ ಮೈಸೂರಿನ ಅರಮನೆಯಲ್ಲಿ 'ಸುಭದ್ರಾಭರಣ' ನಾಟಕ ಇತ್ತು. ಇದರಲ್ಲಿ ಅರ್ಜುನನಾಗಿ ಪಾತ್ರ ಮಾಡಿದ್ದರು. ಗುಬ್ಬಿ ಕಂಪನಿ ಮಾಲೀಕರಾದ ಶ್ರೀ ಗುಬ್ಬಿ ವೀರಣ್ಣನವರು ಈ ನಾಟಕ ನೋಡಲು ಬಂದಿದ್ದರು. ಗುರುಮೂರ್ತಪ್ಪನವರು ಅಭಿನಯಿಸಿದ್ದ ಅರ್ಜುನನ ಪಾತ್ರ ನೋಡಿ ಇವರಿಗೆ ತುಂಬ ಸಂತೋಷವಾಯಿತು. ಆ ಸಂಧರ್ಭದಲ್ಲಿ ವೀರಣ್ಣನವರು ಒಬ್ಬ ಉತ್ತಮ ಕಲಾವಿದನ ಹುಡುಕಾಟದಲ್ಲಿದ್ದರು. ಅವರ ಕಂಪನಿಯಲ್ಲಿದ್ದ ಶ್ರೀ ಪಿ.ಬಿ. ಮಲ್ಲಪ್ಪ ಕಂಪನಿ ಬಿಟ್ಟಿದ್ದರು. ಇವರ ಸ್ಥಾನ ತುಂಬಬಲ್ಲ ಒಬ್ಬ ಕಲಾವಿದನ ಅವಶ್ಯಕತೆ ಇತ್ತು. ನಾಟಕ ಮುಗಿಯುವವರೆಗೂ ಕಾದಿದ್ದು ವೀರಣ್ಣನವರು ಗುರು ಮೂರ್ತಪ್ಪನವರನ್ನು ಮಾತಾಡಿಸಿ ತಮ್ಮ ಕಂಪನಿಗೆ ಬರುವಂತೆ ಆಹ್ವಾನ ನೀಡಿದರು

ಊರಿನ ವಿಳಾಸ ಪಡೆದು, ನಾನೇ ಬಂದು ನಿಮ್ಮ ತಾಯಿಯ ಹತ್ತಿರ ಮಾತಾಡುತ್ತೇನೆ ಎಂದು ಹೇಳಿ ಹೋದರು.

ಮಾತು ಕೊಟ್ಟಂತೆ ವೀರಣ್ಣನವರು ರಾಮನಗರಕ್ಕೆ ಬಂದು (ಹಿಂದೆ ಇದನ್ನು ಕ್ಲೋಸ್‌ಪೇಟೆ ಎಂದು ಕರೆಯುತ್ತಿದ್ದರು) ಅಲ್ಲಿಂದ ಒಂದು ಜಟಕಾ ಗಾಡಿ ಬಾಡಿಗೆಗೆ ಪಡೆದು ಪಕ್ಕದ ಊರಾದ ಬನ್ನಿಕುಪ್ಪೆಗೆ ಬಂದೇ ಬಿಟ್ಟರು. ಇವರ ತಾಯಿಯವರಿಗೆ ಇವನ್ನು ನೋಡಿ ಪರಮಾಶ್ಚರ್ಯ ಮತ್ತು ಅತೀವ ಸಂತೋಷ. ತಾಯಿಯವರ ಜೊತೆ ಮಾತನಾಡಿ ಒಪ್ಪಿಸಿ ತಿಂಗಳಿಗೆ ರೂ ೨೦೦ ಸಂಬಳ ಕೊಡುವುದಾಗಿ ಹೇಳಿ ಸ್ವಲ್ಪ ಮೊತ್ತವನ್ನು ಅಡ್ವಾನ್ಸಾಗಿ ನೀಡಿ ತಾವುಬಂದಿದ್ದ ಕುದುರೆ ಗಾಡಿಯಲ್ಲಿಯೇ ಕೂರಿಸಿಕೊಂಡು ಗುರುಮೂರ್ತಪ್ಪನವರನ್ನು ಕರೆದುಕೊಂಡು ಹೊರಟೇ ಬಿಟ್ಟರು.

ವೀರಣ್ಣನವರ ಕಂಪನಿಯಲ್ಲಿ ಮೊದಲು ಅಭಿನಯಿಸಿದ ನಾಟಕ ಭಕ್ತ ಕಬೀರದಾಸ ಈ ನಾಟಕದ ಮುಖ್ಯಪಾತ್ರದ ಕಬೀರನ ಪಾತ್ರವನ್ನು ಇವರು ಅಭಿನಯಿಸಿದ್ದರು. ಬೆಂಗಳೂರಿನಲ್ಲಿ ಈ ನಾಟಕ ನಡೆಯಿತು. ಕಬೀರನ ಪಾತ್ರದಲ್ಲಿ ಅತ್ಯಂತ ಮನೋಜ್ಞವಾಗಿ ಅಭಿನಯಿಸಿ ಎಲ್ಲರ ಮೆಚ್ಚುಗೆಗೆ ಪಾತ್ರರಾದರು. ಇವರ ಬಾಯಿಂದ ಹೊರಡುತ್ತಿದ್ದ ಛೀಸ್‌ಗಳು, ಶಾಹಿರಿಗಳು ಪ್ರೇಕ್ಷಕರಿಂದ ಚಪ್ಪಾಳೆ ಮತ್ತು ಒನ್ಸ್‌ಮೋರ್ ಮೊಳಗಿಸಿತು. ಇಲ್ಲಿಂದ ಇವರ ವೃತ್ತಿ ಜೀವನವೇ ಬದಲಾಯಿತು. ಈ ಕಂಪನಿಯಲ್ಲಿ ಒಬ್ಬ ಶ್ರೇಷ್ಠ ಕಲಾವಿದರಾಗಿ ರೂಪುಗೊಳ್ಳುತ್ತಾ ಬಂದರು.

ಗುರುಮೂರ್ತಪ್ಪನವರಿಗೆ ಹೆಚ್ಚು ಖ್ಯಾತಿಯನ್ನು ತಂದು ಕೊಟ್ಟ ಪಾತ್ರಗಳೆಂದರೆ ಸತ್ಯಹರಿಶ್ಚಂದ್ರ ನಾಟಕದ ಹರಿಶ್ಚಂದ್ರನ ಪಾತ್ರ ಮತ್ತು ಕುರುಕ್ಷೇತ್ರ ನಾಟಕದ ಕೃಷ್ಣನ ಪಾತ್ರ ಹರಿಶ್ಚಂದ್ರ ನಾಟಕದಲ್ಲಿ ಚಂದ್ರಮತಿಯಾಗಿ ಶ್ರೀವೀರಣ್ಣನವರ ಎರಡನೇ ಪತ್ನಿಯಾಗಿದ್ದ ಶ್ರೀಮತಿ ಸುಂದರಮ್ಮನವರು ಇವರ ಜೊತೆ ಅಭಿನಯಿಸುತ್ತಿದ್ದರು. ಆಕಾಲಕ್ಕೆ ಈ ಜೋಡಿ ಪ್ರಖ್ಯಾತಗೊಂಡಿತ್ತು. ನಾಟಕ ಮುಗಿದ ನಂತರ ಗುರುಮೂರ್ತಪ್ಪನವರು ಶ್ರೀಮತಿ ಸುಂದರಮ್ಮನವರ ಪಾದಕ್ಕೆ ನಮಸ್ಕಾರ ಮಾಡುತ್ತಿದ್ದರಂತೆ, ಅಷ್ಟೊಂದು ಸಂಸ್ಕಾರವಂತರಾಗಿದ್ದರು. ಯಜಮಾನರ ಪತ್ನಿಯ ಜೊತೆ ಪಾತ್ರದಾರಿಯಾಗಿ ಅಭಿನಯಿಸೋದು ಅಂದರೆ ಸಾಮಾನ್ಯವೇ? ಆ ಕಂಪನಿ ಕಲಾವಿದರಿಗೆ ಪ್ರತಿಭೆ ಇದ್ದವರಿಗೆ ಕೊಡುತ್ತಿದ್ದ ಗೌರವ ಮತ್ತು ಮರ್ಯಾದೆ ಎಂತಹದ್ದು ಎಂಬುದು ಗೊತ್ತಾಗುತ್ತೆ.

ಗುಬ್ಬಿ ಕಂಪನಿಯಲ್ಲಿ ಗುರುಮೂರ್ತಪ್ಪನವರ ಜೊತೆ ಇದ್ದ ಕಲಾವಿದರೆಂದರೆ ಶ್ರೀ ನಾಗೇಶ್ವರರಾವ್, ಗಂಗಾಧರರಾವ್, ಸುಬ್ಬರಾವ್, ಕೃಷ್ಣಮೂರ್ತಿ ಬಸವರಾಜಪ್ಪ, ಇವರ ಅಣ್ಣ ಬಿ.ಬಿ. ಕೃಷ್ಣಪ್ಪ ಸುಂದರಮ್ಮನವರ ಮಗಳು ಸ್ವರ್ಣ ಹೀಗೆ ಹಲವಾರು ಹಿರಿಯ ಕಿರಿಯ ಕಲಾವಿದರು ಇವರ ಒಡನಾಡಿಗಳಾಗಿದ್ದರು. ಸತತವಾಗಿ ೧೫ವರ್ಷಗಳ ಕಾಲ ಈ ಕಂಪನಿ ಪ್ರದರ್ಶಿಸಿದ ಕುರುಕ್ಷೇತ್ರ ನಾಟಕದ ಕೃಷ್ಣನ ಪಾತ್ರವನ್ನು ಇವರೊಬ್ಬರೆ ಅಭಿನಯಿಸಿದ್ದು ಇವರ ಶ್ರೇಷ್ಠತೆಗೆ ಮತ್ತೊಂದು ಗರಿ. ಇವರು ಅಭಿನಯಿಸಿದ ಮತ್ತಿತರ ಪಾತ್ರಗಳೆಂದರೆ ಶಿವಾಜಿ, ಭಕ್ತ ಕಬೀರ, ರಾಜವಿಕ್ರಮ, ಕೃಷ್ಣ, ಅರ್ಜುನ, ತುಕಾರಾಮ,

ಹರಿಶ್ಚಂದ್ರ ಇತ್ಯಾದಿ. ಆಂಧ್ರ ಪ್ರದೇಶದಲ್ಲಿ ಇವರು ಹೆಚ್ಚು ಪ್ರಸಿದ್ಧರು. ಅಲ್ಲಿಯು ಕೆಲ ನಾಟಕಗಳಲ್ಲಿ ಪಾತ್ರಮಾಡಿ ಹೆಸರುವಾಸಿಯಾಗಿದ್ದರು. ರಾಜಮಹೇಂದ್ರ ಎಂಬುವವರು ಆಂಧ್ರದಲ್ಲಿ ಇವರನ್ನು ಸನ್ಮಾನಿಸಿದ್ದರು.

ಪ್ರಶಸ್ತಿಗಳು

ಇವರಿಗೆ ಹತ್ತು ಹಲವು ನಾಗರೀಕ ಸನ್ಮಾನಗಳು ಮತ್ತು ಪ್ರಶಸ್ತಿಗಳು ದೊರೆತಿವೆ. ಕರ್ನಾಟಕ ಸರ್ಕಾರ ಅಂದಿನ ಮುಖ್ಯಮಂತ್ರಿಗಳಾಗಿದ್ದ ಶ್ರೀ ವೀರೇಂದ್ರ ಪಾಟೀಲರು ಇವರಿಗೆ ರಾಜ್ಯ ನಾಟಕ ಪ್ರಶಸ್ತಿ ನೀಡಿ ಗೌರವಿಸಿದ್ದರು. ಆಂಧ್ರ ಪ್ರದೇಶದ ಒಬ್ಬ ಮಹಾರಾಜರು ಇವರು ಅಭಿನಯಿಸಿದ್ದ ಸತ್ಯಹರಿಶ್ಚಂದ್ರ ನಾಟಕದ ಪಾತ್ರನೋಡಿ ಇವರಿಗೆ ಬಂಗಾರದ ಪದಕ ಮತ್ತು ವಿದ್ಯಾಪುರ ಪ್ರಶಸ್ತಿ ನೀಡಿ ಗೌರವಿಸಿದ್ದರು.

೧೯೭೦ರಲ್ಲಿ ಇವರು ತಮ್ಮ ಕಲಾಜೀವನದಿಂದ ನಿವೃತ್ತಿ ಹೊಂದಿದರು. ಆಗ ಇವರ ವಯಸ್ಸು ೫೮–೬೦ ವರ್ಷ. ಹೆಚ್ಚು ಕಡಿಮೆ ೨೦–೨೫ ವರ್ಷಗಳ ಕಾಲ ಗುಬ್ಬಿ ಕಂಪನಿಯಲ್ಲಿಯೇ ಕಳೆದರು. ೬೦ ವರ್ಷಗಳ ತುಂಬು ಜೀವನ ನಡೆಸಿದ್ದರು. ಇವರಿಗೆ ಸಿಹಿ ತಿಂಡಿ ಎಂದರೆ ತುಂಬ ಪ್ರಿಯ. ಆ ಕಾಲದಲ್ಲಿ ರಾಮನಗರದಲ್ಲಿದ್ದ ಜನಾರ್ದನಯ್ಯನವರ ಅಂಗಡಿಯಲ್ಲಿ ತಯಾರಿಸುತ್ತಿದ್ದ ಮೈಸೂರು ಪಾಕ್ ತುಂಬ ಪ್ರಿಯವಾದ ತಿನಿಸು. ದಾಸ ಸಮುದಾಯದ ಒಬ್ಬ ಅಪ್ರತಿಮ ಕಲಾವಿದ ಕರ್ನಾಟಕದ ಕಲಾ ಪ್ರಪಂಚದಲ್ಲಿ ತನ್ನ ಛಾಪನ್ನು ಮೂಡಿಸಿ ಇತಿಹಾಸ ನಿರ್ಮಿಸಿ ತುಂಬು ಜೀವನ ನಡೆಸಿ ಕಾಲನ ವಶವಾದರು (ಮಾಹಿತಿ ನೀಡಿದವರು: ಬಿ ಜಿ ಶ್ರೀನಿವಾಸಯ್ಯ ಇವರು ಶ್ರೀ ಗುರುಮೂರ್ತಪ್ಪನವರ ಪುತ್ರ).

ಕಾಕೋಳು ರಾಮಯ್ಯ

ಶ್ರೀಯುತ ಕಾಕೋಳು ರಾಮಯ್ಯನವರು ಹುಟ್ಟಿದ್ದು ೦೭–೦೮–೧೯೪೭ರಲ್ಲಿ ತಂದೆ ಶ್ರೀ ಬಿ ಎಂ ಕೃಷ್ಣಪ್ಪ ತಾಯಿ ಶ್ರೀಮತಿ ವೆಂಕಟಮ್ಮ ಹಿರಿಯರು ವಾಸಿಸುತ್ತಿದ್ದುದು ರಾಮನಗರದ ಬಳಿಯಿರುವ ಬನ್ನಿಕುಪ್ಪೆ. ನಾಟಕ ಕಲೆಯೇ ಉಸಿರಾಗಿದ್ದ ದೊಂಬಿದಾಸರ ಜಾತಿಯಲ್ಲಿ ಹುಟ್ಟಿದ ಶ್ರೀಯುತರಿಗೆ, ನಾಟಕ ಕಲೆ ರಕ್ತಗತವಾಗಿ ಬಂದದ್ದು. ಹುಟ್ಟಿದ್ದು ಅಮ್ಮತೂರಾದರೂ, ಪ್ರೈಮರಿ ಎರಡನೆಯ ತರಗತಿಯವರೆಗೆ ವಿಧ್ಯಾಭ್ಯಾಸ ನಡೆದದ್ದು ಮದ್ದೂರಿನ ಬಳಿಯ ಬೆಸಗರಹಳ್ಳಿಯಲ್ಲಿ, ನಂತರ ತಲುಪಿದ್ದು ಮೈಸೂರು ಅಲ್ಲಿ ಆಗಿನ ಲೋಯರ್ ಸೆಕೆಂಡರಿ ಓದುತ್ತಿದ್ದಾಗ, ೧೯೬೦ರಲ್ಲಿ 'ಗಯಚರಿತ್ರೆ' ಎಂಬ ಪೌರಾಣಿಕ ನಾಟಕದಲ್ಲಿ 'ಗಯನ ಪಾತ್ರದ ಮೂಲಕ ರಂಗಪ್ರವೇಶವಾಯಿತು.

ನಂತರ ಮೈಸೂರಿನ ಥರ್ಡ್‌ಇನ್‌ಫೆಂಟ್ರಿ ಮಿಡಲ್‌ಸ್ಕೂಲಿನ ವ್ಯಾಸಂಗ ಮುಗಿಸಿ, ಹೆಸರಘಟ್ಟದ ಬಳಿಯಿರುವ ಬಾಪು ವಿವಿದೋದ್ದೇಶ ಪ್ರೌಢಶಾಲೆಯಲ್ಲಿ ಎಸ್‌ಎಸ್‌ಎಲ್‌ಸಿ ವರೆಗೆ ಓದು ಮುಗಿಸಿದರು. ಹೈಸ್ಕೂಲಿನಲ್ಲೇ ಮೂರ್ತಿಯವರ 'ಗಂಡಸಲ್ವೇಗಂಡ್ಸು' ನಾಟಕವನ್ನು ನಿರ್ದೇಶಿಸಿ ಜೊತೆಗೆ 'ಬೆಳವಾಡಿ ಮಲ್ಲಮ್ಮ' ನಾಟಕದಲ್ಲಿ ಹಾಸ್ಯಪಾತ್ರ ನಿರ್ವಹಿಸಿ ಭೇಷ್ ಎನಿಸಿಕೊಂಡರು. ನಂತರ ಐ.ಟಿ.ಐ ಓದಲು ಮರಳಿ ಮೈಸೂರು

ಸೇರಿದ ಮೇಲೆ ಮೈಸೂರಿನ ಬೇರೆ ಬೇರೆ ಕಲಾಸಂಘಗಳಲ್ಲಿ ಹಾಸ್ಯ ಪಾತ್ರಗಳನ್ನು ನಿರ್ವಹಿಸಿದರು. ಮುಖ್ಯವಾಗಿ, ಶ್ರೀರಾಮ ಸಂಜೀವಯ್ಯನವರ ಹೆಣ್ಣು ಹೊನ್ನು ಮಣ್ಣು, ಪರಿವರ್ತನೆ ಮುಂತಾದವು ಶ್ರೀಯುತರನ್ನು ನಟರನ್ನಾಗಿ ರೂಪಿಸಿದ ನಾಟಕಗಳು.

೧೯೬೦ರಲ್ಲಿ ಬೆಂಗಳೂರಿನ ಬೆಂಗಳೂರು ಡೈರಿಯಲ್ಲಿ ಕೆಲಸಕ್ಕೆ ಸೇರಿ. ಅಲ್ಲಿನ ಕನ್ನಡ ಕಲಾಸಂಘ ಸ್ಥಾಪಿಸಿದರು, ಕಾರ್ಮಿಕ ಸಂಘ ಕಟ್ಟಿದರು. ನಂತರ, ಸೇಡಿನಬಲೆ, ಮೂಗನ ಬಾಳು, ರಾಜ್ಯದಾಹ, ದುರಂತ, ಅವನು ತಂದ ಅದೃಷ್ಟ, ನಾಗರನಂಜು, ಮುಂತಾಗಿ ಹದಿಮೂರು ನಾಟಕಗಳನ್ನು ರಚಿಸಿ, ನಿರ್ದೇಶಿಸಿ, ರವೀಂದ್ರಕಲಾಕ್ಷೇತ್ರ, ಟೌನ್ ಹಾಲ್, ಹಿರಣ್ಣಯ್ಯ ಮಿತ್ರಮಂಡಳಿಗಳಲ್ಲಿ ಪ್ರದರ್ಶಿಸಿದರು. ಪ್ರಕಟವಾಗಿರುವ ನಾಟಕಗಳು ಎರಡು, ರಾಜ್ಯದಾಹ ಮತ್ತು ನಾಗರನಂಜು. ಈ ಎರಡು ನಾಟಕಗಳೂ ಕರ್ನಾಟಕದ ತುಂಬಾ ಪ್ರದರ್ಶಿತಗೊಂಡು ಪ್ರಸಿದ್ಧಗೊಂಡಿವೆ.

ನಂತರ ಪತ್ತೇದಾರಿ ಕಾದಂಬರಿಗಳ ರಚನೆಗೆ ತೊಡಗಿದ ಇವರು ಇದುವರೆಗೂ ಸುಮಾರು ಇನ್ನೂರು ಕಾದಂಬರಿಗಳನ್ನು ರಚಿಸಿದ್ದಾರೆ. ಸ್ಪೈ, ನಿಗೂಢ ಕ್ರೈಂ, ಕ್ರೈಂ ಕಾದಂಬರಿ ಮುಂತಾದ ಪತ್ತೇದಾರಿ ಮಾಸಪತ್ರಿಕೆಗಳಲ್ಲೂ ಹಲವಾರು ಕಾದಂಬರಿಗಳು ಪ್ರಕಟವಾಗಿ ಜನಪ್ರಿಯಗೊಂಡಿವೆ.

ಆಡಿಯಿಟ್ಟರೆ ಅಪಾಯ ಇವರ ಮೊದಲ ಕಾದಂಬರಿ ನಂತರ ಬಂದ, ಕಣ್ಣ ಹಿಂದಿನ ಕಣ್ಣು, ಮಾಯವಾದ ಗೋಲಿ, ಚಾಣಕ್ಯನ ಚಾತುರ್ಯ, ರಹಸ್ಯ ನಿಧಿ, ರಹಸ್ಯ ದ್ವೀಪ, ಅಪಾಯ ಅಪಾಯ ಅಪಾಯ, ಮುಂತಾದವು ಹಲವಾರು ಭಾರಿ ಮರು ಮುದ್ರಣಗೊಂಡಿವೆ.

ನಂತರ ಟಿವಿ ಧಾರವಾಹಿಗಳಿಗೆ ಕಥೆ-ಚಿತ್ರಕಥೆ ಸಂಭಾಷಣೆ, ಹಾಡುಗಳನ್ನು ಬರೆದಿರುವ ಇವರು ಸುಮಾರು ೮೦ಕ್ಕೂ ಹೆಚ್ಚು ಧಾರವಾಹಿಗಳಿಗೆ ಕಥೆ-ಚಿತ್ರಕಥೆ-ಸಂಭಾಷಣೆ ರಚಿಸಿ ಅಷ್ಟೇ ಧಾರವಾಹಿಗಳಲ್ಲಿ, ಹಾಸ್ಯ, ಖಳನಾಯಕ, ಪೋಷಕ ಪಾತ್ರಗಳಲ್ಲಿ ನಟಿಸಿದ್ದಾರೆ ಅವುಗಳಲ್ಲಿ ಕಥಾವ್ಯಕ್ತಿ, ಕಿನ್ನರಜೋಗಿ, ಪ್ರಾಣಿಪ್ರಪಂಚ, ಹಾಗೂ ಕರ್ನಾಟಕ ಖಾದಿ ಮತ್ತು ಗ್ರಾಮೋದ್ಯೋಗ ಮಂಡಳಿ ಮತ್ತು ಕರ್ನಾಟಕ ವಾರ್ತಾ ಮತ್ತು ಪ್ರಚಾರ ಇಲಾಖೆಗೆ ಬರೆದ ಹಲವಾರು ಕಥಾ ಚಿತ್ರಗಳು ಹೆಸರುಗಳಿಸಿದವು.

ಇವರು ಪದ್ಮವ್ಯೂಹ, ಆರ್ತನಾದ, ಹೋರಾಟ, ಹೆಣ್ಣು ಬಾಳಿನ ಕಣ್ಣು ಮುಂತಾದ ಹತ್ತು ಕಥಾ ಟೆಲಿಚಿತ್ರಗಳನ್ನು ನಿರ್ದೇಶಿಸಿದ್ದಾರೆ.

ಕರ್ನಾಟಕದ ಹಲವಾರು ಸಂಘ ಸಂಸ್ಥೆಗಳಿಂದ ಸನ್ಮಾನಿತರಾಗಿರುವ ಶ್ರೀಯುತರು, ಬೆಂಗಳೂರಿನ ಪ್ರತಿಷ್ಠಿತ ಬಡಾವಣೆ, ಕೋರಮಂಗಳ ವಾರ್ಡ್‌ನ ೨೦೦೬-೨೦೦೭ರ ಅವಧಿಗೆ ನೀಡಿದ 'ಕೆಂಪೇಗೌಡ ಪ್ರಶಸ್ತಿ' ಯಿಂದ ಪುರಸ್ಕೃತರಾಗಿದ್ದಾರೆ.

ಇವರು, ಸಧ್ಯಕ್ಕೆ ಅವರ ಮಹತ್ವಾಕಾಂಕ್ಷೆಯ ಪೌರಾಣಿಕ ನಾಟಕ 'ಶಕುನಿ' ಮತ್ತು ದೊಂಬಿದಾಸ "ಮರುಗು" ಭಾಷೆಯ ಬಗ್ಗೆ ವಿಶೇಷ ಆಸಕ್ತಿ ಇದ್ದು ಇದನ್ನು ಗ್ರಂಥ ರೂಪದಲ್ಲಿ ತರುವ ಮಹತ್ವಾಕಾಂಕ್ಷೆಯುಳ್ಳವರಾಗಿದ್ದಾರೆ.

**ಚಿಮ್ಮನಹಳ್ಳಿ ವೆಂಕಟಪ್ಪ**

೧೯೯೬ನೇ ಸಾಲಿನ ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡಮಿ ಪ್ರಶಸ್ತಿ ಪುರಸ್ಕೃತರು. ದೊಂಬಿದಾಸರ ಪದಗಳ ಗಾಯನಕ್ಕೆ ಸಂದ ಗೌರವ ಪ್ರಶಸ್ತಿ. ೮೦ ವರ್ಷ ತುಂಬಿರುವ ಈ ಜಾನಪದ ಕೋಗಿಲೆ, ಹುಟ್ಟಿದ್ದು ತುಮಕೂರು ಜಿಲ್ಲೆ ತುರುವೆ ಕೆರೆ ತಾಲ್ಲೂಕು ಚಿಮ್ಮನಹಳ್ಳಿಯಲ್ಲಿ. ಹಾಡುವಕಲೆ ಇವರಿಗೆ ರಕ್ತಗತವಾಗಿ ಬಂದಿದೆ. ನಿಮಗೆ ಗುರುಗಳು ಯಾರು ಅಂದ್ರೆ ಅವರಿಂದ ಬರುವ ಉತ್ತರ ತಂದೆ–ತಾಯಿ ಅಂತ. ತಮ್ಮ ಪಾರಂಪರಿಕ ಕಸುಬಾದ ಭಿಕ್ಷಾಟನೆ ಮತ್ತು ಬಯಲಾಟಗಳು ಅಂದಿನ ಕಾಲದಲ್ಲಿ ಅನಿವಾರ್ಯವಾಗಿದ್ದು. ಬಾಲ್ಯದಲ್ಲಿ ತಮ್ಮ ತಂದೆ–ತಾಯಿಂದಿರ ಜೊತೆ ಹಿರಿಯರ ಜೊತೆ ಊರೂರು ಸುತ್ತುತ್ತಾ, ಅವರ ಮುಮ್ಮೇಳಕ್ಕೆ ಇವರ ಹಿಮ್ಮೇಳದ ಸೊಲ್ಲು ಸೇರಿ, ಅಸಂಖ್ಯಾತ ಹಾಡುಗಳು ಇವರ ತಲೆಯೊಳಗೆ ಮುದ್ರಿತಗೊಂಡವು. ಆ ಕಾಲದಲ್ಲಿ ಅವರ ಸಮೀಪದ ಬಂದುಗಳಾಗಿದ್ದ ಅರಕಾರನಹಳ್ಳೀ ರಂಗಪ್ಪ ಚಿಮ್ಮನಹಳ್ಳೀ ಹುಚ್ಚಪ್ಪ – ಗುಂಡಪ್ಪರಂತ ಖ್ಯಾತ ಹಾಡುಗಾರರು ಮತ್ತು ಬಯಲಾಟದ ಕಲಾವಿದರು ಇವರಿಗೆ ಮಾರ್ಗದರ್ಶಕರಾಗಿದ್ದರು. ಹುಚ್ಚಪ್ಪ ಗುಂಡಪ್ಪ ಸಹೋದರರು 'ಶನಿದೇವರ ನಾಟಕ ತಂಡ' ಎಂಬ ತಂಡ ಕಟ್ಟಿ ಊರೂರಲ್ಲಿ ಬಯಲಾಟಗಳನ್ನು ಪ್ರದರ್ಶಿಸುತ್ತಿದ್ದರು. ಶ್ರೀ ವೆಂಕಟಪ್ಪನವರು ಈ ತಂಡದ ಒಬ್ಬ ಪ್ರಮುಖ ನಟರಾಗಿ ಸ್ತ್ರೀಪಾತ್ರಗಳಲ್ಲಿ ಹೆಚ್ಚು ಅಭಿನಯಿಸುತ್ತಿದ್ದರು.

ಕುಣಿಗಲ್ ತಾಲ್ಲೂಕು ನಾರನಹಳ್ಳಿ ಮುನಿವೆಂಕಟಪ್ಪನವರ ಮಗಳು ಗಂಗಮ್ಮನವರನ್ನು ಮದುವೆಯಾದ ನಂತರ ಇವರು ಜೋಡಿ ಹಕ್ಕಿಗಳಾಗಿ ಏಕತಾರಿ ಮೀಟುತ್ತಾ ಅಸಂಖ್ಯಾತ ಲಾವಣಿಗಳನ್ನು ನೂರಾರು ತತ್ವಪದಗಳನ್ನು ಹಾಡಿದ್ದಾರೆ.

ಜೀಶಂಪ ರವರು ಸಂಗ್ರಹಿಸಿರುವ ದೊಂಬಿದಾಸರ ಲಾವಣಿಗಳ ಸಂಗ್ರಹದಲ್ಲಿರುವ ಬಹಳಷ್ಟು ಹಾಡುಗಳನ್ನು ವೆಂಕಟಪ್ಪನವರು ಹಾಡಿದ್ದಾರೆ. ಜೀಶಂಪ ರವರು ತಮ್ಮ ಕೃತಿಯಲ್ಲಿ ಇವರನ್ನು ಸ್ಮರಿಸಿದ್ದಾರೆ. ವೆಂಕಪಟ್ಟನವರು ಹೇಳುವಂತೆ, ಗಂಗೆ–ಗೌರಿ, ಬಾಲನಾಗಮ್ಮ ಮಾಗಡಿ ಕೆಂಪೇಗೌಡ, ಬಂಜೆ ಹೊನ್ನಮ್ಮ, ಅಣ್ಣ–ತಂಗಿ, ಅತ್ತೆ–ಸೊಸೆ ಮುಂತಾದವುಗಳನ್ನು ಜೀಶಂಪ ಇವರಿಂದ ಸಂಗ್ರಹಿಸಿದ್ದಾರೆ. ಶ್ರೀಮತಿ ಗಂಗಮ್ಮನವರು ಇವರಿಗೆ ಜೊತೆ ನೀಡಿದ್ದಾರೆ.

ಇವರ ಪ್ರತಿಭೆಗೆ ಮನಸೋತ, ಜೀಶಂಪ, ಡಾ ಎಸ್ ಕೆ ಕರೀಂಖಾನ್, ಡಾ ಎಚ್ ಎಲ್ ನಾಗೇಗೌಡರಂತ ಜಾನಪದ ವಿದ್ವಾಂಸರು ಇವರ ಬೆನ್ನುತಟ್ಟಿ ಪ್ರೋತ್ಸಾಹಿಸಿದ್ದಾರೆ. ಅನೇಕ ಜಿಲ್ಲಾ ಮತ್ತು ರಾಜ್ಯಮಟ್ಟದ ಸಭೆ ಸಮಾರಂಭದಲ್ಲಿ ಇವರಿಗೆ ಕಾರ್ಯಕ್ರಮ ನೀಡಲು ಅವಕಾಶ ನೀಡಿದ್ದಾರೆ.

**ರಾಜ್ಯಮಟ್ಟದ ಪ್ರಮುಖ ಕಾರ್ಯಕ್ರಮಗಳು**

೧) ೧೯೯೨ನೇ ಸಾಲಿನಲ್ಲಿ ನಡೆದ ೨೩ನೇ ಅಂತರ ರಾಷ್ಟ್ರೀಯ ಚಲನಚಿತ್ರೋತ್ಸವ ಕಾರ್ಯಕ್ರಮದಲ್ಲಿ ನಡೆದ ಸಂಸ್ಕೃತಿ ಸಂಕ್ರಾಂತಿ ಕಾರ್ಯಕ್ರಮದಲ್ಲಿ ಭಾಗವಹಿಸಿ ಪ್ರದರ್ಶನ ನೀಡಿದ್ದಾರೆ.

೨) ಕರ್ನಾಟಕ ಜಾನಪದ ಟ್ರಸ್ಟ್ – ಬೆಂಗಳೂರು ವತಿಯಿಂದ ೯ ದಿನಗಳ ಕಲಾಪ್ರದರ್ಶನದಲ್ಲಿ ಭಾಗವಹಿಸಿ ಕಾರ್ಯಕ್ರಮ ನೀಡಿದ್ದಾರೆ.

೩) ಆದಿಚುಂಚನಗಿರಿಯಲ್ಲಿ ನಡೆದ ವೃತ್ತಿ ಗಾಯಕರ ಸಮ್ಮೇಳನದಲ್ಲಿ ಭಾಗವಹಿಸಿ ತಮ್ಮ ಗಾಯನ ಪ್ರದರ್ಶನ ನೀಡಿದ್ದಾರೆ.

ಜೀವನ ನಿರ್ವಹಣೆಗೆ ಕುಟುಂಬವೇ ಒಂದು ತಂಡವಾಗಿ ಗಾಯನ ಕಾರ್ಯಕ್ರಮ ನೀಡುತ್ತಿತ್ತು. ಹೆಂಡತಿ ಗಂಗಮ್ಮ ಹಿರಿಯ ಮಗ ರೇವಣ್ಣ ಸೊಸೆ ತಂಡದಲಿರುತ್ತಿದ್ದರು.

ಪ್ರಶಸ್ತಿಗಳು

ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡಮಿ ಪ್ರಶಸ್ತಿ –೧೯೮೯. ಎಚ್ ಎಲ್ ನಾಗೇಗೌಡರ ಜಾನಪದ ಟ್ರಸ್ಟ್ – ಪ್ರಶಸ್ತಿ ಪ್ರಮುಖವಾದವು. ಸ್ಥಳೀಯವಾಗಿ ಹತ್ತು ಹಲವು ಪ್ರಶಸ್ತಿಗಳು ಇವರನ್ನು ಹರಸಿ ಬಂದಿವೆ.

ಎಚ್ ಎಲ್ ನಾಗೇಗೌಡರ ಪ್ರಯತ್ನದಿಂದಾಗಿ ಒಮ್ಮೆ ಇವರಿಗೆ ಅಮೇರಿಕಕ್ಕೆ ವಿಮಾನದಲ್ಲಿ ಹಾರುವ ಅವಕಾಶ ಕೂಡ ಇತ್ತು. ಆದರೆ ಇವರ ಹೆಂಡತಿಯವರ ಅನಾರೋಗ್ಯ ನಿಮಿತ್ತ ಈ ಅವಕಾಶ ತಪ್ಪಿತು. ಈ ಕೊರಗು ಈಗಲೂ ವೆಂಕಟಪ್ಪನವರನ್ನು ಕಾಡುತ್ತಿದೆ. ಈಗ ಇವರ ಪಾರಂಪರಿಕ ಕಸುಬಾದ ಹಾಡುಗಾರಿಕೆ ಮರೆಯಾಗುತ್ತಿದೆ. ಇವರ ಜೀವನ ನಿರ್ವಹಣೆಗಾಗಿ ಬಳೆವ್ಯಾಪಾರ ಮತ್ತು ಕೂಲಿಯನ್ನು ಆಶ್ರಯಿಸಿ ಕೊಂಡಿದ್ದಾರೆ. ವೆಂಕಟಪ್ಪನವರು ಈಗ ಅನಾರೋಗ್ಯದಿಂದ ಬಳಲುತ್ತಿದ್ದಾರೆ.

ತಮಗೆಬಂದ ಪ್ರಶಸ್ತಿ ಸನ್ಮಾನಪತ್ರಗಳನ್ನು ಸಂರಕ್ಷಿಸಲು ಒಂದು ಸರಿಯಾದ ವ್ಯವಸ್ಥೆ ಕೂಡ ಇಲ್ಲ. ಕಲಾವಿದರ ಬದುಕೇ ಹಾಗೆ. ಆದರೂ ಇವರು ಇದ್ದದ್ದರಲ್ಲೆ ನೆಮ್ಮದಿ ಕಾಣುತ್ತಿದ್ದಾರೆ. ಎಲ್ಲಾ ಬವಣೆಗಳನ್ನು ಒಡಲೊಳಗೆ ತುಂಬಿಕೊಂಡಿದ್ದರೂ ನನಗೇನೂ ತೊಂದರೆ ಇಲ್ಲ ದೇವರು ಚನ್ನಾಗಿಟ್ಟಿದ್ದಾನೆ ಎಂಬ ನೆಮ್ಮದಿಯ ಮಾತನಾಡುತ್ತಾರೆ. ಇವರ ಜನ್ಮಕ್ಕೆ ಅಂಟಿಕೊಂಡಂತ್ತಿರುವ ನೂರಾರು ಲಾವಣಿಗಳು, ತತ್ವಪದಗಳು ಮೌಖಿಕವಾಗಿದ್ದು ಅವುಗಳನ್ನು ಅಕ್ಷರ ರೂಪಕ್ಕೆ ತರುವ ಕೆಲಸ ಆಗಬೇಕಿದೆ. ಅವರ ನಂತರ ಈ ಮೌಖಿಕ ಪರಂಪರೆಯ ಜ್ಞಾನ ಭಂಡಾರ ನಾಶವಾಗುವ ಅಪಾಯವಿದೆ.

ಈ ತರಹದ ಎಲೆ ಮರೆಯ ಕಾಯಿಂತಹ ಅಸಂಖ್ಯಾತ ಕಲಾವಿದರು ಈ ಸಮುದಾಯದಲ್ಲಿದ್ದಾರೆ. ಒಟ್ಟಿನಲ್ಲಿ ಸಾಂಸ್ಕೃತಿಕವಾಗಿ ಶ್ರೀಮಂತವಾದ ಸಮುದಾಯ ಇದಾಗಿದೆ.

## ೧೦

# ಸಮಸ್ಯೆ ಸಂಘಟನೆ ಪರಿಹಾರ

### ಸಾಮಾಜಿಕ ಸುಧಾರಣೆ ಮತ್ತು ಕಲ್ಯಾಣ

ತನ್ನ ಬದುಕನ್ನೆಲ್ಲಾ ಸಮಾಜದ ಸ್ವಾಸ್ಥ್ಯ ಕಾಪಾಡಲು ಮುಡುಪಾಗಿಟ್ಟ ಸಮುದಾಯದ ಬದುಕು ಮಾತ್ರ ಅತಂತ್ರ ಸ್ಥಿತಿಯಲ್ಲಿದೆ. ಈ ದಿಕ್ಕೆಟ್ಟ ಸಮಾಜವನ್ನು ಸುಧಾರಣೆ ಮಾಡುವ ಅಭಿವೃದ್ಧಿಗೆ ಪೂರಕವಾದ ಕಲ್ಯಾಣ ಕಾರ್ಯಕ್ರಮಗಳನ್ನು ರೂಪಿಸಿ ಕೊಂಡಿರುವ ಒಂದೇ ಒಂದು ಸಾಮಾಜಿಕ ಕಳಕಳಿಯುಳ್ಳ ಸಂಸ್ಥೆ ದೊಂಬಿದಾಸರಲ್ಲಿ ಕಾಣಸಿಗುವುದಿಲ್ಲವೆಂದೆ ಹೇಳಬೇಕು.

ಒಟ್ಟು ದೊಂಬಿದಾಸ ಸಮುದಾಯವನ್ನು ಸುಧಾರಿಸುವ ನಿಟ್ಟಿನಲ್ಲಿ ಯಾವ ಸಾಮಾಜಿಕ ಸಂಘಟನೆಗಳು ಪ್ರಯತ್ನಿಸಿರುವ ಉದಾಹರಣೆಗಳು ಇಲ್ಲ ಎಂದೇ ಹೇಳಬೇಕು. ಸಮುದಾಯಗಳ ಹೆಸರಿನಲ್ಲಿ ಅಲ್ಲಲ್ಲಿ ಸ್ವಲ್ಪ ಪ್ರಜ್ಞಾವಂತರಾದ ಹಿರಿಯರು ಮತ್ತು ಯುವಕರು ಸೇರಿಕೊಂಡು ರಚಿಸಿಕೊಂಡ ಕೆಲವು ಸಂಘಟನೆಗಳು ಈಗ ಅಸ್ತಿತ್ವದಲ್ಲಿವೆ. ಅವುಗಳಲ್ಲಿ ಪ್ರಮುಖವಾದವುಗಳೆಂದರೆ

1. ಕರ್ನಾಟಕ ದೊಂಬಿದಾಸರ ಕ್ಷೇಮಾಭಿವೃದ್ಧಿ ಸಂಘ (ರಿ) ಬೆಂಗಳೂರು
2. ಕರ್ನಾಟಕ ರಾಜ್ಯ ಅಲೆಮಾರಿ ಅರೆ ಅಲೆಮಾರಿ ಸಮುದಾಯಗಳ ಒಕ್ಕೂಟ (ರಿ) ಬೆಂಗಳೂರು

ಇವು ಪ್ರಮುಖವಾಗಿ ದೊಂಬಿದಾಸ ಸಮುದಾಯವನ್ನು ರಾಜ್ಯ ಮಟ್ಟದಲ್ಲಿ ಪ್ರತಿನಿಧಿಸುವ ಸಂಘಟನೆಯಾಗಿದೆ.

ಈ ಹೆಸರುಗಳಿಂದಲೇ ಗುರುತಿಸಿಕೊಳ್ಳುವ ಹಲವು ಜಿಲ್ಲಾ ಮಟ್ಟದ ಮತ್ತು ತಾಲ್ಲೂಕು ಮಟ್ಟದ ಸಂಘಗಳು, ಯುವಕ ಸಂಘಗಳು ಮತ್ತು ಸಾಂಸ್ಕೃತಿಕ ಚಟುವಟಿಕೆಗಳಿಗೆ ಮೀಸಲಾದ ಕೆಲವು ಸಂಘಟನೆಗಳು ರಾಜ್ಯಾದ್ಯಂತ ಅಸ್ತಿತ್ವದಲ್ಲಿವೆ.

ಸಮುದಾಯವನ್ನು ಸಂಘಟಿಸಿ ಎಚ್ಚರಿಸಿ ತಮಗೆ ನ್ಯಾಯದೊರಕಿಸಿಕೊಳ್ಳಲು ಹುಟ್ಟಿಕೊಂಡಿರುವ ಈ ಸಂಘಟನೆಗಳು ಸರಿಯಾದ ಸಹಕಾರ ಪ್ರೋತ್ಸಾಹ ಮತ್ತು ಸಂಘಟನಾತ್ಮಕ ಕೊರತೆಗಳಿಂದಾಗಿ ಗಟ್ಟಿಧ್ವನಿಯಾಗಿ ಹೊರ ಹೊಮ್ಮಲಾಗಿಲ್ಲ. ಆದರೂ ತನ್ನ ಮಿತಿಯೊಳಗೆ ಕಾರ್ಯಪ್ರವೃತ್ತವಾಗಿವೆ.

ಈ ಸಂಘಟನೆಗಳಿಗೆ ಧಾರ್ಮಿಕ ಸಂಸ್ಥೆಯ ಹಿನ್ನಲೆಯಾಗಲಿ ರಾಜಕೀಯ

ಕ್ಷೇತ್ರದ ಬೆಂಬಲವಾಗಲಿ ಇಲ್ಲದಿರುವುದೇ ಹಿನ್ನಡೆಗೆ ಕಾರಣವೆನ್ನಬಹುದು. ಈ ಹಿನ್ನೆಲೆಯಲ್ಲಿ ಯಾವುದೇ ಸಾಮಾಜಿಕ ಸುಧಾರಣೆಯಾಗಲಿ, ಸಮಾಜವನ್ನು ಉದ್ಧರಿಸುವ ಕಲ್ಯಾಣ ಕಾರ್ಯಗಳಾಗಲಿ ಈ ಸಮುದಾಯದ ಅಭಿವೃದ್ಧಿಗಾಗಿ ರೂಪಗೊಂಡಿಲ್ಲ.

ಮೂಲತಃ ದೊಂಬಿದಾಸ, ಚೆನ್ನದಾಸ ಎರಡೂ ಒಂದೇ ಸಮುದಾಯಗಳು. ಚನ್ನದಾಸರಲ್ಲಿರುವ ಬೆಡಗು ಆಚರಣೆ ಮುಂತಾದವುಗಳು ದೊಂಬಿದಾಸರಲ್ಲಿ ಕಾಣಬಹುದು. ಎಷ್ಟೋ ಕಡೆ ಚನ್ನದಾಸರಿಗೂ ದೊಂಬಿದಾಸರಿಗೂ ವೈವಾಹಿಕ ಸಂಬಂಧಗಳು ಏರ್ಪಟ್ಟಿವೆ. ಪ್ರಾದೇಶಿಕ ಕಾರಣಕ್ಕಾಗಿ ಚನ್ನದಾಸ, ದೊಂಬಿದಾಸರಿಗೆ ದೊರೆಯುವ ಮೀಸಲಾತಿ ಮುಂತಾದ ಸೌಲಭ್ಯಗಳು ದೊಂಬಿದಾಸರಿಗೂ ದೊರೆಯುವಂತಾಗಬೇಕು.

* ಇನ್ನು ಗುಡಾರಗಳಲ್ಲಿ ಜೀವಿಸುವ ದೊಂಬಿದಾಸರಿಗೆ ಸರ್ಕಾರ ಮನೆಗಳು ದೊರೆಯಬೇಕು.

* ಇವರ ನಾಟಕ ತಂಡಗಳು ಇನ್ನು ಗಟ್ಟಿಯಾಗಿ ನೆಲೆ ನಿಲ್ಲುವಂತೆ ಯೋಜನೆಗಳು ರೂಪಿತಗೊಳ್ಳಬೇಕು.

* ಇವರಲ್ಲಿರುವ ತತ್ವ ಪದಗಳು, ಹಾಡುಗಾರಿಕೆ ಕಳೆಯದಂತೆ ಮಾಡಲು ಯೋಜನೆಗಳನ್ನು ರೂಪಿಸಬೇಕು.

### ಆಧುನಿಕತೆಯ ಪರಿಣಾಮಗಳು ಮತ್ತು ಬದಲಾವಣೆಯ ಸ್ವರೂಪ

ಆಧುನೀಕತೆಯ ಪರಿಣಾಮದಿಂದ ಹೊಸ ಹೊಸ ಸಂಶೋಧನೆಗಳು ಆವಿಸ್ಕಾರಗೊಂಡಂತೆ ಈ ಸಮುದಾಯ ಆವರಿಸಿಕೊಂಡಿದ್ದ ಸಾಂಸ್ಕೃತಿಕ ಕ್ಷೇತ್ರವನ್ನು ಟಿವಿ, ಸಿನೇಮಾ, ರೇಡಿಯೊ, ಪತ್ರಿಕೆಗಳು ಆಕ್ರಮಿಸಿಕೊಂಡವು. ಪಾರಂಪರಿಕ ವೃತ್ತಿಯಾಗಿದ್ದ ಹಾಡುಗಾರಿಕೆ ಮತ್ತು ಬಯಲಾಟಗಳು ಕೇಳುಗರಿಲ್ಲದೆ ಮೂಲೆಗುಂಪಾದವು. ಜೀವನಕ್ಕೆ ಆಧಾರವಾಗಿದ್ದ ಈ ವೃತ್ತಿ ಆಧುನೀಕತೆಯಿಂದಾಗಿ ಮೂಲೆಗುಂಪಾಯಿತು.

ಆಧುನೀಕತೆಯ ಮುಂದುವರಿದ ಭಾಗವಾದ ಮುಕ್ತ ಮಾರುಕಟ್ಟೆ ಗ್ಲೋಬಲೈಜೇಷನ್‌ಗಳು ಸಾವಿರಾರು ಉದ್ಯೋಗಗಳನ್ನು ಸೃಷ್ಟಿಸಿರುವುದು ನಿಜವಾದರೂ ಸಮುದಾಯಕ್ಕೆ ಇದರ ಉಪಯೋಗವಾಗಿಲ್ಲ. ಈ ಉದ್ಯೋಗಗಳನ್ನು ಪಡೆಯಲು ಬೇಕಾದ ವಿದ್ಯಾರ್ಹತೆ ಖಂಡಿತವಾಗಿಯೂ ಈ ಜನಾಂಗದ ಯುವಕರಿಗೆ ದೊರೆತಿಲ್ಲ. ಸಂವಿಧಾನದ ಆಶಯದಂತೆ ಖಡ್ಡಾಯವಾಗಿ ದೊರೆಯಬೇಕಾಗಿದ್ದು ಪ್ರಾಥಮಿಕ ಶಿಕ್ಷಣವೇ ದೊರೆಯದಿರುವಾಗ, ಉನ್ನತ ಶಿಕ್ಷಣ ಪಡೆಯುವ ಬಗೆಯಾದರೂ ಹೇಗೆ? ಅವೈಜ್ಞಾನಿಕವಾದ ಮೀಸಲಾತಿನೀತಿ, ಇವರು ಕನಿಷ್ಠ ಪ್ರಮಾಣದ ಸವಲತ್ತು ಪಡೆದು ವಿದ್ಯೆ ಕಲಿಯಲು ಸಾಧ್ಯವಾಗಿಲ್ಲ. ವಿದ್ಯೆ ಮತ್ತು ಆರ್ಥಿಕ ಸಬಲತೆ ಇಲ್ಲದ ಕಾರಣ, ಈಗ ಬೀಸುತ್ತಿರುವ ಆಧುನೀಕತೆಯ ಗಾಳಿ ಈ ಸಮುದಾಯದ ಬದುಕಿನಲ್ಲಿ ಯಾವುದೇ ರೀತಿಯ ಆರೋಗ್ಯಕರ ಬದಲಾವಣೆಗಳು ತರುವ ಸಾಧ್ಯತೆ ಇಲ್ಲವಾಗಿದೆ. ಆದ್ದರಿಂದ ಜಾಗತೀಕರಣದ ಒಂದು ಭಾಗವಾಗಿ ಈ ಸಮುದಾಯ ಉಳಿದುಕೊಳ್ಳಲು ಸಾಧ್ಯವಾಗಿಲ್ಲ.

ಎದುರಿಸುತ್ತಿರುವ ಜ್ವಲಂತ ಮತ್ತು ಸಾಮಾನ್ಯ ಸಮಸ್ಯೆಗಳು

ಮೀಸಲಾತಿ : ಶತಮಾನಗಳಿಂದ ಮೂಕವಾಗಿ ಅಪಮಾನ ಮತ್ತು ವಂಚನೆಗೆ ಒಳಗಾದ ಸಮುದಾಯಗಳಿಗೆ ಸಾಮಾಜಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ, ರಾಜಕೀಯವಾಗಿ ಅತ್ಯಂತ ಹಿಂದುಳಿದ ಅಶಕ್ತರು, ಅವಕಾಶ ವಂಚಿತ ಸಮುದಾಯ ಗಳನ್ನು ಮೇಲೆತ್ತುವ ಉದ್ದೇಶದಿಂದ ಸಂವಿಧಾನ ಬದ್ಧವಾಗಿ ಕೆಲವು ವಿಶೇಷ ಅವಕಾಶಗಳನ್ನು ಕಲ್ಪಿಸಿಕೊಟ್ಟು, ಅವರ ಸ್ಥಿತಿಯನ್ನು ಉತ್ತಮಪಡಿಸಲು ರೂಪಿಸಿದ ಒಂದು ವ್ಯವಸ್ಥೆಯೇ ಮೀಸಲಾತಿ. ಈ ಮೀಸಲಾತಿ ನೀತಿಯನ್ನು ಒಪ್ಪಿಕೊಂಡದ್ದು ಭಾರತದ ಸಂವಿಧಾನವನ್ನು ಒಪ್ಪಿಕೊಂಡ ದಿನವಾದ ೨೬ ಜನವರಿ ೧೯೫೦ ರಂದು. ಡಾ ಬಾಬಾಸಾಹೇಬ್ ಅಂಬೇಡ್ಕರ್‌ರವರ ಚಿಂತನೆಯ ಫಲವಾಗಿ ಮೀಸಲಾತಿ ನೀತಿ ಜಾರಿಯಾಯಿತು. ಅಂಬೇಡ್ಕರ್‌ರವರು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳನ್ನು ಒಳಗೊಂಡಂತೆ ಸಾಮಾಜಿಕವಾಗಿ ಮತ್ತು ಶೈಕ್ಷಣಿಕವಾಗಿ ಹಿಂದುಳಿ ದಿರುವ ಎಲ್ಲಾ ಜಾತಿ ಮತ್ತು ಪಂಗಡಗಳಿಗೆ ವಿಶೇಷ ಕಾರ್ಯಕ್ರಮಗಳು, ಸೌಲಭ್ಯಗಳು ಅದರಲ್ಲೂ ಶೈಕ್ಷಣಿಕ ಸಂಸ್ಥೆಗಳ ಪ್ರವೇಶದ ಸಲುವಾಗಿ ಸಂವಿಧಾನದ ಪರಿಚ್ಛೇದ ೧೫ (೪) ನೇ ವಿಧಿ ಅಳವಡಿಸಿ ಸಂಸತ್ತಿನಲ್ಲಿ ಮಂಡಿಸುವ ಮೂಲಕ ಸಂವಿಧಾನಬದ್ಧ ಮೀಸಲಾತಿ ಕಲ್ಪಿಸಿದರು.

ಸ್ವಾತಂತ್ರ್ಯ ಪೂರ್ವದಲ್ಲಿ ದೇಶದಲ್ಲೇ ಪ್ರಥಮ ಬಾರಿಗೆ ಕರ್ನಾಟಕದಲ್ಲಿ ಸಾಮಾಜಿಕ ನ್ಯಾಯದ ಅಗತ್ಯವನ್ನು ಮನಗಂಡವರು ರಾಜರ್ಷಿ ನಾಲ್ವಡಿ ಕೃಷ್ಣರಾಜ ಒಡೆಯರ್ ರವರು. ಆ ಕಾಲಕ್ಕೆ ನೂರಕ್ಕೆ ನೂರರಷ್ಟು ಅಧಿಕಾರ ಸ್ಥಾನಗಳಲ್ಲಿದ್ದವರು ಬ್ರಾಹ್ಮಣರು ಮಾತ್ರ, ಪೂನಾ ಮತ್ತು ಮದ್ರಾಸಿನಲ್ಲಿ ನಡೆಯುತ್ತಿದ್ದ ಬ್ರಾಹ್ಮಣೇತರ ಚಳುವಳಿಗಳಿಂದ ಪ್ರೇರಿತರಾದ ಒಡೆಯರ್‌ರವರು ಮೈಸೂರು ರಾಜ್ಯದಲ್ಲಿ ಒಂದು ಹೊಸ ಪ್ರಯೋಗವನ್ನು ಪ್ರಾರಂಭಿಸಿದರು. ಇದರ ಉದ್ದೇಶ ಎಲ್ಲಾ ಹಿಂದುಳಿದ ವರ್ಗಗಳಿಗೆ ಪ್ರಜಾಪ್ರತಿನಿಧಿ ಸಭೆಗಳು ಮತ್ತು ಸಂಸ್ಥಾನದ ಸೇವಾ ಇಲಾಖಾ ಉದ್ಯೋಗಗಳಲ್ಲಿ ಅವಕಾಶ ಕಲ್ಪಿಸುವುದಾಗಿತ್ತು. ಈ ಕಾರಣಕ್ಕಾಗಿ ೧೯೧೮ ರಲ್ಲಿ ರಾಜ್ಯದ ಮುಖ್ಯ ನ್ಯಾಯಾಧೀಶ ರಾಗಿದ್ದ ಸರ್ ವೆಸ್ಲಿ ಮಿಲ್ಲರ್‌ರವರ ಅಧ್ಯಕ್ಷತೆಯಲ್ಲಿ ಒಂದು ಆಯೋಗವನ್ನು ನೇಮಿಸಿ, ಎಲ್ಲಾ ಹಿಂದುಳಿದ ವರ್ಗದ ಜನರಿಗೆ ಪ್ರಾತಿನಿಧ್ಯ ದೊರಕುವಂತೆ ಸೂಚಿಸಲು ಆಯೋಗಕ್ಕೆ ಆದೇಶ ಮಾಡಿದರು. ಈ ಆಯೋಗ ೧೯೨೧ರಲ್ಲಿ ಪ್ರಥಮ ಬಾರಿಗೆ ಬ್ರಾಹ್ಮಣರು ಆಂಗ್ಲೋ ಇಂಡಿಯನ್ನರನ್ನು ಹೊರತುಪಡಿಸಿ ಎಲ್ಲಾ ಹಿಂದುಳಿದ ಸಮುದಾಯಗಳಿಗೆ ಶೇ. ೭೫ ರಷ್ಟು ಸರ್ಕಾರಿ ನೌಕರಿಯಲ್ಲಿ ಮೀಸಲಾತಿ ನೀಡಿ ಆದೇಶ ಜಾರಿ ಮಾಡಿದರು. ಆಗ ಇಲ್ಲಿದ್ದ ಬಹುಸಂಖ್ಯಾತ ಜಾತಿಗಳನ್ನು ಒಳಗೊಂಡಂತೆ ಎಲ್ಲಾ ಶೂದ್ರ ಮತ್ತು ದಲಿತ ಸಮುದಾಯಗಳು ಇದರ ಉಪಯೋಗ ಪಡೆದು ಕೊಂಡವು. ಅಲೆಮಾರಿಗಳಾದ ದೊಂಬಿದಾಸರನ್ನು ಒಳಗೊಂಡಂತೆ ಬಹಳಷ್ಟು ಸಣ್ಣಪುಟ್ಟ ಜಾತಿಗಳು ಅವಕಾಶವಂಚಿತರಾಗಿ ಬಹುಸಂಖ್ಯಾತ ಜಾತಿಗಳ ನಡುವೆ ಸ್ಪರ್ಧಿಸಲಾಗದೆ ಮೀಸಲಾತಿಯಿಂದ ದೂರವೇ ಉಳಿದವು.

ಸ್ವಾತಂತ್ರ್ಯ ನಂತರ ಡಾ ನಾಗನಗೌಡರವರ ಅಧ್ಯಕ್ಷತೆಯಲ್ಲಿ ರಚನೆಗೊಂಡ ಹಿಂದುಳಿದ ವರ್ಗಗಳ ಸಮಿತಿ ಈ ಅಲೆಮಾರಿ ಸಮುದಾಯಗಳನ್ನು ತೀರ ಹಿಂದುಳಿದವರು ಎಂದು ಪರಿಗಣಿಸಿ ಈ ಸಮುದಾಯಗಳನ್ನು ಪರಿಶಿಷ್ಟ ವರ್ಗಕ್ಕೆ ಸೇರಿಸಬಹುದೆಂದು ಪ್ರಸ್ತಾವನೆ ಸಲ್ಲಿಸಿದ್ದರು. ಆದರೆ, ಈ ವರದಿ ಹಾಗೆಯೇ ನೆನೆಗುದಿಗೆ ಬಿತ್ತು.

ಸರ್ಕಾರಿ ಆದೇಶ ಸಂಖ್ಯೆ:ಪಿಹೆಚ್‌ಎಸ್/೨೬೨/ಎನ್‌ಡಬ್ಲ್ಯೂ/೬೫. ದಿನಾಂಕ: ೧.೨.೧೯೬೬ ರಂತೆ ಅಂತಿಮವಾಗಿ ೪೯ ಜಾತಿಗಳು ದೊಂಬಿದಾಸ ಸಮುದಾಯವನ್ನು ಒಳಗೊಂಡಂತೆ Denotified Tribes, Nomadic Tribes and Semi Nomadic Tribes in the State of Karnataka ಪಟ್ಟಿಯಲ್ಲಿ ಸೇರ್ಪಡೆಗೊಂಡು ಕೇಂದ್ರ ಮತ್ತು ರಾಜ್ಯ ಸರ್ಕಾರ ನೀಡುತ್ತಿದ್ದ ಮೀಸಲಾತಿಯನ್ನು ಉಪಯೋಗಿಸಿಕೊಳ್ಳಲು ಅವಕಾಶವಾಯಿತು. ಇದರನ್ವಯ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಕ್ಕೆ ದೊರೆಯುತ್ತಿದ್ದ ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ಎಲ್ಲಾ ಸೌಲಭ್ಯಗಳೂ ಈ ಸಮುದಾಯಗಳಿಗೂ ದೊರೆಯುತ್ತಿದ್ದವು. ಆದರೆ, ಪಟ್ಟಿಯಲ್ಲಿದ್ದ ಜಾತಿಗಳಿಗೆ ರಾಜಕೀಯ ಮೀಸಲಾತಿ ಇರಲಿಲ್ಲ.

೧೯೭೭ರಲ್ಲಿ ಕರ್ನಾಟಕದಲ್ಲಿ ಪ್ರಥಮ ಬಾರಿಗೆ ಜಾರಿಗೆ ಬಂದ ಶ್ರೀ ಹಾವನೂರು ಆಯೋಗ ಕೆಳ ಸಮುದಾಯಗಳ ಬಹುಸಂಖ್ಯಾತ ಜನಗಳಿಗೆ ಸಾಮಾಜಿಕ ನ್ಯಾಯ, ರಾಜಕೀಯ ಸ್ಥಾನಮಾನ, ಉದ್ಯೋಗಾವಕಾಶಗಳು, ಆ ಮೂಲಕ ಆರ್ಥಿಕ ಸುಭದ್ರತೆ ತಂದುಕೊಟ್ಟು ಕತ್ತಲಾದ ಸಮುದಾಯಗಳ ಬಾಳಿನಲ್ಲಿ ಸೂರ್ಯೋದಯದ ಹೊಂಗಿರಣಗಳನ್ನು ಮೂಡಿಸಿ, ಕರ್ನಾಟಕ ಚಿತ್ರಣವನ್ನೆ ಬದಲಾಯಿಸಿದ್ದು ಒಂದು ದೊಡ್ಡ ಸಾಧನೆಯೇ.

ದುರಂತ ಅಂದರೆ ಅಸಂಘಟಿತ ಮತ್ತು ಅತಿ ಸಣ್ಣ ಸಮುದಾಯಗಳಾದ ದೊಂಬಿದಾಸರಂತಹ ಅಲೆಮಾರಿ ಸಮುದಾಯಗಳ ಪಾಲಿಗೆ ಇದು ಮರಣ ಶಾಸನವಾಗಿ ಪರಿಣಮಿಸಿತು. ಹಾವನೂರು ವರದಿ ರಾಜ್ಯದಲ್ಲಿ ಅಸ್ತಿತ್ವಕ್ಕೆ ಬಂದ ಕೂಡಲೇ ಅಲೆಮಾರಿ, ಅರೆ ಅಲೆಮಾರಿ ಸಮುದಾಯಗಳ ಪಟ್ಟಿ(Nomadic Tribes and Semi Nomadic Tribes in the State of Karnataka)ಯನ್ನು ರದ್ದು ಮಾಡಿ, ಅದಕ್ಕಿದ್ದ ಮೀಸಲಾತಿ ಸೌಲಭ್ಯವನ್ನು ಕಿತ್ತುಕೊಂಡಿತು. ಈ ಪಟ್ಟಿಯಲ್ಲಿದ್ದ ೪೯ ಜಾತಿಗಳು ಸೇರಿದಂತೆ ಕೆಲವಷ್ಟು ಸ್ಥಾಪಿತ ಬಹುಸಂಖ್ಯಾತ ಜಾತಿಗಳನ್ನು ಸೇರಿಸಿ ಒಟ್ಟು ೬೨ ಜಾತಿಗಳು ಮತ್ತು ೧೦೦ ಕ್ಕೂ ಹೆಚ್ಚು ಉಪ/ಪರ್ಯಾಯ ಜಾತಿಗಳನ್ನು ಒಳಗೊಂಡಂತೆ ಹಿಂದುಳಿದ ವರ್ಗದ "Backward Tribes ಪಟ್ಟಿಗೆ ಸೇರಿಸಿ ಸಮುದಾಯಗಳ ತುಟಿಗೆ ಮೀಸಲಾತಿ ತುಪ್ಪ ಸವರಿ ಎಲ್ಲರಿಗೂ ನ್ಯಾಯ ದೊರೆಯಿತೆಂದು ಆಯೋಗ ಕೈತೊಳೆದುಕೊಂಡಿತು. ಬದಲಾಗಿ ಈ ಎಲ್ಲಾ ಅಲೆಮಾರಿ ಸಮುದಾಯಗಳನ್ನು ಕೇಂದ್ರ ಸರ್ಕಾರದ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಮೀಸಲಾತಿ ಪಟ್ಟಿಗೆ ಸೇರಿಸುವಂತೆ ಶಿಫಾರಸ್ಸು ಮಾಡಿದ್ದರೆ ಅಥವಾ NT/SNT/

DNT ಪಟ್ಟಿಯನ್ನು SN/ST ಪಟ್ಟಿ ಉಳಿಸಿಕೊಂಡಂತೆ ಉಳಿಸಿಕೊಂಡಿದ್ದರೆ, ಈ ಆಯೋಗದ ಘನತೆ ಹೆಚ್ಚಿ ಈ ನಿರ್ಲಕ್ಷಿತ ಅಸಹಾಯಕ ದೊಂಬಿದಾಸರಂತ ಅಲೆಮಾರಿ ಸಮುದಾಯಗಳು ಬದುಕುಳಿಯುತ್ತಿದ್ದವು. ಈ ಸಮುದಾಯ ಮೀಸಲಾತಿ ಯಿಂದ ವಂಚನೆಗೊಳಗಾದ ಎರಡನೆ ಪ್ರಕರಣ ಇದು.

ಇಂತಹದ್ದೆ ಮತ್ತೊಂದು ಮೀಸಲಾತಿ ವಂಚನೆ ಪ್ರಕರಣ ನಡೆದಿದ್ದು ದೊಂಬಿದಾಸ ಜಾತಿಯನ್ನು ಕೇಂದ್ರ ಸರ್ಕಾರ ಮೀಸಲಾತಿ ಪಟ್ಟಿಯಲ್ಲಿ ಸೇರಿಸಿ ನಂತರ ನ್ಯಾಯೋಚಿತ ವಲ್ಲದ ರೀತಿಯಿಂದ ಕೈಬಿಟ್ಟ ಆ ಸಂದರ್ಭ, ಈ ಸಮುದಾಯದ ಪಾಲಿಗೆ ಐತಿಹಾಸಿಕವಾಗಿ ದುರ್ದಿನ, ಅದು ನಡೆದದ್ದು ಹೀಗೆದೆ.

ಕೇಂದ್ರ ಸರ್ಕಾರ ಸಂವಿಧಾನ ಬದ್ಧವಾಗಿ ಮತ್ತಷ್ಟು ಹಿಂದುಳಿದ ಜಾತಿ ಮತ್ತು ವರ್ಗಗಳನ್ನು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದ ಪಟ್ಟಿಗೆ ಸೇರಿಸಲು ಬಿಲ್ ಸಂಖ್ಯೆ:೧೧೯ ಬಿ ೧೯೬೭, The Scheduled Castes and Scheduled Tribes Order (Amendment) Bill ೧೯೬೭ ರಲ್ಲಿ ದೇಶದ ನಾನಾ ರಾಜ್ಯಗಳಿಂದ ಮತ್ತಷ್ಟು ಜಾತಿಗಳ ಹೆಸರನ್ನು ಈ ಪಟ್ಟಿಗೆ ಸೇರಿಸಲು ಪ್ರಸ್ತಾಪಿಸಿತು. ಅಂದಿನ ಮೈಸೂರು ರಾಜ್ಯಕ್ಕೆ ಸಂಬಂಧಿಸಿದಂತೆ, ಸದರಿ ಬಿಲ್‌ನ ಪಾರ್ಟ್ IX ರ ಕ್ರಮ ಸಂಖ್ಯೆ ೧೭ ರಲ್ಲಿ
DOM, DOMBAR, DOMBIDASAR, PAIDI OR PANO ಜಾತಿಗಳನ್ನು ಸೇರಿಸಿ ಪ್ರಸ್ತಾಪ ಸಲ್ಲಿಸಿತ್ತು.

ಈ ಬಿಲ್ಲಿನ ಪರಿಷ್ಕರಣೆ ಮತ್ತು ಅಂತಿಮ ವರದಿ ನೀಡಲು ಭಾರತ ಸರ್ಕಾರ ಶ್ರೀ ಅನಿಲ್ ಕೆ ಚಾಂದ್‌ರವರ ಅಧ್ಯಕ್ಷತೆಯಲ್ಲಿ Joint Committee on the Scheduled Castes and Scheduled Tribes Orders (Amendment) Bill ೧೯೬೭ ರಚನೆ ಮಾಡಿತು. ಈ ಕಮಿಟಿಯಲ್ಲಿ ಕರ್ನಾಟಕದಿಂದ ಲೋಕಸಭಾ ಸದಸ್ಯರಾಗಿ ಆಯ್ಕೆಯಾಗಿದ್ದ ಶ್ರೀ ಜೆ ಹೆಚ್ ಪಟೇಲ್, ಶ್ರೀ ಜಿ ವೈ ಕೃಷ್ಣನ್ ಮತ್ತು ಶ್ರೀ ರಾಜಾ ವೆಂಕಟಪ್ಪ ನಾಯಕ ಸದಸ್ಯರಾಗಿದ್ದರು.ಈ ಕಮಿಟಿ ಬಿಲ್ ಸಂಖ್ಯೆ ೧೧೯/"B ರಲ್ಲಿ ಸೇರ್ಪಡೆಯಾಗಿದ್ದ ಜಾತಿಗಳು ಅಂತಿಮ ಪಟ್ಟಿಯಲ್ಲಿ ಸೇರ್ಪಡೆ ಮಾಡುವ ಕುರಿತಂತೆ ಆಯಾ ಸಮುದಾಯ ಅಥವಾ ವ್ಯಕ್ತಿಗಳಿಂದ ಮನವಿಗಳನ್ನು ಸ್ವೀಕರಿಸಿ ಪರಿಶೀಲಿಸಿ, ಅಂತಿಮಗೊಳಿಸುವುದು ಈ ಕಮಿಟಿ ಉದ್ದೇಶವಾಗಿತ್ತು. ಆ ಸಂದರ್ಭದಲ್ಲಿ ಈ ನತದೃಷ್ಟ ಸಮುದಾಯದ ಪರವಾಗಿ ಯಾರೊಬ್ಬರು ಮನವಿ ಸಲ್ಲಿಸದ ಕಾರಣ ಮೈಸೂರು ರಾಜ್ಯದಿಂದ (Part IX Mysore) ಕ್ರಮ ಸಂಖ್ಯೆ ೧೭ ರಲ್ಲಿ ಸೇರ್ಪಡೆಯಾಗಿದ್ದ ದೊಂಬಿದಾಸರ್ ಜಾತಿಯು Annexure I (Vide Para 19 (ix) of the Report ನಂತೆ ಕ್ರಮ ಸಂಖ್ಯೆ ೪ Dombidasar (against-Dom) ಎಂದು ನಿರ್ಣಯಿಸುವ ಮೂಲಕ ೧೫ ನವೆಂಬರ್ ೧೯೬೯ ರಲ್ಲಿ ಅಂತಿಮವಾಗಿ ದೊಂಬಿದಾಸರ್ ಜಾತಿಯನ್ನು ಈ ಪಟ್ಟಿಯಿಂದ ಕೈ ಬಿಟ್ಟು

Part IX ಕ್ರಮ ಸಂಖ್ಯೆ ೧೬ರಲ್ಲಿ ಇದ್ದ DOM, DOMBAR, PAIDI OR PANO ಎಂಬ ಜಾತಿಗಳನ್ನು ಹಾಗೆಯೇ ಮುಂದುವರಿಸಿ ಭಾರತ ಸರ್ಕಾರದ ಪರಿಶಿಷ್ಟ ಜಾತಿ ಅಂತಿಮ ಪಟ್ಟಿ ಕ್ರಮ ಸಂಖ್ಯೆ ೩೩ ರಲ್ಲಿ ಸ್ಥಾನ ಕಲ್ಪಿಸಿತು. ಈ ಸಮುದಾಯದ ಪಾಲಿಗೆ ಇದೊಂದು ಐತಿಹಾಸಿಕವಾದ ಘೋರ ಅನ್ಯಾಯ.

ದಾಸರಿ ಮೂಲದ ಟಿಸಿಲುಗಳಾದ ಚನ್ನದಾಸರ್/ಹೊಲೆಯದಾಸರ್ ಹೆಸರುಗಳಿಂದ ಕರೆಯಲ್ಪಡುವ ಜಾತಿಗಳು ಪರಿಶಿಷ್ಟ ಜಾತಿ ಪಟ್ಟಿ ಕ್ರಮ ಸಂಖ್ಯೆ ೨೯ರಲ್ಲಿ ಸೇರ್ಪಡೆಯಾಗಿದ್ದರೆ, ಇದೇ ಮೂಲದ ಮತ್ತೊಂದು ಜಾತಿ ಮಾಲದಾಸರ್ ಹೆಸರಿಂದ ಕರೆಯಲ್ಪಟ್ಟು ಪರಿಶಿಷ್ಟ ಜಾತಿ ಪಟ್ಟಿ ೬೬ ರಲ್ಲಿ ಸ್ಥಾನ ಪಡೆದಿದೆ. ಆಂಧ್ರ ಪ್ರದೇಶದ S.C. ಪಟ್ಟಿ ಕ್ರಮ ಸಂಖ್ಯೆ -೨೭ ಹೊಲೆಯದಾಸರಿ, ಕ್ರಮ ಸಂಖ್ಯೆ- ೩೬ ಮೂಲದಾಸರಿ ಕ್ರಮ ಸಂಖ್ಯೆ - ೩೭ ಮಾಲದಾಸು, ಹಾಗೆಯೇ ಮಹಾರಾಷ್ಟ್ರದ S.C. ಪಟ್ಟಿ ಕ್ರಮ ಸಂಖ್ಯೆ-೧೬ ಚೆನ್ನದಾಸರ್, ಹೊಲೆಯದಾಸರ್, ಹೊಲೆಯದಾಸರಿ, ಕ್ರಮ ಸಂಖ್ಯೆ -೪೦ ಮಾಲದಾಸೈ (MALADSAI) ಎಂಬ ಪರ್ಯಾಯ ಪದಗಳು ಸ್ಥಾನ ಪಡೆದಿವೆ. ಈ ಮೊದಲು NT/SNT/DNT ಪಟ್ಟಿಯಲ್ಲಿದ್ದು ನಂತರ ಕರ್ನಾಟಕದ ಹಿಂದುಳಿದ ವರ್ಗಗಳ ಪಟ್ಟಿ ಪ್ರವರ್ಗ-೧ರಲ್ಲಿನ ಕ್ರಮ ಸಂಖ್ಯೆ ೧೧ರಲ್ಲಿ ಸೇರ್ಪಡೆಯಾಗಿರುವ ದಾಸರಿ, ಚಕ್ರವಾದ್ಯ ದಾಸ, ದಂಗದಾಸರ್ ಮತ್ತು ದೊಂಬಿದಾಸ ಜಾತಿಗಳು ದಾಸರಿ ಮೂಲದವೆ ಆಗಿದ್ದರೂ ಪರಿಶಿಷ್ಟ ಜಾತಿ/ವರ್ಗದ ಪಟ್ಟಿಯಿಂದ ಹೊರಗುಳಿಯುವಂತೆ ಮಾಡಿದ್ದು ಮಾತ್ರ ಪರಮ ಅನ್ಯಾಯ. ಈ ಎಲ್ಲಾ ಪರ್ಯಾಯ ಪದಗಳು ದಾಸರಿ ಮೂಲದವೆ ಎಂಬುದಕ್ಕೆ ಅವರ ನಡುವೆ ಇರುವ ಬೆಡಗು ಬಳಿ ಆಚಾರ ವಿಚಾರಗಳು ಪರಸ್ಪರರ ನಡುವೆ ಇರುವ ವೈವಾಹಿಕ ಸಂಬಂಧಗಳು, ಅವರ ಸಾಂಸ್ಕೃತಿಕ ಹಿನ್ನೆಲೆ ಇವೆಲ್ಲ ನಿಚ್ಚಳವಾಗಿ ಈ ಉಪ ಜಾತಿಗಳೆಲ್ಲವೂ ಒಂದೇ ಎಂಬುದನ್ನು ಸಾಬೀತುಪಡಿಸುತ್ತವೆ.

ದೊಂಬಿದಾಸರನ್ನು ಪರಿಶಿಷ್ಟ ಜಾತಿ ಪರಿಶಿಷ್ಟ ವರ್ಗದ ಪಟ್ಟಿಯಲ್ಲಿ ಸೇರಿಸಬೇಕೆಂಬ ಬಗ್ಗೆ ಕರ್ನಾಟಕದ ವಿಧಾನಸಭೆ ಮತ್ತು ವಿಧಾನ ಪರಿಷತ್‌ಗಳಲ್ಲಿ ವಿಷಯ ಪ್ರಸ್ತಾಪವಾಗಿ, ಈ ಎರಡೂ ಸದನಗಳಲ್ಲಿ ಚರ್ಚೆಯಾಗಿದೆ. ವಿವರಗಳು ಕೆಳಗಿನಂತಿವೆ.

೧೯೯೮ರಲ್ಲಿ ವಿಧಾನಸಭೆಯಲ್ಲಿ ಶ್ರೀ ಕೆ ಎಂ ಕೃಷ್ಣಮೂರ್ತಿರವರು ದೊಂಬಿದಾಸರನ್ನು ಪರಿಶಿಷ್ಟ ಜಾತಿ ಪಟ್ಟಿಗೆ ಸೇರಿಸುವ ಕುರಿತು ಕೇಳಿದ ಪ್ರಶ್ನೆಗೆ, ಅಂದಿನ ಸಮಾಜ ಕಲ್ಯಾಣ ಸಚಿವರಾಗಿದ್ದ ಶ್ರೀ ರಮೇಶ್ ಜಿಗಜಿಣಗಿರವರು ಉತ್ತರ ನೀಡಿ ದೊಂಬಿ ದಾಸರನ್ನು ಪರಿಶಿಷ್ಟರ ಪಟ್ಟಿಗೆ ಸೇರಿಸಲು ಪರಿಶೀಲನೆ ನಡೆಸಲಾಗುತ್ತಿದೆ ಎಂದು ಹೇಳಿಕೆ ನೀಡಿದ್ದರು. ಅದರ ಪೂರ್ಣಪಾಠ ಹೀಗಿದೆ.

ದೊಂಬಿದಾಸ, ಶಂಕದಾಸ, ಹಾಡುದಾಸ, ಪದದಾಸ ಮುಂತಾದ ಜಾತಿಗಳನ್ನು ಪರಿಶಿಷ್ಟ ಜಾತಿಯ ಪಟ್ಟಿಯಲ್ಲಿ ಸೇರಿರುವ ಚನ್ನದಾಸರ್ ಜಾತಿಯ ಪರ್ಯಾಯ ಜಾತಿ ಎಂದು ಪರಿಗಣಿಸುವಂತೆ ಬಂದಿರುವ ಮನವಿಗಳನ್ನು ಪರಿಶೀಲನಾ ಸಮಿತಿಯ

ಅವಗಾಹನೆಗೆ ಒಪ್ಪಿಸಲಾಗಿದೆ ಎಂದು ಸಮಾಜ ಕಲ್ಯಾಣ ಸಚಿವ ರಮೇಶ್ ಜಿಗಜಿಣಗಿ ವಿಧಾನಸಭೆಯಲ್ಲಿ ಹೇಳಿದರು.

ಕೇಂದ್ರ ಸರ್ಕಾರ ಪ್ರಕಟಿಸಿರುವ ಪರಿಶಿಷ್ಟ ಜಾತಿ ಪಟ್ಟಿಯಲ್ಲಿ ಚನ್ನದಾಸರ್ ಮತ್ತು ಹೊಲೆದಾಸರ್ ಜಾತಿಗಳನ್ನು ಸೇರಿಸಲಾಗಿದೆ ಎಂದು ಅವರು ಜನತಾದಳದ ಕೆ ಎಂ ಕೃಷ್ಣಮೂರ್ತಿ ಅವರ ನಿಯಮ ೩೫೧ರ ಸೂಚನೆಗೆ ಉತ್ತರಿಸಿದರು.

ಯಾವುದೇ ಜಾತಿ ಅಥವಾ ಪಂಗಡಗಳನ್ನು ಪರಿಶಿಷ್ಟ ಜಾತಿ ಅಥವಾ ಬುಡಕಟ್ಟುಗಳ ಪಟ್ಟಿಯಲ್ಲಿ ಸೇರಿಸುವ ಅಧಿಕಾರ ಕೇಂದ್ರ ಸರ್ಕಾರಕ್ಕೆ ಮಾತ್ರ ಇರುತ್ತದೆ. ರಾಜ್ಯ ಸರ್ಕಾರ ಕೇವಲ ಶಿಫಾರಸ್ಸು ಮಾತ್ರ ಮಾಡಬಹುದಾಗಿದೆ.

ಈ ಪಟ್ಟಿಯಲ್ಲಿ ಸೇರಿಸುವಂತೆ ಕೋರಿ ಬಂದಿರುವ ಅರ್ಜಿಗಳನ್ನು ಪರಿಶೀಲಿಸಿ ಕೇಂದ್ರ ಸರ್ಕಾರಕ್ಕೆ ಶಿಫಾರಸ್ಸು ಮಾಡಲು ಪರಿಶೀಲನಾ ಸಮಿತಿ ರಚಿಸಲಾಗಿದೆ. ಸಮಿತಿಯನ್ನು ಪುನರಚಿಸುವ ಉದ್ದೇಶವೂ ಇದೆ ಎಂದರು(ಪ್ರಜಾವಾಣಿ ದಿನಪತ್ರಿಕೆ ದಿನಾಂಕ ೨೫.೦೯.೧೯೯೫).

ಆದರೆ, ಈ ಸಮಿತಿ ರಚನೆಯಾಯಿತೆ, ಪುನರ್ರಚಿಸಿದರೆ, ದೊಂಬಿದಾಸ ಜಾತಿಯನ್ನು ಪರಿಶಿಷ್ಟ ಜಾತಿ ಪಟ್ಟಿಗೆ ಸೇರಿಸಲು ಕೇಂದ್ರ ಸರ್ಕಾರಕ್ಕೆ ಶಿಫಾರಸ್ಸು ಮಾಡಿದರೆ, ಈ ಯಾವ ವಿಚಾರಗಳು ಬೆಳಕಿಗೆ ಬರಲೇ ಇಲ್ಲ.

ಇದೇ ವಿಷಯ ಕುರಿತಂತೆ ೨೦೦೩ರಲ್ಲಿ ಮಾನ್ಯ ಶ್ರೀ ಯಡಿಯೂರಪ್ಪನವರು ಕರ್ನಾಟಕ ರಾಜ್ಯ ವಿಧಾನ ಪರಿಷತ್ತಿನಲ್ಲಿ ದೊಂಬಿದಾಸ ಜಾತಿಯನ್ನು ಪರಿಶಿಷ್ಟ ಜಾತಿಃಪಂಗಡಕ್ಕೆ ಸೇರಿಸುವ ಕುರಿತಂತೆ ಚುಕ್ಕೆ ಗುರುತಿನ ಪ್ರಶ್ನೆಯನ್ನು ಸಮಾಜ ಕಲ್ಯಾಣ ಸಚಿವರಾದ ಶ್ರೀ ಎ ಕೃಷ್ಣಪ್ಪನವರಿಗೆ ಕೇಳಿದ್ದರು. ಮಾನ್ಯ ಸಚಿವರು ವಿಧಾನ ಪರಿಷತ್ತಿನಲ್ಲಿ ನೀಡಿದ ಉತ್ತರದ ಸಾರಾಂಶ ಹೀಗಿದೆ.

ಸಮಾಜ ಕಲ್ಯಾಣ ಇಲಾಖೆ ಆಯುಕ್ತರ ಕಛೇರಿಯಲ್ಲಿ ದೊಂಬಿದಾಸ ಕ್ಷೇಮಾಭಿವೃದ್ಧಿ ಸಂಘವು ಸೇರಿದಂತೆ, ದೊಂಬಿದಾಸ ಜನಾಂಗವು ಮನವಿ ಸಲ್ಲಿಸಿದೆ. ದೊಂಬಿದಾಸ ಜನಾಂಗದ ಸದಸ್ಯರು ಪರಿಶಿಷ್ಟ ಜಾತಿಃಪರಿಶಿಷ್ಟ ವರ್ಗಗಳ ಜಾತಿ ಪಟ್ಟಿಯಲ್ಲಿ ಸೇರಿಸಲು ಪ್ರಸ್ತಾಪಿಸಿರುವರು. ಅವುಗಳನ್ನು ಪರಿಶೀಲಿಸಲು ಮತ್ತು ಸೂಕ್ತ ಶಿಫಾರಸ್ಸುಗಳನ್ನು ನೀಡಲು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ಆಯೋಗದ ಮುಂದೆ ಇಡಲಾಗುವುದು. ಆಯೋಗದ ಶಿಫಾರಸ್ಸು ಸ್ವೀಕರಿಸಿದ ನಂತರ ಸೂಕ್ತ ನಿರ್ಧಾರ ಕೈಗೊಳ್ಳಲಾಗುವುದು(ಎ ಕೃಷ್ಣಪ್ಪ, ಸಮಾಜ ಕಲ್ಯಾಣ ಇಲಾಖಾ ಸಚಿವರು, ದಿನಾಂಕ ೨೪.೦೩.೨೦೦೩).

ಸಚಿವರು ತಮ್ಮ ಲಿಖಿತ ಉತ್ತರದಲ್ಲಿ ಈ ಕುರಿತು ದೊಂಬಿದಾಸ ಕ್ಷೇಮಾಭಿವೃದ್ಧಿ ಸಂಘವು ಭಾರತ ಸರ್ಕಾರದ ಪ್ರಧಾನಮಂತ್ರಿಗಳಿಗೆ ಕಳುಹಿಸಿರುವ ಮನವಿ ಬಗ್ಗೆಯೂ ಕೂಡ ಪ್ರಸ್ತಾಪಿಸಿದ್ದಾರೆ. ಈ ಮನವಿಯ ಸಾರಾಂಶ ಕರ್ನಾಟಕ ಸರ್ಕಾರಕ್ಕೂ ಬಂದಿದೆ. ಕರ್ನಾಟಕದಲ್ಲಿ SC, ST Commission ಜಾರಿಯಲ್ಲಿರುವುದರಿಂದ

ಅದರ ಮುಂದೆ ಕೂಡ ಪ್ರಸ್ತಾವನೆಯನ್ನು ಸಲ್ಲಿಸಿ, ಆದಷ್ಟು ಬೇಗ ಕಡತವನ್ನು ತರಿಸಿಕೊಂಡು ಭಾರತ ಸರ್ಕಾರಕ್ಕೆ ಸೂಕ್ತ ಶಿಫಾರಸ್ಸು ಕಳುಹಿಸಿ ಕೊಡುತ್ತೇವೆ ಎಂದು ಭರವಸೆ ನೀಡಿದ್ದರು.

ವಿಧಾನ ಪರಿಷತ್ತಿನಲ್ಲಿ ಉತ್ತರ ನೀಡಿದ ನಂತರ ಸರ್ಕಾರ ಯಾವ ಕ್ರಮ ಕೈಗೊಂಡಿತು ಎಂಬುದರ ಬಗ್ಗೆ ಈವರೆವಿಗೂ ಯಾವುದೇ ಮಾಹಿತಿ ಇಲ್ಲ. ವಿಧಾನಸೌಧದ ಪ್ರತ್ರಾಗಾರದಲ್ಲಿ ಈ ಕಡತಗಳು ಧೂಳು ತುಂಬಿ ತನ್ನ ಭಾರ ಹೆಚ್ಚಿಸಿ ಕೊಳ್ಳುತ್ತಿರಬಹುದೇ ಹೊರತು ಇದರಿಂದ ಸಮುದಾಯಕ್ಕೆ ಯಾವುದೇ ಪ್ರಯೋಜನ ಆಗಲಿಲ್ಲ.

ಸಮುದಾಯ ತನ್ನ ಸಂಘಟನೆಯ ಮಿತಿಯೊಳಗೆ ಮತ್ತೆ ಮತ್ತೆ ಮನವಿಗಳನ್ನು ಸಲ್ಲಿಸುತ್ತಾ ಮೀಸಲಾತಿ ಪಡೆದುಕೊಳ್ಳುವ ನಿಟ್ಟಿನಲ್ಲಿ ನಿರಂತರ ಪ್ರಯತ್ನದಲ್ಲಿದೆ. ಈ ಪ್ರಯತ್ನದ ಮುಂದುವರಿದ ಭಾಗವಾಗಿ ಕರ್ನಾಟಕ ರಾಜ್ಯ ಚನ್ನದಾಸರ್ ಕ್ಷೇಮಾಭಿವೃದ್ಧಿ ಸಂಘವು ಕರ್ನಾಟಕ ವಿಧಾನಸಭೆ ಅರ್ಜಿಗಳ ಸಮಿತಿಗೆ ಅರ್ಜಿ ಸಲ್ಲಿಸಿ, ಚನ್ನದಾಸರ್ ಜಾತಿಗೆ ಪರ್ಯಾಯ ಜಾತಿಗಳಾದ ದೊಂಬಿದಾಸ, ದಾಸಯ್ಯ, ದಾಸ, ಶಂಕದಾಸ ಇತ್ಯಾದಿ ಜಾತಿಗಳನ್ನು ಪರಿಶಿಷ್ಟ ಜಾತಿ ಪಟ್ಟಿಗೆ ಸೇರಿಸಲು ಕ್ರಮ ತೆಗೆದುಕೊಳ್ಳುವಂತೆ ಕೋರಿತ್ತು. ಈ ಅರ್ಜಿ ಸಮಿತಿ ಎಲ್ಲಾ ಜಿಲ್ಲಾಧಿಕಾರಿಗಳಿಂದ ಈ ಜಾತಿಗಳ ಕುರಿತಾಗಿ ಎಥ್ನೋಗ್ರಾಫಿಕ್ ವಿವರಗಳನ್ನು ಸಲ್ಲಿಸುವಂತೆ ಸೂಚಿಸಿತ್ತು.

ವಾಸ್ತವವಾಗಿ ಈ ಸಮಿತಿ ಈ ಸಮುದಾಯಗಳ ಬಗ್ಗೆ ಎಥ್ನೋಗ್ರಾಫಿಕ್ (ಕುಲಶಾಸ್ತ್ರ ಅಧ್ಯಯನ) ವರದಿ ನೀಡುವಂತೆ ಯಾವುದಾದರೂ ವಿಶ್ವವಿದ್ಯಾನಿಲಯ ಗಳನ್ನು ಕೋರಬೇಕಿತ್ತು. ಈ ಜವಾಬ್ದಾರಿಯನ್ನು ವೈಜ್ಞಾನಿಕವಾಗಿ ಅಧ್ಯಯನ ಮಾಡಿ, ವರದಿ ನೀಡಲು ಸಾಧ್ಯವಿರುವ ವಿಶ್ವವಿದ್ಯಾಲಯಗಳಿಗೆ ನೀಡಿದ್ದರೆ ಅದಕ್ಕೊಂದು ಅರ್ಥ, ಈ ಸಮುದಾಯಕ್ಕೆ ನ್ಯಾಯ ದೊರೆಯುತ್ತಿತ್ತು.

ಆದರೆ, ಎಥ್ನೋಗ್ರಾಫಿಕ್ ವರದಿ ಎಂದರೇನು ಎಂದು ತಿಳಿಯದ ನೌಕರಶಾಯಿಗೆ ಈ ಜವಾಬ್ದಾರಿ ನೀಡಿದ್ದು ಮಾತ್ರ ಈ ಸಮಿತಿಯ ವೈಫಲ್ಯವೆಂದು ಹೇಳಬೇಕು. ವೈಫಲ್ಯಕ್ಕೆ ಸ್ಪಷ್ಟ ಉದಾಹರಣೆ ಇಲ್ಲಿದೆ.

ತುಮಕೂರು ಜಿಲ್ಲಾಧಿಕಾರಿಗಳು ಈ ಕುರಿತಂತೆ ವಿಧಾನಸಭೆ ಅರ್ಜಿ ಸಮಿತಿಗೆ ತಮ್ಮ ಪತ್ರ ಸಂಖ್ಯೆ:ಟಿಸಕಅ:ಸಿಂಧುತ್ವ:ಸಿಆರ್:೫:೨೦೦೫-೦೬, ದಿನಾಂಕ ೦೫.೧೨.೨೦೦೫ ರಂತೆ ವರದಿ ಸಲ್ಲಿಸಿದ್ದು, ಸಂಕ್ಷಿಪ್ತ ವಿವರ ಹೀಗಿದೆ.

ಉಲ್ಲೇಖ ಪತ್ರದಲ್ಲಿ ಚೆನ್ನದಾಸ, ದೊಂಬಿದಾಸ, ಬೇಡದಾಸ, ಹಾಡುದಾಸ, ತಿರುಮಲದಾಸ, ಕಾಶಿದಾಸ, ಕೋಲೆಬಸವ, ದಾಸ ಮತ್ತು ಗೊಲ್ಲದಾಸ ಜಾತಿಗಳನ್ನು ಪರಿಶಿಷ್ಟ ಜಾತಿಗೆ ಸೇರಿಸುವ ಬಗ್ಗೆ ಕುಲಶಾಸ್ತ್ರೀಯ ವರದಿಯನ್ನು ಕಳುಹಿಸುವಂತೆ ತಿಳಿಸಲಾಗಿದ್ದು, ತಾಲ್ಲೂಕು ವ್ಯಾಪ್ತಿಯಲ್ಲಿ ಪರಿಶೀಲಿಸಿ ಇವುಗಳನ್ನು ಪರಿಶಿಷ್ಟ ಜಾತಿಗೆ ಸೇರಿಸುವ ಬಗ್ಗೆ ಕುಲಶಾಸ್ತ್ರೀಯ ವರದಿಯನ್ನು ಸಲ್ಲಿಸಲು ತಹಶೀಲ್ದಾರ್‌ರವರಿಗೆ

ತಿಳಿಸಿದ್ದು, ತಾಲ್ಲೂಕುಗಳಿಂದ ವರದಿ ಸ್ವೀಕೃತವಾಗಿದೆ. ವರದಿಯಲ್ಲಿ ಈ ಜಾತಿಯವರ ಬಗ್ಗೆ ತಾಲ್ಲೂಕಿನ ವ್ಯಾಪ್ತಿಯಲ್ಲಿ ಪರಿಶೀಲಿಸಿ, ಪರಿಶಿಷ್ಟ ಜಾತಿಗೆ ಸೇರಿಸುವ ಬಗ್ಗೆ ಸಲ್ಲಿಸಿರುವ ವರದಿ ಪ್ರಕಾರ, ತಾಲ್ಲೂಕುವಾರು ವರದಿ ಕೆಳಕಂಡಂತಿದೆ.

ತುಮಕೂರು ತಾಲ್ಲೂಕು ವ್ಯಾಪ್ತಿಯಲ್ಲಿ ಚನ್ನದಾಸರ್ ಪರ್ಯಾಯ ಜಾತಿಗಳಾದ ದಾಸ, ದಾಸಯ್ಯ, ದೊಂಬಿದಾಸ, ಶಂಕದಾಸ, ಉಪಜಾತಿಗಳ ಜನಾಂಗಗಳು ಇರುವುದಿಲ್ಲವೆಂದು ವರದಿ ಮಾಡಿರುತ್ತಾರೆ. ಇದೇ ರೀತಿ ಈ ಜಿಲ್ಲೆಯಲ್ಲಿರುವ ಪಾವಗಡ, ಸಿರಾ, ತಿಪಟೂರು, ಕೊರಟಗೆರೆ, ತುರುವೇಕೆರೆ, ಗುಬ್ಬಿ, ಚಿಕ್ಕನಾಯಕನಹಳ್ಳಿ, ಮಧುಗಿರಿ, ಕುಣಿಗಲ್ ಈ ತಾಲ್ಲೂಕುಗಳ ವ್ಯಾಪ್ತಿಯಲ್ಲಿ ಚನ್ನದಾಸರ ಜಾತಿಯ ಪರ್ಯಾಯ ಜಾತಿಗಳಾದ ದೊಂಬಿದಾಸ ಮತ್ತು ಇತರ ಜಾತಿಗಳಿಗೆ ಸೇರಿದವರು ವಾಸವಿಲ್ಲವೆಂದು ಆಯಾ ತಾಲ್ಲೂಕು ತಹಶೀಲ್ದಾರ್‌ರವರು ವರದಿ ನೀಡಿದ್ದಾರೆ ಎಂದು ತಿಳಿಸುತ್ತಾ, ಈ ವರದಿಯಲ್ಲಿನ ಅಂಶಗಳ ಸತ್ಯಾಸತ್ಯತೆಯನ್ನು ಪರಿಶೀಲಿಸುವ ಗೋಜಿಗೆ ಹೋಗದೆ ತುಮಕೂರು ಜಿಲ್ಲಾಧಿಕಾರಿಗಳು ಸಂಬಂಧಿಸಿದ ತಹಶೀಲ್ದಾರ್‌ಗಳು ನೀಡಿದ ವರದಿಯನ್ನು ಪರಿಗಣಿಸಬೇಕೆಂದು ಕೋರಿ ಸರ್ಕಾರಕ್ಕೆ ವರದಿ ಮಾಡಿದ್ದಾರೆ.

ಇದೆಂತಹ ಅನ್ಯಾಯ ನೋಡಿ. ವಾಸ್ತವ ಸಂಗತಿ ಎಂದರೆ ದೊಂಬಿದಾಸರೆಂದು ಕರೆಯಲ್ಪಡುವ ಜನಾಂಗ ಈ ಜಿಲ್ಲೆಯಲ್ಲಿ ಸಾವಿರಾರು ಸಂಖ್ಯೆಯಲ್ಲಿ ವಾಸವಾಗಿದ್ದಾರೆ. ಒಂದು ಜೀವಂತವಾದ ಸಮುದಾಯವನ್ನು ನಿರ್ಲಕ್ಷಿಸಿ ಅಪ್ಪಟ ಸುಳ್ಳುವರದಿಯನ್ನು ತನ್ನ ಬೇಜವಾಬ್ದಾರಿತನದಿಂದ ತಯಾರಿಸಿ ಕರ್ನಾಟಕ ವಿಧಾನಸಭೆ ಅರ್ಜಿಗಳ ಸಮಿತಿಯಂತ ಉನ್ನತ ಮಟ್ಟದ ಸಮಿತಿಗೆ ನೀಡಿದೆ. ಸಾವಿರಾರು ಸಂಖ್ಯೆಯಲ್ಲಿರುವ ಈ ಸಮುದಾಯವನ್ನು ಜೀವಂತವಾಗಿ ಕೊಲೆ ಮಾಡಿ ಮರಣ ಶಾಸನ ಬರೆದಂತ ಘೋರತನದ ಕೆಲಸ ಇದು. ಇದರಿಂದ ಸಮುದಾಯಕ್ಕೆ ಎಂತಹ ಘೋರ ಅನ್ಯಾಯ ನಡೆದಿದೆ ಎಂಬುದು ಸಾಬೀತಾಗುತ್ತದೆ. ಶತಮಾನಗಳಿಂದ ಈ ತರಹದ ಅನ್ಯಾಯಗಳ ಸರಮಾಲೆಯೇ ಈ ಜನಾಂಗದ ಮೇಲೆ ನಡೆದಿದೆ.

ಈ ಸಮುದಾಯ ಮೀಸಲಾತಿ ಅನುಭವಿಸಿದ್ದು ಕೇವಲ ೧೦ ವರ್ಷ ಮಾತ್ರ ಅಂದರೆ, ೧೯೬೭ ರಿಂದ ೧೯೭೭ರವರೆಗೆ. ೧೯೬೭ರಲ್ಲಿ ದೊಂಬಿದಾಸ ಜಾತಿಯನ್ನು ಅಂದು ಜಾರಿಯಲ್ಲಿದ್ದ (The list of karnataka State Nomadic Sami nomadic Tribes) ಪಟ್ಟಿಗೆ ಸೇರ್ಪಡೆಮಾಡಿ, ಕರ್ನಾಟಕ ಸರ್ಕಾರ ಆದೇಶ ಹೊರಡಿಸಿ ಮೀಸಲಾತಿ ಕಲ್ಪಿಸಿತು. ೧೯೭೭ರಲ್ಲಿ ಕರ್ನಾಟಕದಲ್ಲಿ ಹಾವನೂರು ಆಯೋಗದ ವರದಿ ಜಾರಿಗೆ ಬಂದು, ಈ ಪಟ್ಟಿ ಮೂಲೆಗುಂಪಾಗಿ, ಮೀಸಲಾತಿ ಸೌಲಭ್ಯ ಇಲ್ಲವಾಯಿತು. ಆಗತಾನೆ ಚೇತರಿಕೆ ಕಾಣುತ್ತಿದ್ದ ಸಮುದಾಯ ಮತ್ತೆ ಅದೋಗತಿಗೆ ಇಳಿಯಿತು.

ಈ ಸಮುದಾಯದ ಆರ್ಥಿಕ ಮತು ಸಾಮಾಜಿಕ ಸ್ಥಿತಿಗತಿಗಳನ್ನು ಕುರಿತಂತೆ ಕರ್ನಾಟಕದಲ್ಲಿ ರಚನೆಯಾದ ಹಿಂದುಳಿದ ವರ್ಗಗಳ ಆಯೋಗಗಳು ತಮ್ಮ ವರದಿಯಲ್ಲಿ ದಾಖಲಿಸಿರುವ ಮಾಹಿತಿಗಳತ್ತ ಸ್ವಲ್ಪ ಗಮನ ಹರಿಸೋಣ.

ಡಾ. ಆರ್. ನಾಗನಗೌಡರವರ ಅಧ್ಯಕ್ಷತೆಯಲ್ಲಿ ರಚನೆಗೊಂಡ ಮೈಸೂರು ಬ್ಯಾಕ್‌ವರ್ಡ್‌ಕ್ಲಾಸ್ ಕಮಿಟಿ ೧೯೬೦ರಲ್ಲಿನ ತನ್ನ ವರದಿಯಲ್ಲಿ ಕೋಷ್ಟಕ ೮ರ ಕ್ರಮ ಸಂಖ್ಯೆ ೧೬ ದಾಸ(ದಾಸರಿ) ಮತ್ತು ಕ್ರಮ ಸಂಖ್ಯೆ ೨೦ ದೊಂಬಿದಾಸರ ಕುರಿತಂತೆ ತನ್ನ ವರದಿಯಲ್ಲಿ ಹೀಗೆ ನಮೂದಿಸಿದೆ. "ಈ ಕೋಷ್ಟಕದಲ್ಲಿ ತೋರಿಸಿರುವ ಅಲೆಮಾರಿ ಸಮುದಾಯಗಳ ಜನಸಂಖ್ಯೆ ಮಾಹಿತಿ ಲಭ್ಯವಿಲ್ಲ ಇವರು ಸಾಮಾಜಿಕವಾಗಿ ಮತ್ತು ಶೈಕ್ಷಣಿಕವಾಗಿ ಅತ್ಯಂತ ಹಿಂದುಳಿದಿದ್ದು ಯಾವುದೇ ಅವಕಾಶಗಳು ದೊರೆತಿಲ" ಎಂದು ನಮೂದಿಸಿದ್ದಾರೆ.

ನ್ಯಾಯಮೂರ್ತಿ ಓ. ಚಿನ್ನಪ್ಪರೆಡ್ಡಿಯವರ ಎರಡನೆ ಹಿಂದುಳಿದ ವರ್ಗಗಳ ಆಯೋಗದ ವರದಿಯಲ್ಲಿ ದಾಸರಿ ಸಮುದಾಯವನ್ನು ಕುರಿತು ದಾಖಲಿಸಿರುವ ವಿವರಗಳಂತು ಈ ಸಮುದಾಯ ಅದೆಷ್ಟು ಹೀನಾಯ ಸ್ಥಿತಿಯಲ್ಲಿದೆ ಎಂಬುದನ್ನು ತೋರಿಸುತ್ತದೆ.

ಅ) ೧೯೭೭–೭೮ ಮತ್ತು ೧೯೮೩–೮೪ ರ ಅವಧಿಯಲ್ಲಿ ಒಟ್ಟು ೧೧೬ ಸರ್ಕಾರಿ ಇಲಾಖೆಗಳಲ್ಲಿ ಈ ಸಮುದಾಯಕ್ಕೆ ಸೇರಿದ ೯ ಜನ ಸರ್ಕಾರಿ ನೌಕರರಿದ್ದರು ಇದರಲ್ಲಿ ಒಬ್ಬ 'ಬಿ' ದರ್ಜೆ ಅಧಿಕಾರಿ ಮತ್ತು ೮ ಜನ 'ಸಿ' ದರ್ಜೆ ನೌಕರರು ಇದರ ಶೇಕಡವಾರು ಪ್ರಾತಿನಿಧ್ಯ ಶೇ. ೦.೦೨ ಮಾತ್ರ.

ಬ) ಕೆ.ಪಿ.ಎಸ್.ಸಿ. ಮೂಲಕ ಆಯ್ಕೆಯಾದವರು ಒಟ್ಟು ೦೭ ಜನ ಇದರಲ್ಲಿ 'ಎ' ದರ್ಜೆ ೧, 'ಬಿ' ದರ್ಜೆ ಅಧಿಕಾರಿಗಳು–೪, 'ಸಿ' ದರ್ಜೆಯವರು –೨ ಶೇ. ೦.೧೮

ಕ) ಸರ್ಕಾರದಿಂದ "ಚೈತನ್ಯ" ಸ್ಕೀಮ್‌ನಿಂದ ಸಹಾಯ ಪಡೆದವರ ಸಂಖ್ಯೆ – ೦೮. ಇದರ ಒಟ್ಟು ಮೊತ್ತ ರೂ ೫೮೫೫/– ಇದೇ ವರದಿ ಕೋಷ್ಟಕ – ೯ರಲ್ಲಿ ವಿವರಿಸಿರುವಂತೆ ದಾಸರಿ ಸಮುದಾಯದ ಒಟ್ಟು ಜನಸಂಖ್ಯೆ , ೪೨೭೩೩, ೧೯೮೫ರಲ್ಲಿ ಎಸ್.ಎಸ್.ಎಲ್.ಸಿ ಪರೀಕ್ಷೆಗೆ ಕುಳಿತವರ ಸಂಖ್ಯೆ; ೫೨, ತೇರ್ಗಡೆ ಯಾದವರು ೨೯ ಮಂದಿ, ಇದರ ಸರಾಸರಿ ೦.೬೭ ಮನೆ/ನಿವೇಶನ ಇಲ್ಲದವರು ಶೇ. ೮.೯೩, ಭೂಹೀನರು ಶೇ. ೫೩.೬೨, ವಾರ್ಷಿಕ ೫೦೦೦ ಕ್ಕಿಂತ ಕಡಿಮೆ ಆದಾಯ ಇರುವವರು ಶೇ. ೮೦.೬೪, ಸರ್ಕಾರಿ ನೌಕರಿಯಲ್ಲಿರುವವರು ಶೇ ೦.೩೪, ಅನಕ್ಷರಸ್ಥರ ಸಂಖ್ಯೆ ಶೇ. ೫೩.೪೭ ಹೀಗೆ ವಿವರಗಳು ಬಿಚ್ಚಿಕೊಳ್ಳುತ್ತವೆ.

ಇದೇ ವರದಿ ಪುಟ ಸಂಖ್ಯೆ – ೧೩೨ರಲ್ಲಿ ಕರ್ನಾಟಕದ ಮೊದಲ (IKBCC) ಹಿಂದುಳಿದ ವರ್ಗಗಳ ಆಯೋಗದಲ್ಲಿ (ಹಾವನೂರು) ದೊಂಬಿದಾಸರು, ದಂಗದಾಸರ್ ಒಳಗೊಂಡಂತೆ ಸುಮಾರು ೨೮ ಜಾತಿಗಳ ಜನಸಂಖ್ಯಾ ವಿವರಗಳು ಲಭ್ಯವಿಲ್ಲವೆಂದು ನಮೂದಾಗಿದೆ, ಇದರಿಂದ ಸ್ಪಷ್ಟವಾಗುವ ಅಂಶವೆಂದರೆ ಇವರ ಹಿನ್ನಲೆ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಸ್ಥಿತಿಗತಿಗಳ ಬಗ್ಗೆ ಸಮಗ್ರವಾಗಿ ಅಧ್ಯಯನ ಮಾಡದೆ(ಕುರುಡು ಕುರುಡಾಗಿ) ಅವೈಜ್ಞಾನಿಕವಾಗಿ ನೆಲೆನಿಂತ ಸಮುದಾಯಗಳ ಪಟ್ಟಿಯ ಜೊತೆ ಈ

ಸಮುದಾಯವನ್ನು ಸೇರಿಸಿ ಮೀಸಲಾತಿಯಿಂದ ವಂಚಿಸಿ ಅವರ ಬದುಕುವ ಹಕ್ಕನ್ನೇ ಕಸಿದು ಕೊಳ್ಳಲಾಗಿದೆ. ಮೀಸಲಾತಿ ಕಕ್ಷೆಯೊಳಗೆ ಸೇರಲು ಬೇಕಾದ ಎಲ್ಲಾ ಗುಣಲಕ್ಷಣಗಳು ಇದ್ದರು ವಂಚಿತರನ್ನಾಗಿ ಮಾಡಿರುವುದು ಮಾತ್ರ ಪರಮ ಅನ್ಯಾಯ. ಹೀಗೆ ಮೀಸಲಾತಿ ಅನ್ನೋದು ಈ ಸಮುದಾಯದ ಕೈಗೆ ನಿಲುಕದ ನಕ್ಷತ್ರದಂತಾಗಿದ್ದು ಗೊಂದಲದ ಗೂಡಾಗಿದೆ.

ಸಾಂಸ್ಕೃತಿಕವಾಗಿ ಅತ್ಯಂತ ಶ್ರೀಮಂತಿಕೆಯ ಹಿನ್ನೆಲೆಯುಳ್ಳ ಸಮುದಾಯ ಇದು. ತನ್ನ ನಿಸ್ವಾರ್ಥ ಸಾಂಸ್ಕೃತಿಕ ಬದುಕಿನ ಹಿನ್ನೆಲೆಯಲ್ಲಿ ಸಮಾಜದ ಅಡಿಪಾಯವನ್ನು ಗಟ್ಟಿಗೊಳಿಸಿ ತನ್ನ ಬದುಕನ್ನು ಮಾತ್ರ ಬರ್ಬರಗೊಳಿಸಿಕೊಂಡಿದೆ. ಹತ್ತು ಹಲವು ಜ್ವಲಂತ ಸಮಸ್ಯೆಗಳು ಈ ಸಮುದಾಯವನ್ನು ಕಾಡುತ್ತಿವೆ.

ಸ್ವಾತಂತ್ರ್ಯ ಪೂರ್ವದ ಇವರ ಬದುಕು ಪೂರ್ಣವಾಗಿ ಕಲಾವಿದರ ಬದುಕಾಗಿತ್ತು. ಕಲಾವಿದರು ಮತ್ತು ಜನಸಾಮಾನ್ಯರ ನಡುವೆ ಒಂದು ಅವಿನಾಭಾವ ಸಂಬಂಧ ವಿರುತ್ತಿತ್ತು. ಜನರು ಇವರ ಕಲೆಯನ್ನು ಗೌರವಿಸಿ ಬದುಕಿಗೆ ನೆರವಾಗುತ್ತಿದ್ದರು.

ಸ್ವಾತಂತ್ರ್ಯನಂತರ ನಮ್ಮದೇ ಆದ ಸಂವಿಧಾನ ರಚನೆಯಾಯಿತು. ಸರ್ವರಿಗೂ ಸಮಪಾಲು, ಸರ್ವರಿಗೂ ಸಮಬಾಳು ಘೋಷಣೆಗಳು ಮೊಳಗಿದವು.

ಜೊತೆಯಲ್ಲಿ ಆಧುನಿಕತೆ ಬೆಳೆದಂತೆ ಹೊಸ ಹೊಸ ವೈಜ್ಞಾನಿಕ ಆವಿಷ್ಕಾರಗಳು ಬಂದಂತೆ ಸಮಾಜದಲ್ಲಿ ತಲ್ಲಣಗಳು ಪ್ರಾರಂಭವಾದವು. ಸಂವಿಧಾನ ಬದ್ಧವಾಗಿ ಸಿಗಬೇಕಾದ ಸವಲತ್ತುಗಳನ್ನು ಯಾರು ಬಹುಸಂಖ್ಯಾತರಾಗಿದ್ದರೊ, ಅವಕಾಶಗಳನ್ನು ಬಾಚಿಕೊಳ್ಳಲು ಶಕ್ತರಿದ್ದರೊ ಅವರಿಗೆ ಮಾತ್ರ ದೊರೆತು ಅಶಕ್ತರಿಗೆ, ನೆಲೆ ಇಲ್ಲದೆ ಅಲೆಯುತ್ತಿದ್ದ ಮೈಕ್ರೋಸ್ಕೋಪಿಕ್ ಜನಾಂಗವಾದ ದೊಂಬಿದಾಸರಂತಹ ಅಲೆಮಾರಿ ಸಮುದಾಯಕ್ಕೆ ಸಂವಿಧಾನಬದ್ಧವಾದ ಸವಲತ್ತುಗಳು ತಲುಪಲಿಲ್ಲ.

ಈವತ್ತಿಗೂ ಸಮುದಾಯವನ್ನು ಕಾಡುತ್ತಿರುವ ಸಮಸ್ಯೆಯೆಂದರೆ, ಸಮಾಜದಲ್ಲಿ ತನ್ನನ್ನು ತಾನು ಗುರುತಿಸಿಕೊಳ್ಳುವುದು ಹೇಗೆ ಎಂಬುದು. ತನಗೊಂದು ಗುರುತು, ಸಮಾಜದಲ್ಲೊಂದು ಗೌರವಕ್ಕಾಗಿ ಸಮುದಾಯ ಹಾತೊರೆಯುತ್ತಿದೆ. ತನ್ನ ಪಾರಂಪರಿಕ ವೃತ್ತಿ ಜೀವನವನ್ನು ಬಿಟ್ಟು ಈಗ ನೆಲೆ ನಿಲ್ಲಲು ಮನಸ್ಸು ಮಾಡತೊಡಗಿದಂತೆ, ದುಡಿದು ತಿನ್ನಲು ಭೂಮಿ, ಪರ್ಯಾಯ ಉದ್ಯೋಗ, ತನ್ನ ಕಂದಮ್ಮಗಳಿಗೆ ಶಿಕ್ಷಣ ಬೇಕೆಂದು ಹಾತೊರೆಯುತ್ತಿದೆ. ಆದರೆ, ಇವುಗಳನ್ನು ಪಡೆಯುವ ಬಗೆ ಹೇಗೆ? ಕೊಡುವ ದಾತರಾರೆಂದು ಚಿಂತಿತಗೊಂಡಿದೆ. ದುರ್ಬಲರಿಗೆ ಮತ್ತು ಮತ ಬ್ಯಾಂಕ್ ಅಲ್ಲದ ಜನಗಳಿಗೆ ರಾಜಕೀಯ ಪಕ್ಷ ಮತ್ತು ಸರ್ಕಾರಗಳಿಂದ ನೆರವು ದೊರೆಯುವುದು ಮರಳುಗಾಡಿನಲ್ಲಿ ನೀರಿಗಾಗಿ ಹಾತೊರೆದಂತೆ.

ನಿರಕ್ಷರತೆ, ನಿರುದ್ಯೋಗ, ಬಡತನ, ಮೀಸಲಾತಿ ವಂಚನೆ, ರಾಜಕೀಯ ಸ್ಥಾನಮಾನ ಗಳಿಂದ ವಂಚನೆ, ತನ್ನ ದುಃಖ ದುಮ್ಮಾನಗಳನ್ನು ಹೇಳಿದರೆ ಕಿವಿಗೆ ಹಾಕಿಕೊಳ್ಳದ ದಪ್ಪ ಚರ್ಮದ ಸರ್ಕಾರಗಳಿಂದಾಗಿ ಈಗಲೂ ಸಮುದಾಯ ತನ್ನ ಹೊಟ್ಟೆಹೊರೆಯಲು

ಪಡಬಾರದ ಪಾಡು ಪಡುತ್ತಿದೆ. ವಾಸಕ್ಕೆ ಯೋಗ್ಯ ಮನೆ ಇಲ್ಲದೆ ಬಯಲಲ್ಲಿ ಟೆಂಟುಗಳನ್ನು ಹಾಕಿಕೊಂಡು, ಗುಡಿಸಲುಗಳನ್ನು ನಿರ್ಮಿಸಿಕೊಂಡು ಇನ್ನೂ ಕೆಲವೆಡೆ ಪಾಳು ಗುಡಿಗಳಲ್ಲಿ ಆಶ್ರಯಪಡೆದು, ಬಿಸಿಲು, ಚಳಿ, ಮಳೆ ಗಾಳಿಗಳಿಂದ ತನ್ನನ್ನು ತಾನು ರಕ್ಷಿಸಿಕೊಳ್ಳಲು ಪರದಾಡುತ್ತಿದೆ. ಕೈಯಲ್ಲಿ ಸ್ಲೇಟು ಬಳಪ ಹಿಡಿದು ಶಾಲೆಗೆ ಹೋಗಬೇಕಾದ ಮಕ್ಕಳು ಕಂಕುಳಲ್ಲಿ ಜೋಳಿಗೆ ಹಾಕಿಕೊಂಡು ಭಿಕ್ಷೆಗೊ, ಚಿಂದಿ ಹಾಯಲಿಕ್ಕೊ, ಬಾಲ ಕಾರ್ಮಿಕರಾಗಿ ದುಡಿಯಲಿಕ್ಕೊ ಹೋಗಬೇಕಾದ ಪರಿಸ್ಥಿತಿ ಇದೆ.

### ಸಾಮಾಜಿಕ ಹಿಂದುಳಿದಿರುವಿಕೆ

ಭಾರತದ ಶ್ರೇಣೀಕೃತ ವ್ಯವಸ್ಥೆಯಲ್ಲಿ ದೊಂಬಿದಾಸರು ಸಾಮಾಜಿಕ ಹಿಂದುಳಿದಿರುವಿಕೆಯಲ್ಲಿ ತೀರ ಕೆಳಸ್ತರದಲ್ಲಿ ಬರುತ್ತಾರೆ. ಸಮಾಜದ ಸಕಲೆಂಟು ಜಾತಿ ಜನಾಂಗದವರ ಸಂಪರ್ಕ ಇವರಿಗಿದ್ದು ಸ್ವಭಾವತಃ ಕಲಾವಿದರಾಗಿದ್ದರಿಂದ, ಇವರು ಹಾಡು ಮುಟ್ಟದ ಸೊಪ್ಪಿಲ್ಲ ಎಂಬಂತೆ ಧರ್ಮ, ಜಾತಿ, ಕುಲಗೋತ್ರಗಳನ್ನು ಮೀರಿ ಜನರೊಡನೆ ಸಂಪರ್ಕಕ್ಕೆ ಬರುತ್ತಿದ್ದರು. ಪುರಂದರದಾಸರಂತೆ, ಕನಕದಾಸರಂತೆ ಹಾಡಿಕೊಂಡು ಭಿಕ್ಷೆ ಬೇಡುತ್ತಿದ್ದುದರಿಂದ ಸ್ಪೃಶ, ಅಸ್ಪೃಶ್ಯ ಎಂಬ ತಾರತಮ್ಯವಿಲ್ಲದೆ ಎಲ್ಲರ ಮನೆಯಲ್ಲೂ ಭಿಕ್ಷೆ ಬೇಡುತ್ತಿದ್ದರು. ಇವರು ಒಂದು ರೀತಿಯ ಜಾತ್ಯಾತೀತ ಮನೋಭಾವ ವೃತ್ತಿಗಾಯಕರು.

ದಾಸ ಸಂಪ್ರದಾಯದ ವೃತ್ತಿಯಿಂದ ಭಿಕ್ಷುಕರಾದ ಇವರಲ್ಲಿ ಒಂದು ರೀತಿಯ ದಾರ್ಶನಿಕ ಸ್ಪರ್ಷ ಇದ್ದು, ಅಂದಿನ ಕಾಲದಲ್ಲಿ ಈ ಕಾರಣದಿಂದಾಗಿ ಸಾಮಾಜಿಕ ಕಿರುಕುಳ ಕಡಿಮೆ ಪ್ರಮಾಣದ್ದಾಗಿರಲೂ ಬಹುದು. ಅಸ್ಪೃಶ್ಯರ ಮನೆಯಲ್ಲೂ ಭಿಕ್ಷೆ ಬೇಡಿ ಬದುಕಿದರೂ, ಸಾಮಾಜಿಕವಾಗಿ ಸ್ಪೃಶ್ಯರು ಎಂಬುದೇ ಇವರಿಗೆ ಒಂದು ಹೆಗ್ಗಳಿಕೆ. ಆದರೆ, ಇವರ ಬದುಕಿನ ರೀತಿಗಳಿಗೆ ಆರ್ಥಿಕ, ಶೈಕ್ಷಣಿಕ ಮತ್ತು ರಾಜಕೀಯ ಸ್ಥಾನಮಾನಗಳನ್ನು ಗಮನಿಸಿದರೆ ಇವರ ಸಾಮಾಜಿಕ ಹಿಂದುಳಿದಿರುವಿಕೆಯ ಅಂತರ ಅಸ್ಪೃಶ್ಯತೆ ಎಂಬ ಅವಮಾನಕ್ಕಿಂತ ಒಂದು ತೂಕ ಹೆಚ್ಚು ಎಂದೇ ಹೇಳಬೇಕು. ಉತ್ತರ ಕರ್ನಾಟಕದ ಹಲವು ಜಿಲ್ಲೆಗಳಲ್ಲಿ ಹೊಲೆಯ ಮಾದಿಗರೊಡನೆ ವೈವಾಹಿಕ ಸಂಬಂಧ ಬೆಳಸಿಕೊಂಡು ಬಿಜಾಪುರ, ಬಾಗಲಕೋಟೆ ಜಿಲ್ಲೆಗಳಲ್ಲಿ ತಲತಲಾಂತರದಿಂದ ದೇವದಾಸಿಯಂತ ಅವಮಾನಕರ ವೃತ್ತಿಯನ್ನು ನಡೆಸುತ್ತಾ ಬಂದಿರುವ ಈ ಸಮುದಾಯ ಸಾಮಾಜಿಕವಾಗಿ ಅತ್ಯಂತ ಹಿಂದುಳಿದ ಸಮುದಾಯ ಎನ್ನುವುದರಲ್ಲಿ ಅನುಮಾನವಿಲ್ಲ.

### ಆರ್ಥಿಕವಾಗಿ ಹಿಂದುಳಿದಿರುವಿಕೆ

ಇದೊಂದು ಆರ್ಥಿಕವಾಗಿ ಏನೇನೂ ನೆಲೆ ಇಲ್ಲದ ಸಮುದಾಯ. ತಲೆಮಾರುಗಳಿಂದ ಎಲ್ಲಿಯೂ ನೆಲೆ ನಿಲ್ಲದೆ, ಅಲೆಮಾರಿಯಾಗಿಯೇ ಬದುಕು ಸವೆಸಿದೆ. ಯಾವುದೇ ವ್ಯಕ್ತಿಯ ಸಮುದಾಯದ ಆರ್ಥಿಕ ಸ್ಥಿತಿ ಪರಿಗಣನೆಯಾಗುವುದು

ಆತನ ವೃತ್ತಿ ಮತ್ತು ಆರ್ಥಿಕ ಮೂಲಗಳಿಂದ. ಆದರೆ ಈ ಸಮುದಾಯ ಆ ದಿನದ ಹೊಟ್ಟೆ ತುಂಬಿಸಿಕೊಳ್ಳಲು ಆ ದಿನವೇ ಸಂಪಾದಿಸಿಕೊಳ್ಳಬೇಕೆಂಬ ಮನೋಭಾವ ರೂಢಿಸಿಕೊಂಡಿತ್ತು. ಆರ್ಥಿಕ ಸಂಪತ್ತಿಗೆ ಮೂಲವಾದ ಭೂಮಿ, ನಿಶ್ಚಿತವಾದ ಉದ್ಯೋಗ ಈ ಯಾವುದರ ಬಗ್ಗೆಯೂ ತಲೆಕೆಡಿಸಿಕೊಂಡಿಲ್ಲ. ಅಲೆಮಾರಿತನದ ಗೀಳು ಈ ಸಮುದಾಯಕ್ಕೆ ಸಂಪತ್ತು ಗಳಿಸಿಕೊಳ್ಳುವ ಕಡೆಗೆ ಗಮನಕೊಡಲು ಅವಕಾಶವನ್ನೇ ಕೊಡಲಿಲ್ಲ.

ಜೀವನಕ್ಕಾಗಿ ಅವಲಂಬಿತವಾಗಿದ್ದ ಹಾಡುಗಾರಿಕೆ, ಭಿಕ್ಷಾವೃತ್ತಿ ಮತ್ತು ಬಯಲಾಟಗಳ ಕೇಳುಗರಿಲ್ಲದೆ ತನ್ನ ಛಾಪನ್ನು ಕಳೆದುಕೊಂಡಂತೆ, ಜೀವನಕ್ಕಾಗಿ ಬೇರೆ ಬೇರೆ ಕಸುಬುಗಳನ್ನು ಅವಲಂಬಿಸಬೇಕಾಯಿತು. ಅಲ್ಲಲ್ಲಿ ನೆಲೆ ನಿಂತವರು ಅಲ್ಪ ಸ್ವಲ್ಪ ಭೂಮಿ ಇದ್ದವರು ವ್ಯವಸಾಯ ಮಾಡತೊಡಗಿದರು. ಇಲ್ಲದವರು ಕೂಲಿ ನಾಲಿ, ಸಣ್ಣಪುಟ್ಟ ಸ್ಟೇಷನರಿ ವ್ಯಾಪಾರ ಟೇಪು, ಪಿನ್ನು, ಪೌಡರ್, ಬಳೆ ವ್ಯಾಪಾರ, ಬಟ್ಟೆ ವ್ಯಾಪಾರ, ಗುಜರಿ ವ್ಯಾಪಾರ ಮಾಡುತ್ತ ಜೀವನ ನಿರ್ವಹಣೆಗೆ ಆರ್ಥಿಕ ಮೂಲಗಳನ್ನು ಹುಡುಕಿಕೊಂಡರು. ಇವುಗಳಿಂದ ಜೀವನಕ್ಕೆ ಸಾಕಾಗುವಷ್ಟು ಹಣ ಸಂಪಾದಿಸುವುದು ಸಾಧ್ಯವಾಗುತ್ತಿಲ್ಲ. ಸಮುದಾಯ ಆರ್ಥಿಕ ಸಂಕಷ್ಟದಿಂದ ಬಳಲುತ್ತಿದ್ದು, ಅನಿಶ್ಚಿತ ದುಡಿಮೆ ಮತ್ತು ನಿರ್ದಿಷ್ಟವಾದ ಆದಾಯದ ಕೊರತೆಯಿಂದಾಗಿ ಆರ್ಥಿಕವಾಗಿ ಅತ್ಯಂತ ಹಿಂದುಳಿದಿದ್ದಾರೆ.

**ಶೈಕ್ಷಣಿಕವಾಗಿ ಹಿಂದುಳಿದಿರುವಿಕೆ**

ಶಿಕ್ಷಣ ಯಾವುದೇ ಸಮುದಾಯದ ಪ್ರಗತಿಯ ಸಂಕೇತ. ಶಿಕ್ಷಣ ದೊರಕದೆ ಸಮುದಾಯ ಮುಂದುವರಿಯಲು ಸಾಧ್ಯವಿಲ್ಲ. ಸಮಾಜದಲ್ಲಿ ಸ್ವಾಭಿಮಾನ ಮತ್ತು ಆತ್ಮಗೌರವದಿಂದ ಬದುಕಬೇಕಾದರೆ ಶಿಕ್ಷಣ ಅತ್ಯಂತ ಅವಶ್ಯಕ. ಆದರೆ, ಈ ಸಮುದಾಯ ಶಿಕ್ಷಣದಿಂದ ಬಹುದೂರ ಉಳಿದಿದೆ. ತನ್ನ ಪರಂಪರೆಯಲ್ಲಿ ಸಮಾಜಕ್ಕೆ ಜ್ಞಾನದ ಬೆಳಕನ್ನು ನೀಡುತ್ತಿದ್ದ ಇವರು ಈಗ ತಮ್ಮ ಮಕ್ಕಳಿಗೆ ಅಕ್ಷರ ಕಲಿಸುವ ಸ್ಥಿತಿಯಲ್ಲಿಲ್ಲ.

ನೆಲೆ ಇಲ್ಲದ ಬದುಕು, ಕಿತ್ತು ತಿನ್ನುವ ಬಡತನದ ನಡುವೆ ಜೀವನ ಸಾಗುತ್ತಿರುವ ಇವರು ತಮ್ಮ ಮಕ್ಕಳಿಗೆ ವಿದ್ಯೆ ಕಲಿಸುವ ಗೊಡವೆಗೆ ಹೋಗಿಲ್ಲ. ತಮ್ಮ ಜೊತೆ ತಮ್ಮ ಮಕ್ಕಳು ದುಡಿಮೆಗೆ ಬಂದರೆ ಜೀವನ ನಡೆಸುವುದು ಸುಗಮ ಎಂಬ ಧೋರಣೆ ಒಂದು ಕಡೆಯಾದರೆ, ಈ ತರಹದ ಅಲೆಮಾರಿ ಸಮುದಾಯದ ಶಿಕ್ಷಣ ಕ್ಕಾಗಿ ಸರ್ಕಾರದ ಕಡೆಯಿಂದ ವಿಶೇಷವಾದ ಕಾರ್ಯಕ್ರಮಗಳು ರೂಪುಗೊಳ್ಳ ದಿರುವುದೂ ಕೂಡ ಒಂದು ಕಾರಣ.

ದೊಂಬಿದಾಸ ಸಮುದಾಯ ಕರ್ನಾಟಕದ ಮೀಸಲಾತಿ ಪಟ್ಟಿಯಲ್ಲಿ ಹಿಂದುಳಿದ ವರ್ಗ ೧ರಲ್ಲಿ ಸೇರ್ಪಡೆಯಾಗಿದೆ. ಈ ಪಟ್ಟಿಯಲ್ಲಿ ಸಮಾಜದ ಕೆಲವು ಪ್ರತಿಷ್ಠಿತ ಮತ್ತು ಬಹುಸಂಖ್ಯಾತ ಜಾತಿಗಳು ಸೇರ್ಪಡೆಯಾಗಿರುವುದರಿಂದ, ಈ ಮೈಕ್ರೊಸ್ಕೋಪಿಕ್

ಸಮುದಾಯ ತನ್ನ ಪಾಲಿನ ಮೀಸಲಾತಿ ಸವಲತ್ತನ್ನು ಪಡೆದು ವಿದ್ಯಾಭ್ಯಾಸ ನಡೆಸುವುದು ಅಸಾಧ್ಯದ ಮಾತು. ಓದುವ ಆಸಕ್ತಿಯಿಂದ ಶಾಲಾ ಕಾಲೇಜು ಮತ್ತು ಸರ್ಕಾರ ನಡೆಸುವ ವಸತಿ ನಿಲಯಗಳಲ್ಲಿ ಪ್ರವೇಶ ಪಡೆಯಬೇಕಾದರೆ ಹೆಚ್ಚಿನ ಅಂಕಗಳನ್ನು ಪಡೆದು ಬಹುಸಂಖ್ಯಾತ ವಿದ್ಯಾರ್ಥಿಗಳ ಜೊತೆ ಸ್ಪರ್ಧೆಗೆ ಇಳಿದು ಸೀಟು ಗಿಟ್ಟಿಸಿಕೊಳ್ಳಬೇಕಾಗುತ್ತದೆ. ಇದು ಈ ಸಮುದಾಯದ ಮಕ್ಕಳಿಗೆ ಸಾಧ್ಯವೇ? ಎಂಬುದು ಪ್ರಶ್ನೆ. ಬಹುಸಂಖ್ಯಾತ ಮತ್ತು ನೆಲೆ ನಿಂತಿರುವ ಪ್ರಭಲ ಕೋಮುಗಳ ನಡುವೆ ಇವರು ತಮ್ಮ ಸಾಮರ್ಥ್ಯ ಮತ್ತು ಪ್ರತಿಭೆಯನ್ನು ಪ್ರದರ್ಶಿಸಿ ಶಿಕ್ಷಣ ಪಡೆಯುವುದು ಕನಸಿನ ಮಾತಾಗಿದೆ. ಈ ಸಮುದಾಯದ ಮಕ್ಕಳ ಶಿಕ್ಷಣಕ್ಕೆ ಪೂರಕವಾದ ವಿಶೇಷ ಅವಕಾಶಗಳು ಇಲ್ಲದ ಕಾರಣ ಶೈಕ್ಷಣಿಕವಾಗಿ ಅತ್ಯಂತ ಹಿಂದುಳಿದಿದೆ.

ಕೋಷ್ಟಕ: ೧೦.೧ ದೊಂಬಿದಾಸರ ಶೇಕಡಾವಾರು ಶೈಕ್ಷಣಿಕ ಮಟ್ಟ (೨೦೦೭)

| ಸಂ | ಶೈಕ್ಷಣಿಕ ಮಟ್ಟ | ಗಂಡು | ಹೆಣ್ಣು | ಒಟ್ಟು |
|---|---|---|---|---|
| ೧ | ಅಕ್ಷರಸ್ಥರು | ೧೬೪೫ | ೧೦೧೧ | ೨೬೫೬ |
| | ಶೇಕಡ | ೪೨.೩೭ | ೨೮.೪೩ | ೩೫.೭೧ |
| ೨ | ಅನಕ್ಷರಸ್ಥರು | ೨೨೩೭ | ೨೬೫೬ | ೪೭೮೧ |
| | ಶೇಕಡ | ೫೭.೬೨ | ೭೧.೫೭ | ೬೪.೨೮ |
| | ಒಟ್ಟು | ೩೮೮೨ | ೩೫೫೫ | ೭೪೩೭ |
| | | ೧೦೦.೦೦ | ೧೦೦.೦೦ | ೧೦೦.೦೦ |

ಕರ್ನಾಟಕದಲ್ಲಿ ವಾಸಿಸುವ ದೊಂಬಿದಾಸರ ೪ ವರ್ಷರೊಳಗಿನ ವಯೋಮಾನದ ಮಕ್ಕಳು ಶೇ೬.೧೩ ರಷ್ಟು ಇರುವರು. ಇವರನ್ನು ಹೊರತುಪಡಿಸಿ ಶಿಕ್ಷಣ ಪಡೆಯಲು ಯೋಗ್ಯರಾದವರು ಶೇ ೯೩.೭೬ರಷ್ಟಿದ್ದಾರೆ. ಆದರೆ, ಇವರಲ್ಲಿ ಸಾಕ್ಷರರಾದವರ ಪ್ರಮಾಣ ಕೇವಲ ಶೇ ೩೫.೭೧ (೨೦೦೭) ರಷ್ಟು ಎಂಬುದು ಪ್ರಸ್ತುತ ಸಮೀಕ್ಷೆಯಿಂದ ತಿಳಿದುಬರುತ್ತದೆ. ಈ ಸಾಕ್ಷರತೆಯಲ್ಲಿ ೨೦ರಷ್ಟು ಜನ ಕೇವಲ ಮೆಟ್ರಿಕ್ ನಂತರದ ಹಂತದವರೆಗೆ ತಲುಪಿರುವರು. ಅದರಲ್ಲಿ ಪುರುಷರ ಸಾಕ್ಷರತಾ ಪ್ರಮಾಣಕ್ಕಿಂತ ಮಹಿಳೆಯರ ಸಾಕ್ಷರತಾ ಪ್ರಮಾಣ ತುಂಬಾ ಕಡಿಮೆ ಇರುವುದು. ಕರ್ನಾಟಕ ರಾಜ್ಯದ ಎಲ್ಲ ಸಮುದಾಯಗಳ ಸರಾಸರಿ ಸಾಕ್ಷರರ ಪ್ರಮಾಣ ಶೇಕಡಾ ೬೬.೬೪ (೨೦೦೧ರ ಜನಗಣತಿ). ದೊಂಬಿದಾಸರಲ್ಲಿ ಅನಕ್ಷರಸ್ಥರ ಪ್ರಮಾಣವು ೬೪.೨೮ರಷ್ಟಿದೆ. ರಾಜ್ಯದ ಸರಾಸರಿ ಶಿಕ್ಷಣ ಮತ್ತು ದೊಂಬಿದಾಸ ಸಮುದಾಯದ ನಡುವಿರುವ ಶಿಕ್ಷಣದ ಅಂತರ ೨೮.೯೩. ಇದು ಇವರ ಶೈಕ್ಷಣಿಕ ಹಿಂದುಳಿದಿರುವಿಕೆಯನ್ನು ಸೂಚಿಸುವುದು.

**ಕೋಷ್ಟಕ: ೧೦.೨ ದೊಂಬಿದಾಸರ ಶೈಕ್ಷಣಿಕ ಸ್ಥಾನಮಾನ (೨೦೦೭)**

| ವಿವರ | ಗಂಡು | ಹೆಣ್ಣು | ಒಟ್ಟು |
|---|---|---|---|
| ಒಟ್ಟು ಜನಸಂಖ್ಯೆ | ೪೧೪೩ | ೩೭೮೦ | ೭೯೨೩ |
| ಸಾಕ್ಷರತೆಗೆ ಅನರ್ಹರು (೪ ವರ್ಷದ ಒಳಗಿನವರು) | ೨೬೧ | ೨೨೫ | ೪೮೬ |
| ಸಾಕ್ಷರತೆಗೆ ಅರ್ಹರು (೪ ವರ್ಷದ ಮೇಲ್ಪಟ್ಟವರು) | ೩೮೮೨ | ೩೫೫೫ | ೭೪೩೭ |
| ಸಾಕ್ಷರರು | ೧೬೪೫ | ೧೦೧೧ | ೨೬೫೬ |
| **ಮೆಟ್ರಿಕ್ ಪೂರ್ವ ಸಾಕ್ಷರತೆ** | **೧೨೬೪** | **೮೭೫** | **೨೧೩೯** |
| ಪ್ರಾಥಮಿಕ | ೩೭೭ | ೩೨೬ | ೭೦೩ |
| ಮಾಧ್ಯಮಿಕ | ೨೯೭ | ೨೨೮ | ೫೨೫ |
| ಪ್ರೌಢ | ೫೯೦ | ೩೨೧ | ೯೧೧ |
| **ಮೆಟ್ರಿಕ್ ನಂತರ ಸಾಕ್ಷರತೆ** | ೩೮೧ | ೧೩೬ | ೫೧೭ |
| ಪದವಿಪೂರ್ವ | ೨೦೫ | ೯೭ | ೩೦೨ |
| ಡಿಪ್ಲೊಮ | ೨೭ | ೧೦ | ೩೭ |
| ಪದವಿ | ೯೨ | ೨೪ | ೧೧೬ |
| ಸ್ನಾತಕೋತ್ತರ | ೧೪ | ೪ | ೧೮ |
| ಇತರೆ | ೪೩ | ೧ | ೪೪ |
| ಅನಕ್ಷರಸ್ಥರು | **೨೨೩೭** | **೨೬೫೬** | ೪೭೮೧ |

**ಕೋಷ್ಟಕ: ೧೦.೩ ದೊಂಬಿದಾಸರ ಶೈಕ್ಷಣಿಕ ಅಂತರ (೨೦೦೭)**

| ವಿವರ | ಸಾಕ್ಷರತೆ | ಅಂತರ |
|---|---|---|
| ಭಾರತ (೨೦೦೧) | ೬೪.೮೪ | ೨೯.೧೩ |
| ಕರ್ನಾಟಕ (೨೦೦೧) | ೬೬.೬೪ | ೩೦.೯೩ |
| ದೊಂಬಿದಾಸ (೨೦೦೭) | ೩೫.೭೧ | |

ದೊಂಬಿದಾಸರ ಸಾಕ್ಷರತೆಗಾಗಿ ವಿಶೇಷ ಯೋಜನೆಗಳನ್ನು ರೂಪಿಸುವುದು ಅಗತ್ಯವಾಗಿದೆ.

**ರಾಜಕೀಯವಾಗಿ ಹಿಂದುಳಿದಿರುವಿಕೆ**

ರಾಜಕೀಯವಾಗಿ ಈ ಸಮುದಾಯದ ಪಾಲುಗಾರಿಕೆ ಶೂನ್ಯ. ಸ್ವಾತಂತ್ರ್ಯ ಬಂದು ೬೫ ವರ್ಷ ಕಳೆದಿದ್ದರೂ ರಾಜಕೀಯವಾಗಿ ಒಬ್ಬನೇ ಒಬ್ಬ ಪ್ರತಿನಿಧಿ ಈ ಸಮುದಾಯವನ್ನು ಪ್ರತಿನಿಧಿಸುತ್ತಿಲ್ಲ. ಗ್ರಾಮ ಪಂಚಾಯಿತಿ ಮಟ್ಟದಿಂದ ಪಾರ್ಲಿಮೆಂಟ್

ವರೆಗೆ ರಾಜಕೀಯ ಸ್ಥಾನಮಾನಗಳು ಸಾವಿರಾರು ಇದ್ದರು ಇವರಿಗೆ ದಕ್ಕಿರುವುದು ಅಲ್ಲೊಂದು ಇಲ್ಲೊಂದು ಗ್ರಾಮ ಪಂಚಾಯಿತಿ ಸದಸ್ಯತ್ವ ಮಾತ್ರ. ಈವರೆವಿಗೂ ಈ ಸಮುದಾಯವನ್ನು ಪ್ರತಿನಿಧಿಸುವ ಒಬ್ಬನೆ ಒಬ್ಬ ತಾಲ್ಲೂಕು ಪಂಚಾಯಿತಿ ಸದಸ್ಯನಾಗಲಿ, ಜಿಲ್ಲಾ ಪಂಚಾಯಿತಿ ಸದಸ್ಯನಾಗಲಿ ಇಲ್ಲವೇ ಇಲ್ಲ.

ಡಾ ಬಿ ಆರ್ ಅಂಬೇಡ್ಕರ್ ಸಂವಿಧಾನದ ಕರಡು ಪ್ರತಿಯನ್ನು ಸಂಸತ್ತಿಗೆ ಸಲ್ಲಿಸುವಾಗ ಭಾರತದ ದಲಿತ ವರ್ಗಗಳಿಗೆ ಸಂಬಂಧಿಸಿದಂತೆ ಎದುರಾಗಿರುವ ವಿಲಕ್ಷಣ ಪರಿಸ್ಥಿತಿಯನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದರು. ಸಾಮಾಜಿಕ ಆರ್ಥಿಕ ಸಮಾನತೆ ಇಲ್ಲದ ವ್ಯವಸ್ಥೆಯಲ್ಲಿ ದಲಿತ ವರ್ಗಗಳಿಗೆ ಕರಡು ಸಂವಿಧಾನವು ಕೇವಲ ರಾಜಕೀಯ ಸಮಾನತೆಯನ್ನು ಒದಗಿಸುವುದಾಗಿಯೂ, ಈ ಅವಕಾಶವೇ ಸಾಮಾಜಿಕ, ಆರ್ಥಿಕ ಅಸಮಾನತೆಯ ನಾಶಕ್ಕೆ ಪ್ರಧಾನ ಅಸ್ತ್ರವಾಗಬೇಕೆಂದು ಅವರು ಆಶಿಸಿದ್ದರು. ಅಂಬೇಡ್ಕರ್ ಅವರ ಈ ರಾಜಕೀಯ ಅಸ್ತ್ರ ದೊಂಬಿದಾಸರ ಪಾಲಿಗೆ ಬತ್ತಳಿಕೆಯಲ್ಲಿನ ಉಪಯೋಗಕ್ಕೆ ಬಾರದ ನಿಶಸ್ತ್ರವಾಗಿಯೇ ಉಳಿಯಿತು.

ಕರ್ನಾಟಕ ಸರ್ಕಾರ ಜಾರಿಗೆ ತಂದ ರಾಜಕೀಯ ಮೀಸಲಾತಿಯ ದ್ವಂದ್ವ ನೀತಿ ಕನಿಷ್ಟ ಗ್ರಾಮ ಪಂಚಾಯಿತಿ ಚುನಾವಣೆಗೆ ನಿಂತು ಸ್ಪರ್ಧಿಸಲಾಗದ ಸ್ಥಿತಿ ನಿರ್ಮಾಣ ಮಾಡಿದೆ. ಈ ಸಮುದಾಯ ಪ್ರಸ್ತುತ ಹಿಂದುಳಿದ ವರ್ಗ ೧ ರಲ್ಲಿ ಚುನಾವಣೆಗೆ ಸ್ಪರ್ಧಿಸಬಹುದಾಗಿದೆ. ಆದರೆ, ಸ್ಥಳೀಯ ಸಂಸ್ಥೆಗಳ ಈಗಿನ ರಾಜಕೀಯ ಮೀಸಲಾತಿಯ ನ್ವಯ ವರ್ಗ ೨ರಲ್ಲಿರುವ ಬಹು ಸಂಖ್ಯಾತರು ಮತ್ತು ಬಲಿಷ್ಠ ಜಾತಿಗಳು ವರ್ಗ ೧ರಲ್ಲಿ ಮೀಸಲಾಗಿರುವ ಸ್ಥಾನಗಳಿಗೆ ಸ್ಪರ್ಧಿಸಲು ಅವಕಾಶ ಮಾಡಿಕೊಟ್ಟಿರುವುದರಿಂದ, ಹಿಂದುಳಿದ ವರ್ಗ ೧ರ ಪಟ್ಟಿಯಲ್ಲಿರುವ ದೊಂಬಿದಾಸರು ಬಹುಸಂಖ್ಯಾತರ ಅಬ್ಬರದ ನಡುವೆ ಮೀಸಲಾತಿ ಇದ್ದರೂ ಸ್ಪರ್ಧಿಸುವ ಅವಕಾಶ ಇಲ್ಲವಾಗಿದೆ. ವಾಸ್ತವವಾಗಿ ವರ್ಗ ೧ ರಲ್ಲಿರುವ ಜಾತಿಗಳಿಗೆ ಮಾತ್ರ ವರ್ಗ ೧ ರಲ್ಲಿ ಮೀಸಲಿರುವ ಸ್ಥಾನಗಳಿಗೆ ಸ್ಪರ್ಧಿಸುವಂತಿರಬೇಕಿತ್ತು. ಈ ಅವೈಜ್ಞಾನಿಕ ನೀತಿಯಿಂದಾಗಿ ಒಂದು ಗ್ರಾಮ ಪಂಚಾಯಿತಿ ಮಟ್ಟದ ಸದಸ್ಯತ್ವ ಪಡೆಯುವುದೂ ಸಹ ಅಸಾಧ್ಯವಾಗಿದೆ.

**ಸಲಹೆಗಳು ಮತ್ತು ಪರಿಹಾರಗಳು**

ಈ ಸಮುದಾಯ ಹತ್ತು ಹಲವು ಸಮಸ್ಯೆಗಳಿಂದ ಬಳಲುತ್ತಿದೆ. ತಲೆಮಾರುಗಳಿಂದ ಜನ ಸಮುದಾಯದ ನಡುವೆಯೇ ಬದುಕುತ್ತಿದ್ದರು ಮುಖ್ಯವಾಹಿನಿಯಿಂದ ಬಹು ದೂರ ಉಳಿದಿದ್ದಾರೆ. ಸಂವಿಧಾನ ಬದ್ಧವಾಗಿ ಸಿಗಬೇಕಾದ ಕೆಲವು ಮೂಲಭೂತ ಸವಲತ್ತು ದಕ್ಕಿಲ್ಲ. ತನ್ನದೇ ಆದ ಮನೆ ಮಠ, ಭೂಮಿ, ಉದ್ಯೋಗ, ಮಕ್ಕಳಿಗೆ ವಿದ್ಯೆ, ಸಮಾಜದಲ್ಲಿ ಗೌರವಯುತವಾಗಿ ಬದುಕಲು ಅವಕಾಶವಿಲ್ಲದೆ ಬವಣೆ ಪಡುತ್ತಿದೆ.

ಅವೈಜ್ಞಾನಿಕ ಮೀಸಲಾತಿಯಿಂದಾಗಿ ಸಮುದಾಯ ಬಹಳ ತೊಂದರೆ ಅನುಭವಿಸುತ್ತಿದೆ. ಈ ಎಲ್ಲಾ ಕಾರಣಗಳಿಂದಾಗಿ ಈ ಸಮುದಾಯದ ಸರ್ವತೋಮುಖ ಅಭಿವೃದ್ಧಿಗಾಗಿ ಕೆಲವು ಪರಿಹಾರೋಪಾಯಿಗಳನ್ನು ಇಲ್ಲಿ ಸೂಚಿಸಿದೆ.

೧ ಮೂಲದಲ್ಲಿ ಒಂದೇ ಆದ ದಾಸರಿ ಸಮುದಾಯವನ್ನು ಭೌಗೋಳಿಕವಾಗಿ ಬೇರೆ ಬೇರೆ ಹೆಸರುಗಳಿಂದ ಗುರುತಿಸಲಾಗುತ್ತಿದೆ. ಒಂದು ಕಡೆ ಚೆನ್ನದಾಸರ್, ಮಾಲದಾಸರ್ ಎಂದು ಕರೆದು ಪರಿಶಿಷ್ಟ ಜಾತಿ ಪಟ್ಟಿಯಲ್ಲಿ ಸೇರಿಸಿದರೆ, ಇದೇ ಸಮುದಾಯವನ್ನು ಮತ್ತೊಂದು ಕಡೆ ದೊಂಬಿದಾಸರು, ದಂಗ ದಾಸರ್, ಚಕ್ರ ವಾದ್ಯದಾಸ, ದಾಸರಿ ಎಂದು ಕರೆದು ಹಿಂದುಳಿದ ವರ್ಗಗಳ ಪಟ್ಟಿ ಪ್ರವರ್ಗ ೧ ರಲ್ಲಿ ಸೇರಿಸಿ ಮೀಸಲಾತಿಯಿಂದ ವಂಚಿಸಲಾಗಿದೆ. ಆದ್ದರಿಂದ ಹಿಂದುಳಿದ ವರ್ಗ ಪ್ರವರ್ಗ ೧ರಲ್ಲಿರುವ ಈ ಎಲ್ಲಾ ಪದಪುಂಜಗಳನ್ನು ಚನ್ನದಾಸರ್ ಜಾತಿಯ ಪರ್ಯಾಯ ಪದಗಳೆಂದು ಪರಿಗಣಿಸಿ ಸರ್ಕಾರದಿಂದ ಸೂಕ್ತ ತಿದ್ದುಪಡಿ ಆದೇಶ ಹೊರಡಿಸಿ ಎಲ್ಲರಿಗೂ ಪರಿಶಿಷ್ಟ ಜಾತಿ ಪ್ರಮಾಣ ಪತ್ರ ನೀಡುವಂತೆ ಆಯಾ ಜಿಲ್ಲಾಧಿಕಾರಿಗಳಿಗೆ ಆದೇಶ ನೀಡಬೇಕು.

೨ ಅಲೆಮಾರಿಗಳಾಗಿ ಈಗಲೂ ಸಂಚಾರ ಮಾಡುತ್ತಲೆ ತಮ್ಮ ಬದುಕನ್ನು ಕಳೆದುಕೊಳ್ಳುತ್ತಿರುವ ಸಮುದಾಯವನ್ನು ಒಂದೆಡೆ ನೆಲೆ ನಿಲ್ಲುವಂತೆ ಮಾಡುವುದು ಅವರ ಸರ್ವತೋಮುಖ ಅಭಿವೃದ್ಧಿಯ ದೃಷ್ಟಿಯಿಂದ ತೀರ ಅವಶ್ಯಕವಾಗಿದೆ. ಈ ದೃಷ್ಟಿಯಿಂದ ಪ್ರಥಮವಾಗಿ ಸಮುದಾಯವನ್ನು ಗುರುತಿಸಿ ವಾಸಿಸಲು ಯೋಗ್ಯವಾದ ಮನೆಗಳನ್ನು ಎಲ್ಲಾ ಮೂಲಭೂತ ಸೌಕರ್ಯಗಳನ್ನೊಳಗಂಡಂತೆ ನಿರ್ಮಿಸಿ ನವಗ್ರಾಮ ಗಳ ಮಾದರಿಯಲ್ಲಿ ನಿರ್ಮಾಣ ಮಾಡಿಕೊಡುವುದು.

೩ ತಮ್ಮ ಅಲೆಮಾರಿತನದಿಂದಾಗಿ ಬಹಳಷ್ಟು ಜನ ಈಗಲೂ ಸಂವಿಧಾನಬದ್ಧ ಪರಮಾಧಿಕಾರವಾದ ಮತ ಚಲಾಯಿಸುವ ಹಕ್ಕಿನಿಂದ ವಂಚಿತರಾಗಿದ್ದಾರೆ. ಇವರನ್ನು ಗುರುತಿಸಿ ಮತದಾರರ ಪಟ್ಟಿಯಲ್ಲಿ ನೋಂದಣಿ ಮಾಡಿಸಿ ಮತದಾನದ ಗುರುತಿನ ಚೀಟಿ ಮತ್ತು ರೇಷನ್ ಕಾರ್ಡ್‌ಗಳನ್ನು ವಿತರಿಸುವುದು.

೪ ಈ ಭೂಮಿಯ ಮೇಲೆ ತಮಗೂ ಹಕ್ಕಿದೆ, ತಾವೂ ವಾಸಿಸಲು ಅರ್ಹರು ಎಂಬುದನ್ನು ಮನದಟ್ಟು ಮಾಡಿಕೊಡಲು ಈ ಸಮುದಾಯದಲ್ಲಿರುವ ಎಲ್ಲಾ ಭೂ ಹೀನರನ್ನು ಗುರುತಿಸಿ ತಲಾ ಕನಿಷ್ಠ ೩ ಎಕರೆಯಷ್ಟು ಭೂಮಿಯನ್ನು ಮಂಜೂರು ಅಥವಾ ಖರೀದಿಸಿ ಕುಟುಂಬದ ಹೆಸರಿಗೆ ನೋಂದಣಿ ಮಾಡಿಸಿ ವ್ಯವಸಾಯ ಮಾಡಲು ಬೇಕಾದ ಪಶು ಸಂಪತ್ತು, ಸಾಮಗ್ರಿಗಳು, ಬಿತ್ತನೆ ಬೀಜಗಳನ್ನೊಳ ಗೊಂಡಂತೆ ಎಲ್ಲಾ ಮೂಲಭೂತ ಸೌಕರ್ಯಗಳನ್ನು ಕಲ್ಪಿಸಿಕೊಡುವುದು. ಆ ಮೂಲಕ ಈ ನಾಡಿನಲ್ಲಿ ತನಗೂ ಭೂ ಒಡೆತನ ಇದೆ ಎಂಬ ಆತ್ಮ ವಿಶ್ವಾಸ ಮೂಡಿಸುವುದು.

೫ ಶತಮಾನದಿಂದ ಶಿಕ್ಷಣದಿಂದ ವಂಚಿತರಾಗಿರುವ ಇವರ ಮಕ್ಕಳಿಗೆ ಪ್ರಾಥಮಿಕ ಶಿಕ್ಷಣದಿಂದ ಉನ್ನತ ಶಿಕ್ಷಣದವರೆಗೆ ಯಾವುದೇ ನಿರ್ಬಂಧವಿದಿಸದೆ ಸಂಪೂರ್ಣವಾಗಿ ಉಚಿತ ಶಿಕ್ಷಣ ನೀಡಲು ಅನುಕೂಲವಾಗುವಂತೆ ಶಿಕ್ಷಣ ಪ್ಯಾಕೇಜ್ 'ರೂಪಿಸಿ ಕಾನೂನು ಬದ್ಧವಾಗಿ ಅನುಷ್ಠಾನಕ್ಕೆ ತರುವುದು.

೭ ಸಮುದಾಯದಲ್ಲಿರುವ ಯುವಕ, ಯುವತಿಯರು ಉದ್ಯೋಗವಿಲ್ಲದೆ ಜೀವನ ನಡೆಸಲು ತುಂಬ ಕಷ್ಟಪಡುತ್ತಿದ್ದು, ಈ ಯುವ ಶಕ್ತಿಗೆ ಜಾಗತೀಕರಣದಿಂದಾಗಿ ಸೃಷ್ಟಿಯಾಗುತ್ತಿರುವ ಉದ್ಯೋಗಗಳನ್ನು ಪಡೆಯಲು ಅನುಕೂಲವಾಗುವಂತೆ ಆಯಾ ಕ್ಷೇತ್ರಕ್ಕೆ ಸಂಬಂಧಿಸಿದಂತೆ ವಿಸೇಷ ತರಬೇತಿಗಳನ್ನು ಕೊಡಿಸಿ, ಉದ್ಯೋಗಾವಕಾಶಗಳು ದೊರೆಯುವಂತೆ ಮಾಡುವುದು.

೭ ಸ್ವಯಂ ಉದ್ಯೋಗ ಮತ್ತು ಸಣ್ಣಪುಟ್ಟ ವ್ಯಾಪಾರ ಮಾಡಲು ಅನುಕೂಲ ವಾಗುವಂತೆ ಸರ್ಕಾರಿ ಸ್ವಾಮ್ಯದ ಬ್ಯಾಂಕುಗಳು ಮತ್ತು ಕಾರ್ಪೊರೇಷನ್‌ಗಳ ಮೂಲಕ ಕಡಿಮೆ ಬಡ್ಡಿದರದಲ್ಲಿ ಸಾಲ ಸೌಲಭ್ಯಗಳು ಮತ್ತು ಸಬ್ಸಿಡಿಗಳನ್ನು ಮಂಜೂರು ಮಾಡುವಂತೆ ಕಾನೂನು ರೂಪಿಸಿ ಜಾರಿಗೆ ತರುವುದು.

೮ ಲ್ಯಾಂಪ್ ಸೊಸೈಟಿ ಮಾದರಿಗಳಲ್ಲಿ ಅಲೆಮಾರಿ ಸಮುದಾಯಗಳ ಅಭಿವೃದ್ಧಿಗಾಗಿ ಸಹಕಾರ ಸಂಸ್ಥೆಗಳನ್ನು ಸ್ಥಾಪನೆ ಮಾಡಿ, ಸರ್ಕಾರದಿಂದ ಆರ್ಥಿಕ ನೆರವು ನೀಡಿ ಸಹಕಾರ ತತ್ವದ ಆಶಯದಂತೆ ಸಮುದಾಯದ ಅಭಿವೃದ್ಧಿಗೆ ಪೂರಕವಾಗಿ ಕಾರ್ಯಕ್ರಮ ರೂಪಿಸಿ ಜಾರಿಗೊಳಿಸುವುದು.

೯ ಪ್ರೋತ್ಸಾಹವಿಲ್ಲದೆ ಅವಸಾನದ ಅಂಚಿನಲ್ಲಿರುವ ಇವರ ಪಾರಂಪರಿಕ ಕಲೆಯಾದ ಹಾಡುಗಾರಿಕೆ, ಬಯಲಾಟದಂತಹ ಅಭಿಜಾತ ಕಲೆಯನ್ನು ಈ ತಲೆಮಾರಿನ ಯುವಕ, ಯುವತಿಯರಲ್ಲೂ ನೆಲೆಗೊಳ್ಳುವಂತೆ ಮಾಡಲು ಗುರುಶಿಷ್ಯ ಪರಂಪರೆ ರೂಪದಲ್ಲಿ ಕಲಿಕಾ ಕೇಂದ್ರಗಳನ್ನು ಸ್ಥಾಪಿಸಿ ಆರ್ಥಿಕ ಸಹಾಯ ನೀಡಿ ಜೀವಂತ ಗೊಳಿಸುವುದು. ಈ ಸಮುದಾಯದಲ್ಲಿರುವ ಎಲ್ಲಾ ಕಲಾವಿದರಿಗೂ ಈಗ ಇರುವ ನಿರ್ಬಂಧಗಳನ್ನು ಸಡಿಲಿಸಿ ಕಲಾವಿದರ ಮಾಶಾಸನಗಳನ್ನು ಮಂಜೂರು ಮಾಡುವುದು.

೧೦ ಪರಂಪರಾಗತವಾಗಿ ಸಾಂಸ್ಕೃತಿಕ ಹಿನ್ನೆಲೆಯುಳ್ಳ ಈ ಸಮುದಾಯದ ಪ್ರತಿನಿಧಿಗಳನ್ನು ಜನಪದ ಮತ್ತು ಯಕ್ಷಗಾನ ಅಕಾಡೆ, ನಾಟಕ ಅಕಾಡೆಮಿ, ಲಲಿತ ಕಲಾ ಅಕಾಡೆಮಿ ಮತ್ತು ವಿವಿಧ ಪ್ರಾಧಿಕಾರಗಳಿಗೆ ಸದಸ್ಯರನ್ನಾಗಿ ನೇಮಕ ಮಾಡಿ ಈ ಸಾಂಸ್ಕೃತಿಕ ಸಂಸ್ಥೆಗಳಲ್ಲಿ ಸಕ್ರಿಯವಾಗಿ ಭಾಗವಹಿಸುವಂತೆ ಮಾಡುವುದು.

೧೧ ರಾಜ್ಯ, ಜಿಲ್ಲೆ ಮತ್ತು ತಾಲ್ಲೂಕು ಮಟ್ಟದ ಸಹಕಾರಿ ಬ್ಯಾಂಕುಗಳು, ವ್ಯವಸಾಯ ಸೇವಾ ಸಹಕಾರ ಸಂಘಗಳು, ಟಿಎಪಿಸಿಎಂಎಸ್‌ನಂತಹ ಸಹಕಾರ ಸಂಸ್ಥೆಗಳಿಗೆ ನಿರ್ದೇಶಕರು/ಸದಸ್ಯರನ್ನಾಗಿ ಸರ್ಕಾರದ ವತಿಯಿಂದ ನೇಮಕ ಮಾಡುವುದು. ಆ ಮೂಲಕ ಈ ಸಹಕಾರಿ ಸಂಸ್ಥೆಗಳಲ್ಲಿ ತಮ್ಮ ಪಾಲನ್ನು ಪಡೆಯಲು ಅವಕಾಶ ಮಾಡಿಕೊಡುವುದು.

೧೨ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ರಾಜಕೀಯ ಪ್ರಾತಿನಿಧ್ಯದಿಂದ ಸಂಪೂರ್ಣ ವಂಚಿತರಾಗಿರುವ, ನೇರ ಚುನಾವಣೆಗಳಲ್ಲಿ ಸ್ಪರ್ಧಿಸಿ ಚುನಾಯಿತರಾಗಲು ಸಾಧ್ಯವಿಲ್ಲದ್ದರಿಂದ ಈ ಸಮುದಾಯದವರನ್ನು ಸ್ಥಳೀಯ ಸಂಸ್ಥೆಗಳನ್ನೊಳಗೊಂಡಂತೆ ವಿಧಾನಸಭೆ, ವಿಧಾನ ಪರಿಷತ್ತು, ಲೋಕಸಭೆ, ರಾಜ್ಯಸಭೆ, ಜಿಲ್ಲಾ ಪಂಚಾಯಿತಿ,

ತಾಲ್ಲೂಕು ಪಂಚಾಯಿತಿಗಳಿಗೆ ನಾಮಕರಣ ಮಾಡಿ ರಾಜಕೀಯ ಪ್ರಾತಿನಿಧ್ಯತೆ ನೀಡುವುದು, ಆ ಮೂಲಕ ರಾಜಕೀಯ ಅಧಿಕಾರ ಪಡೆದು ಆಡಳಿತದಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುವಂತೆ ಮಾಡುವುದು.

೧೩. ಈ ಸಮುದಾಯದ ಸಮಗ್ರ ಅಭಿವೃದ್ಧಿಯನ್ನು ಗಮನದಲ್ಲಿಟ್ಟುಕೊಂಡು ಅಭಿವೃದ್ಧಿ ಪ್ಯಾಕೇಜ್ ತಯಾರಿಸಿ ಜಾರಿಗೊಳಿಸುವುದು.

೧೪ ರಾಜ್ಯದಲ್ಲಿ ವಾಸವಿರುವ ಎಲ್ಲಾ ಅಲೆಮಾರಿ ಅರೆ ಅಲೆಮಾರಿ ಸಮುದಾಯಗಳ ಸಮಗ್ರ ಅಭಿವೃದ್ಧಿಗೆ ಅಲೆಮಾರಿ ಅರೆ ಅಲೆಮಾರಿ ಅಭಿವೃದ್ಧಿ ನಿಗಮ ಸ್ಥಾಪನೆ ಮಾಡಿ ಕೇಂದ್ರ ಮತ್ತು ರಾಜ್ಯ ಸರ್ಕಾರಗಳಿಂದ ನೇರ ಅನುಧಾನ ಬಿಡುಗಡೆ ಮಾಡುವುದು.

೧೫ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು SC/ST ಗಳಿಗಾಗಿಯೇ ಸ್ಥಾಪಿತವಾಗಿರುವ ಆಯೋಗಗಳ ಮಾದರಿಯಲ್ಲಿ ರಾಜ್ಯದಲ್ಲಿಯೂ ಶಾಶ್ವತವಾಗಿ ಅಲೆಮಾರಿ ಅರೆ ಅಲೆಮಾರಿ ಆಯೋಗ Nomads and Semi Nomads Commission ಸ್ಥಾಪನೆ ಮಾಡುವುದು.

ಈಗ ಇರುವ ಮೀಸಲಾತಿ ವ್ಯವಸ್ಥೆಯಲ್ಲಿ ಒಟ್ಟಾರೆಯಾಗಿ ಅಲೆಮಾರಿ ಸಮುದಾಯ ಗಳಿಗೆ ಯಾವುದೇ ಪ್ರಯೋಜನವಾಗುತ್ತಿಲ್ಲ. ದೊಡ್ಡ ಮೀನು, ಸಣ್ಣ ಮೀನನ್ನು ನುಂಗಿ ಹಾಕುವಂತೆ ಬಹುಸಂಖ್ಯಾತ ಸಮುದಾಯಗಳು ಈ ಮೀಸಲಾತಿಯನ್ನು ಸಂಪೂರ್ಣವಾಗಿ ಕಬಳಿಸುತ್ತಿವೆ. ರಾಜ್ಯದಲ್ಲಿ ವಾಸವಿರುವ ಅಲೆಮಾರಿಗಳನ್ನೆ ಒಂದು ಪಟ್ಟಿ ಮಾಡಿ, ಅವರ ಜನಸಂಖ್ಯೆಗೆ ಅನುಗುಣವಾಗಿ ಮೀಸಲಾತಿ ಪ್ರಮಾಣ ನಿಗಧಿ ಪಡಿಸಿ ಆ ಸಮುದಾಯಡವರಿಗೆ ದಕ್ಕುವಂತೆ ಮಾಡುವುದು ತೀರ ಅಗತ್ಯ. ಈ ನಿಟ್ಟಿನಲ್ಲಿ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಚಿಂತಿಸಿ, ಈ ನೀತಿಯನ್ನು ಜಾರಿಗೊಳಿಸುವುದು ಅವಶ್ಯವಿದೆ.

## ಅನುಬಂಧಗಳು ೧

## ಕಥನ ಕಾವ್ಯಗಳು

**ಕೆಂಪೇಗೌಡ**

ಅಯ್ಯನಾಡುಗಾರರ ಮಾಗಡಿಲಿ
ನಾಡುಗಾರ ನಂಜೇಗೌಡ ತಂದಾನತಾನೆ
ಮುವ್ವತ್ಮೂರು ಜನಸಂಖ್ಯೆ
ಅರಮನೆ ಒಕ್ಕಲುತನ
ಹಳೆರಾಗಿ ಹುಳಿಮಜ್ಜಿಗೆ
ಉಂಟಾದ ಸಂಸ್ಥಾನ
ನಾಡುಗಾರ ನಂಜೇಗೌಡ
ಮಗನಿಗೆ ಹೆಣ್ಣಿಗಾಗಿ
ಏಳು ಜತೆ ಮೆಟ್ಟು ಸವೆದೊ
ಹೆಣ್ಣು ಮಾತ್ರ ಸಿಕ್ಕಲಿಲ್ಲ
ಅಯ್ಯ ಇಂತಪ್ಪ ಒಕ್ಕಲುತನಕೆ
ಹೆಣ್ಣು ಸೂತ್ರ ಸಿಕ್ಕಲಿಲ್ಲ
ಅಯ್ಯ ಮನೆಯ ಹಣವೆಲ್ಲ
ಖರ್ಚೆ ಆಗಿ ಹೋಯಿತಲ್ಲ
ಆಯ್ಯ ಯಲಹಂಕಕ್ಕೋದನಯ್ಯ
ಹರಿಯಮ್ಮನ ನೋಡುತಾರೆ
ನಂಜೇಗೌಡನ ಹೆಂಡತಿ ಆಗ
ಕುಪ್ಪಮ್ಮ ತಾಯಿಯು
ಒಂಬತ್ತು ತಿಂಗಳ ಬಿಮ್ಮನಸೆ ತಾನು
ಕುಪ್ಪಮ್ಮ ತಾಯಿಯು
ಗಂಡು ಮಗುವನು ಹಡೆದಾಳು
ಶುಕ್ರವಾರದ ದಿನದಲ್ಲಿ
ಮಗನುಹುಟ್ಟಿದ ಮಾರುದೆಸೆ
ಸೊಸೆ ಬಂದ ಕಾಲುದೆಸೆ
ಹಿರೆ ಮಗ ತಿಮ್ಮೇಗೌಡನಿಗೆ
ಸುಖ ಸೋಬನ ಮಾಡಿಸ್ಯಾನು
ಮೂವತ್ಮೂರು ಮಂದಿಯಲ್ಲಿ
ಮೂರು ಜನ ಉಳಿದಾರು
ತಿಥಿ ಮಾಡಲು ಹಣವೆಯಿಲ್ಲ

ಬಾಳ ಬಡಸ್ತಾನ ಬಂದೈತೆ ಅಲ್ಲಿ
ತಿಥಿಗಾಗಿ ಅಣ್ಣೋಜಿ ತಾವು
ತಮ್ಮೋಜಿ ತಾವು ಹಣವನ್ನು
ಸಾವನ್ನೆ ಮಾಡುತಾರೆ
ತಿಥಿಯನ್ನೆ ಮಾಡುತಾರೆ
ತಿಥಿಯಾದ ಬೆಳಗ್ಗೆ ಆದರೆ
ಸಾಲದೋರೆ ಬಂದರಯ್ಯ
ಅಮ್ಮ ಸಾಲವನ್ನು ಕೊಡದಿದ್ದರೆ
ಅಡವು ಆಸ್ತಿಬರೆದುಕೊಡೆ
ಸಾಲಗಾರ ಹಿಂಸೆ ತಡೆಯಲಾರದೆ
ಅಡವು ಆಸ್ತಿ ಬರೆದುಕೊಟ್ರು
ಬರೆದುಕೊಟ್ಟ ಬೆಳಗ್ಗೆ ಆಗ
ಬಿಡಿ ಮನೆಯ ಎಂದರಯ್ಯ
ಮೂರು ತಿಂಗಳು ಮಗುವಾಗ
ಮೈದ ಕೆಂಪೇಗೌಡನಿಗೆ
ಗಡಿಗೆ ಮಡಕೆ ತುಂಬಿಕೊಂಡು
ಮೈದುನನ ಎತ್ತಿಕೊಂಡು
ಕಣ್ಣು ಕಾಣದ ಕುಪ್ಪಮ್ಮನ
ಕೈನಾದರೆ ಹಿಡಿದುಕೊಂಡು
ಮಂಗಲವಾರ ದಿನವಾದರೆ
ಮಾಗಡಿ ಪಟ್ಟಣವ ಬಿಟ್ಟು
ಯಲಹಂಕ ನಮ್ಮ ತೌರೂರಿಗೆ
ಹೋಗೋಣ ನಡಿಯತ್ತೆ
ಅತ್ತೆ ಕುಪ್ಪಮ್ಮ ಏನಂದಳಾಗ
ಕೆಟ್ಟು ತೌರುಮನೆಗೆ ಹೋಗಬಾರದು
ಕೆಟ್ಟು ತೌರುಮನೆಗೆ ಹೋಗಬಾರದು
ಅತ್ತೆ ಮಾತ ಮೀರಿ ಹರಿಯಮ್ಮ
ಈಗ ಕರೆದುಕೊಂಡೆ ಹೋಗುತಾಳೆ
ಹರಿಯಮ್ಮನ ತಾಯಿ ತಂದೆ
ಮಾತನಾಡಿಸಲಿಲ್ಲವಯ್ಯ
ಆಗ ನೋಡುತಾಳೆ ಹರಿಯಮ್ಮ
ಬಾಳ ದುಃಖವೆ ಬರುತ್ತೈತೆ
ಆಗ ಅತ್ತೆ ಕೇಳೇ ಕುಪ್ಪಮ್ಮ
ತೌರು ಮನೆಗೆ ಹೋಗಬಾರ್ದು
ಆಗ ಹಿಂದಕೆ ಕರೆದುಕೊಂಡು
ಬರುತಾಳೆ ಹರಿಯಮ್ಮ
ಮಾಗಡಿ ಧರ್ಮ ಚಾವಡಿಯ

ಸೇರಿಕೊಂಡರು ಮೂರು ಜನವು
ಉಣ್ಣೋಕಾದರೆ ಅನ್ನವಿಲ್ಲ
ಉಡುವುದಕೆ ಬಟ್ಟೆಯಿಲ್ಲ
ತಿಂದ ಹಾಲಲಿ ಮೈದನನ್ನ
ಸಾಕುತಾಳೆ ಹರಿಯಮ್ಮ
ನೋಡುತಾರೆ ಹಾರುವರು
ಧರ್ಮ ಚಾವಡಿಲಿರುವುದನ್ನು
ಅಣ್ಣ ಏನಾದರು ಮಾಡಿ
ಇವರ ಚಾವಡಿ ಬಿಟ್ಟು ಓಡಿಸಬೇಕು
ಅಮ್ಮ ಇಲ್ಲಿ ನೀವಿರಕೂಡದು
ಊರಬಿಟ್ಟು ಹೋಗಬೇಕು
ಆಗ ಧರ್ಮ ಚಾವಡಿ ಬಿಟ್ಟು
ಹಿಪ್ಪೆ ತೋಪಿಗೆಹೋಗುತಾರೆ
ಆಗ ಸೊಪ್ಪಿನ ಗುಡಿಸಲು ಕಟ್ಟುತಾಳೆ
ಅತ್ತಿಗೆ ಹರಿಯಾಲದೇವಿ
ಅಯ್ಯ ಏಳುಬರಲ ತರುತಾಳೆ
ಏಳು ದುಡ್ಡಿಗೆ ಮಾರುತಾಳೆ
ಅಯ್ಯ ಏಳು ದುಡ್ಡಿನ ಅಕ್ಕಿಪಡಿಯ
ತರುತಾಳೆ ಹರಿಯಮ್ಮ ತಾಯಿ
ಬಾಳ ಕಷ್ಟದ ಜೀವನವು
ಅವರ ಪಾಲಿಗೆ ಬಂದಿತಲ್ಲ
ಒಂದು ವರುಷವಾಯಿತಲ್ಲ
ಎರಡು ವರ್ಷ ತುಂಬಿತಯ್ಯ
ಅಯ್ಯ ಮೂರು ವರ್ಷವಾಯಿತು
ನಾಲ್ಕು ವರ್ಷವೆ ಆಯಿತು
ಅಯ್ಯ ಐದು ವರ್ಷವೆ ಆಯಿತು
ಆರು ವರ್ಷವಾಯಿತು
ಅಯ್ಯ ಏಳು ವರ್ಷವಾಯಿತು
ಎಂಟು ವರ್ಷವಾಯಿತು
ಆಗ ಒಂಬತ್ತು ವರ್ಷವಾಯಿತು
ಹತ್ತು ವರ್ಷವಾಯಿತು
ಆಗ ಹನ್ನೊಂದುವರ್ಷ ಆಯಿತು
ಹನ್ನೆರಡು ವರ್ಷ ಆಯಿತು
ಹನ್ನೆರಡು ವರ್ಷದ ಮಗನಾಗಿ
ಮೈದಯ್ಯ ಕೆಂಪೇಗೌಡ
ಅತ್ತಿಗೆ ನಾನು ಬರಲ ಮಾರೋಕೆ
ಬರುತೀನಿ ನಾನು ಅತ್ತಿಗಮ್ಮ

ಬೇಡಕಾಣೊ ಕೆಂಪೇಗೌಡ
ನೀನು ಪೇಟೆಗೆ ಬರಬೇಡ
ಆಗ ಅತ್ತಿಗೆ ಮಾತ ಮೀರಿ
ಹೊರಟವ್ನೆ ಪೇಟೆಗೆ
ಆಗ ಬರಲೆಂದು ಕೂಗುತಾಳೆ
ಅತ್ತಿಗೆ ಹರಿಯಮ್ಮ
ನೋಡುತಾರೆ ಹಾರುವಣ್ಣ
ಗುರುಕಾರರು ನೋಡ್ಯಾರೆ
ಅಣ್ಣ ನೋಡಿದೇನೊ ಅನ್ನೋಕೆ
ಬಡ ಒಕ್ಕಲರುಟುಗಿರೊ ಸೊಗಸನ್ನು
ಅಣ್ಣ ಏನಾದರೂ ಮಾಡಿ ಇವನ
ನಮ್ಮ ಮನೆಯಲಿಟ್ಟು ಕೊಂಡರೆ
ಎಂದು ಓಡಿ ಬಂದರು ಮಾಡಿ ಇಳಿದು
ಹರಿಯಮ್ಮನ ಬಳಿಗಾಗ
ಅಮ್ಮ ನಿಮ್ಮ ಮೈದ ಕೆಂಪೇಗೌಡನ
ನಮ್ಮ ಮನೆಯಲಿ ಇರಿಸಿರಮ್ಮ
ಸ್ವಾಮಿ ಆ ಮಾತ ಅನ್ನೊಬೇಡಿ
ನನ್ನ ಮೈದನ ಇರಿಸೋದಿಲ್ಲ
ಎಂದು ಸಿಟ್ಟುಬರೊ ಮಾತನಾದರೆ
ಆಡುತಾಳೆ ಹರಿಯಾಲಮ್ಮ
ಆಗ ಸಮಯವನ್ನೆ ಕಾಯುತಾರೆ
ಅಣ್ಣಾ ತಮ್ಮ ಹಾರುವರು
ಅಯ್ಯ ಎಳು ಬರಲು ಮಾರುತಾಳೆ
ಅತ್ತಿಗೆ ಹರಿಯಾಲಮ್ಮ
ಮೈದುನ ಕೆಂಪೇಗೌಡನ
ಆಗ ತಿರಿದಾಲಲ್ಲಿ ಸಾಕುವಳೆ
ತಿರುಗಿ ಈಚಲ ಬೆಟ್ಟಕೋಗಿ
ಏಳು ಬರಲ ಕಟ್ಟುತಾಳೆ
ಬರಲನಾದರೆ ಹೊತ್ತುಕೊಂಡು
ಗುಡಿಸಲ ಬಳಿಗೆ ಬರುತಾಳೆ
ಆಗ ಮನೆಯ ಬಳಿಗೆ ಬರೋಹೊತ್ತಿಗೆ
ಸಳಿಜರವೆ ಬಂದಾವೆ
ಅಯ್ಯ ಏನಪ್ಪ ಮಾಡೋದು
ಬರಲ ಮಾರೋಕಾಗೊದಿಲ್ಲ
ಅಮ್ಮ ಏತಕಮ್ಮ ನಿನಗೆ ಯೋಚನೆ
ನಾನೆ ಬರಲ ಮಾರುತೀನಿ
ಕಂದ ಬೇಡಕಾಣೊ ನನ್ನ ಕಂದ

ಪೇಟೆಗೆ ನೀ ಹೋಗಬೇಡ
ಅಮ್ಮ ಪೇಟೆಗೆ ನಾನೋದರೂವೆ
ಹಾರವರ ಬೀದಿಗೋಗೊದಿಲ್ಲ
ಎಂದು ಅತ್ತಿಗೆಗೆ ಹೇಳವ್ನೆ
ಬರಲ ತಕೊಂಡು ಹೊರಟವ್ನೆ
ಹೋಗಿ ಮಾಗಡಿಯ ಒಕ್ಕಲರ ಬೀದೀಲಿ
ಬರಲು ಎಂದು ಕೂಗುತಾನೆ
ಬರಲು ಎಂದು ಕೂಗಿದ ದನಿಯ
ಕೇಳಿಕೊಂಡರು ಹಾರುವರು
ಅಣ್ಣ ನೋಡಿದೇನೊ ಕೆಂಪೇಗೌಡ
ಒಬ್ಬನೇ ಈಗ ಬಂದವ್ನೆ
ಎಂದು ಮಾಡಿ ಇಳಿದು ಓಡಿಬಂದು
ಕೆಂಪೇಗೌಡನ ಹಿಡದುಕೊಂಡ್ರು
ಕೇಳೊ ಕೇಳೊ ಕೆಂಪೇಗೌಡ
ನಮ್ಮ ಮಾತ ನೀನು ಕೇಳೊ
ಅಯ್ಯ ಹಾಲು ಅನ್ನ ಇಕ್ಕುತೀವಿ
ಸಂಬಳ ನಿನಗೆ ಕೊಡುತೀವಿ
ಅಯ್ಯ ಕೆಲಸ ನೀನು ಮಾಡಬೇಡ
ನಮ್ಮ ಹಿಂದೆ ತಿರುಗಾಡಿಕೊಂಡಿರು
ಎಂದು ಏಳು ಬರಲ ತಕ್ಕೊಂಡರು
ಏಳು ದುಡ್ಡ ಕೈಗೆ ಕೊಟ್ರು
ಅಯ್ಯ ಮಂಚದ ಮೇಲೆ ಕುಂಡಿಸ್ಯಾರು
ಹಾಲು ಅನ್ನ ಊಟಕ್ಕಿಟ್ರು
ಆಗ ಊಟಮಾಡೊ ಸಮಯದಲ್ಲಿ
ಎರಡು ರಟ್ಟೆ ಹಿಡಿದುಕೊಂಡ್ರು
ಅಯ್ಯ ಬರುವೋದು ನಿಜವೆ ಆದ್ರೆ
ಹೆಬ್ಬೆಟ್ಟ ಒತ್ತಪ್ಪ
ಆಗ ಒಪ್ಪಂದವ ಮಾಡಿದರು
ಮಾಗಡಿಯ ಕೆಂಪೇಗೌಡ
ಮನೆಗಾದರೆ ಬರುತಾನೆ
ಅತ್ತಿಗೆಗೆ ಹೇಳುತಾನೆ
ಅಮ್ಮ ನಾನಾದರೆ ಹಾರುವರ
ಮನೆಗೆ ಸಂಬಳಕೋಗುತೀನಿ
ಆಗ ಜ್ವರ ಬಂದು ನೆರಳುತಿದ್ದ
ಅತ್ತಿಗೆ ಹರಿಯಮ್ಮ ತಾಯಿ
ಕಂದ ಬೇಡಕಾಣೊ ನನ್ನ ಕಂದ
ಹಾರುವರ ಮನೆಗೋಗಬೇಡ

ಆಗ ಅತ್ತಿಗಮ್ಮನ ಮಾತ ಮೀರಿ
ಹೊರಟು ಹೋದ ಸಂಬಳಕ್ಕೆ
ಕಂದ ಇಂಥ ಕಷ್ಟಪಟ್ಟು ನಿನ್ನ
ಸಾಕಿದೇನೊ ನನ್ನ ಕಂದ
ನನಗೆ ಉತ್ತರ ಹೇಳಿ ನೀನು
ಹೋಗುತೀಯ ನನ್ನ ಕಂದ
ಎಂದು ಬಾಳವಾಗಿ ದುಃಖವನ್ನ
ಮಾಡುತಾಳೆ ಅತ್ತಿಗೆ ಹರಿಯಮ್ಮ
ಅಯ್ಯ ಬಂದ ನೀನು ಕೂಲಿಕೆಂಪ
ಬಂದನೀನು ಕೆಂಪೇಗೌಡ
ಅಯ್ಯ ಕೂಲಿಕೆಂಪ ಎಂದ ಮಾತ
ಕೇಳಿದನು ಕೆಂಪೇಗೌಡ
ಅಯ್ಯ ಮಾಗಡಿಗೆ ಮೂಡಲಾಗಿ
ಮೂವ್ವತ್ತು ಎಕರೆ ಜಾಗೀರಿ
ಅಯ್ಯ ಮುವ್ವತ್ತು ಎಕರೆ ಜಾಗೀರಿಗೆ
ಮುಳ್ಳು ಬೇಲಿ ಹಾಕಬೇಕು
ಅಯ್ಯ ಹಗಲು ಅಣ್ಣೋಜಿ ಕಾವಲು
ಇರುಳು ತಮ್ಮೋಜಿ ಕಾವಲು
ಕಗ್ಗಲ ರಾಗಿ ಮುದ್ದೆ ಕಾಣೊ
ಮುಗ್ಗಲುರಳಿ ಸಾರು ಕಾಣೊ
ಅಯ್ಯ ಬಾಳಕಷ್ಟ ಬಂದಿತಯ್ಯ
ಮಾಗಡಿ ಕೆಂಪೇಗೌಡನಿಗೆ
ಆಗ ಒಂದು ನಿಮಿಷ ನಿಂತುಕೊಂಡ್ರೆ
ಬಾಳೆ ಕಂಬ ಸುತ್ತುತಾರೆ
ಅಯ್ಯ ಎತ್ತಲಾರದ ಗುಂಬಕೊಟ್ರು
ಎತ್ತಲಾರದ ಗುದ್ದಲಿಕೊಟ್ರು
ಮುವ್ವತ್ತು ಎಕರೆ ಜಾಗೀರಿಗೆ
ಮುಳ್ಳು ಬೇಲಿ ಕಟ್ಟಿಸ್ಯಾರು
ಅಯ್ಯ ಹಗಲು ನಿದ್ರೆ ಇಲ್ಲವಲ್ಲ
ಇರುಳು ನಿದ್ರೆ ಇಲ್ಲವಲ್ಲ
ಒಂದು ವರ್ಷ ವಾಯಿತಯ್ಯ
ಎರಡು ವರ್ಷವಾಯಿತಯ್ಯ
ಅತ್ತಿಗೆ ಹರಿಯಾಲದೇವಿ
ಬಾಳ ವ್ಯಥೆಯ ಪಡುತಲವಳೆ
ಆಗ ಮೂರು ವರ್ಷವಾಯಿತಯ್ಯ
ನಾಲ್ಕು ವರ್ಷವಾಯಿತು
ಒಂದು ನಿಮಿಷ ನಿಂತುಕೊಂಡರೆ

ಹುಣಸೆ ಬರಲಲಿ ಹೊಡೆಯುತಾರೆ
ಅಯ್ಯ ಕೆಂಪೇಗೌಡ್ನ ತಾಯಿಯಾದರೆ
ಕೆಂಪೆಗೌಡ್ನ ಮೇಗಳ ಆಸೆಯಿಂದ
ಪ್ರಾಣವನ್ನೆ ಬಿಟ್ಟಳಾಗ
ಆಗ ಅತ್ತಿಗೆ ಹರಿಯಮ್ಮ
ಓಡಿ ಅವನ ಬಳಿಗೆ ಬಂದಳು
ಕಂದ ನಿಮ್ಮ ತಾಯಿ ಸತ್ತಳು
ಮುಕವನಾದರೆ ನೋಡುಬಾರೊ
ಆಗ ಅಂಗಂದ ಮಾತಕೇಳಿ
ಅಣ್ಣೋಜಿ ತಮ್ಮೋಜಿ ತಾವು
ಹೋಗಿ ಹೋಗಿ ಹರಿಯಮ್ಮ
ತೋಟದೊಳಕ್ಕೆ ನೀನು ಬರಬೇಡ
ಅಂತಪ್ಪ ಮಾತ ಕೇಳಿ
ಮಾಗಡಿಯ ಕೆಂಪೇಗೌಡ
ಸ್ವಾಮಿ ಬೇಗನೋಗಿ ಅಜ್ಜಿ ಮುಕವ
ನೋಡಿಕೊಂಡು ಬರುತೀನಿ
ಅಜ್ಜಿ ಮೊಕವ ತೋರಿಸಿದರು
ಅಣ್ಣೋಜಿ ತಮ್ಮೋಜಿದೀರು
ಅತ್ತಿಗೆ ಹರಿಯಮ್ಮ ತಾಯಿ
ಒಬ್ಬಳೇ ಕಷ್ಟಪಟ್ಟು
ಅಯ್ಯ ಎಂತಪ್ಪ ಸಂಸ್ಥಾನಕೆ
ಏನು ಗತಿಯೆ ಬಂದಿತಯ್ಯ
ಮನೆದೇವರು ರಂಗಧಾಮ
ಕುಲದೇವರು ರಂಗಧಾಮ
ಆಗ ರಂಗಧಾಮನ ದಯೆ ಬಂತು
ಕೆಂಪೇಗೌಡನ ಮೇಲೆ ಆಗ
ಆಗ ಯಾಕಾಸಿ ಹಬ್ಬಕಾದರೆ
ತೊಟತಾವು ಒಬ್ಬನೇ ಬಿಟ್ರು
ಅಯ್ಯ ಬಾಳ ಆಯಾಸವಾಗಿ
ಬಾಳೆ ಎಲೆಯ ಕುಯ್ಕೊಂಡು
ಒಂದು ಎಲೆಯ ಹಾಸಿಕೊಂಡು
ಒಂದು ಎಲೆಯ ಹೊದ್ದುಕೊಂಡು
ಆಗ ಮಲಗ್ಯಾನು ಆವೊತ್ತು
ಅಲ್ಲಿಗೆ ಹನ್ನೆರಡು ವರ್ಷವು
ಮಾಗಡಿಯ ರಂಗಧಾಮ
ಏಳು ಹೆಡೆಯ ಸರ್ಪವಾಗಿ ಬಂದ
ಅಯ್ಯ ಮಲಗಿದ್ದ ಕೆಂಪೇಗೌಡನ

ಎದೆಯ ಮೇಲೆ ಮಲಗ್ಯಾನು
ಅಣ್ಣೋಜಿ ತಮ್ಮೋಜಿ
ಸ್ವಪ್ನನಾದರೆ ಕಂಡರಲ್ಲ
ಅಣ್ಣಾ ಕೆಂಪೆಗೌಡನಿಗೆ
ಇನ್ನು ದೊರೆತನ ಬರುತೈತೆ
ಅಣ್ಣ ನಡಿಯಣ್ಣ ತೋಟತಾಕೆ
ಬೇಗ ಎಂದು ಬಂದರಾಗ
ಆಗ ಓಡೋಡಿ ಬರುತಾರೆ
ತೋಟದ ಹತ್ತಿರಾಕೆ
ಅಯ್ಯ ತೋಟದ ಒಳಗೆಲ್ಲ
ಕೆಂಪೇಗೌಡ್ನ ನೋಡುತಾರೆ
ಬಾಳೆ ಗಿಡದ ನೆರಳಿನಲ್ಲಿ
ಮನಿಗವ್ನೆ ಕೆಂಪೇಗೌಡ
ಮಕಕ್ಕೆ ಬಿಸಿಲು ಒಡೆಯುತ್ತೈತೆ
ಹೆಡೆಯ ನೆರಳು ಮಾಡಿಕೊಂಡು
ಅಯ್ಯ ಮನಿಗ್ಯಾನೆ ನಾಗರಾಜ
ಮಕಕ್ಕೆ ನೆರಳ ಮಾಡಿಕೊಂಡು
ಅಣ್ಣೋಜಿ ತಮ್ಮೋಜಿದೀರ
ಕಣ್ಣಿಗೆ ಕಂಡು ಸರ್ಪಾವು
ಮಾಯವಾಗಿ ಹೋಯಿತಲ್ಲ
ಮಾಗಡಿಯ ರಂಗಧಾಮ
ಅಯ್ಯ ಎಬ್ಬರಿಸಿದರು ಕೆಂಪೇಗೌಡನ
ಹೇಳಯ್ಯ ಎನ್ನುತಾಗ
ಎದ್ದು ನೋಡಿದ ಕೆಂಪೇಗೌಡ
ಬಾಳ ಆಶ್ಚರ್ಯವಾಯಿತಾಗ
ಆಗ ಕರಕೊಂಡು ಮನೆಗೆ ಬಂದರು
ಮಾಗಡಿ ಕೆಂಪೇಗೌಡನ
ಆಗ ಹಾಲು ಅನ್ನ ಊಟಕಿಟ್ಟು
ಎರಡು ರೆಟ್ಟೆ ಹಿಡಿದುಕೊಂಡ್ರು
ಅಪ್ಪ ಕೇಳಯ್ಯ ಕೆಂಪೇಗೌಡ
ನಮ್ಮ ಮಾತ ನೀನು ಕೇಳು
ಅಪ್ಪ ನಿನಗೆ ದೊರೆತನ ಬಂದರೆ
ನಮಗೆ ಮಂತ್ರಿ ಪದವಿ ಕೊಡಬೇಕು
ಆಗಲಿ ಮಾಸ್ವಾಮಿ ಕೊಡುತೀನಿ
ಎಂದು ಬರೆದು ಕೊಟ್ಟನಲ್ಲ
ಅಯ್ಯ ಹನ್ನೆರಡು ವರ್ಷದ
ಸಂಬಳನಾದರೆ ಕೊಡಲಿಲ್ಲ

ಅತ್ತಿಗೆ ಹರಿಯಮ್ಮ ತಾಯಿ
ಈಚನ ಬರಲ ಮಾರಕೋಗಿ
ಅಯ್ಯ ಮಾಯದ ಮಳೆಗೆ ಸಿಕ್ಕಿ
ಈಗ ಹರಿಯಮ್ಮ ತಾಯಿ
ಅಯ್ಯ ಈಚಲ ಬರಲು ಕೊಚ್ಚಿಕೊಂಡು
ಹೋಗುತಾವೆ ಹಳ್ಳದಲ್ಲಿ
ಮನೆಗೆ ಓಡಿ ಹೋದನಲ್ಲ
ಮಾಗಡಿಯ ಕೆಂಪೇಗೌಡ
ಆಗ ನೋಡುತಾಳೆ ಹರಿಯಮ್ಮ
ಮೈದುನ ಕೆಂಪೇಗೌಡನ
ಕಂದ ಅವರಾಗಿ ಕಳಿಸಿದರಪ್ಪ
ನೀನಾಗಿ ಬಂದೆಯಪ್ಪ
ಅಮ್ಮ ಅವರಾಗಿ ಕಳಿಸಿದರಮ್ಮ
ನಾನಾಗೆ ಬರಲಿಲ್ಲ
ಅಯ್ಯ ಅವರಾಗಿ ಕಳಿಸಿದ ಮೇಲೆ
ಸಂಬಳವೆಲ್ಲೊ ನನಕಂದ
ಅಮ್ಮ ಸಂಬಳ ಮಾತ್ರ ಕೊಡಲಿಲ್ಲ
ದೋರೆತನ ಬರುತ್ತೆಂದು
ಅಯ್ಯ ಈಚಲು ಬರಲೆಲ್ಲ
ಕೊಚ್ಚಿಕೊಂಡು ಹೋದವಯ್ಯ
ಅಮ್ಮ ಹುಡುಕಿಕೊಂಡು ಬರುತೀನಿ
ಯಾವ ಹಳ್ಳದಲ್ಲಿ ಹೋದವಮ್ಮ
ಕಂದ ಮಾಗಡಿಗೆ ಬಡಲಾಗಿ
ಸೀಗೆ ಹಳ್ಳದಲ್ಲಿ ಹೋದವಪ್ಪ
ಆಗ ಸೀಗೆ ಹಳ್ಳದ ದಾರಿ ಹಿಡಿದು
ಹೋಗುನೆತಾ ಕೆಂಪೇಗೌಡ
ಅಯ್ಯ ಸೀಗೆ ಮರದ ಅಡಿಯಲ್ಲಿ
ಹೂತುಕೊಂಡವೆ ಬರಲು ಎಲ್ಲ
ಹೋಗಿ ನೋಡಿದ ಕೆಂಪೇಗೌಡ
ಈಚಲು ಗರಿ ಕಾಣುತೈತೆ
ಅಯ್ಯ ಒಂದು ಗರಿ ಹಿಡಿದುಕೊಂಡು
ಎಳೆದಾನು ಕೆಂಪೇಗೌಡ
ಆಗ ದಿಗ್ಗನೆ ಏಳು ಕೊಪ್ಪರಿಕೆ
ಹಣವಾದರು ಎದ್ದಿತಯ್ಯ
ಆಗ ಬಹಳ ಭಯವಾಯಿತಯ್ಯ
ಮಾಗಡಿ ಕೆಂಪೇಗೌಡನಿಗೆ
ಆಗ ಮಾಗಡಿಯ ರಂಗಧಾಮ

ಏಳು ವರ್ಷದ ಹುಡುಗನಾಗಿ
ಅಯ್ಯ ಹೆದರಬೇಡ ಬೆದರಬೇಡ
ಮಾಗಡಿಯ ಕೆಂಪೇಗೌಡ
ಆಗ ನನ ಗುಡಿಯ ಕಟ್ಟಿಸಯ್ಯ
ಮಾಗಡಿಯ ಕೆಂಪೇಗೌಡ
ರಂಗಧಾಮನ ಗುಡಿಗೆ ತಳಹದಿಯ
ಮಾಡಿಸ್ಯಾನು ಕೆಂಪೇಗೌಡ
ಆಗ ದೊರೆತಾನ ಬಂದಿತಯ್ಯ
ಮಾಗಡಿ ಕೆಂಪೇಗೌಡನಿಗೆ
ಆಗ ಮಂತ್ರಿ ದಳವಾಯಿ ಪಟ್ಟ
ಹಾರುವರಿಗೆ ಕೊಡುತಾನೆ
ಅಯ್ಯ ಬಾಳ ಐಶ್ವರ್ಯ ಬಂದಿತಯ್ಯ
ಮಾಗಡಿ ಕೆಂಪೇಗೌಡನಿಗೆ
ಆಗ ಒಂಬತ್ತು ಜನ ಪಾಳೇಗಾರರು
ಇವನ ವಶವೆ ಆದರಯ್ಯ
ಅಯ್ಯ ಕೆಂಪೇಗೌಡನಿಗೆ ಮದುವೆಯ
ಮಾಡುತ್ತಾಳೆ ಹರಿಯಮ್ಮ
ಅಯ್ಯ ಕೋಟೆಕೊತ್ತಲುಗಳನು
ಆಗ ಕಟ್ಟಿಸ್ಯಾನೆ ಕೆಂಪೇಗೌಡ
ಆಗ ಅಲಮೇಲು ಮಂಗಮ್ಮಗೆ
ಹೆಣ್ಣು ಮದುವೆ ಆಯಿತಯ್ಯ
ಅಯ್ಯ ಬಾಳ ಪ್ರೀತಿಯಿಂದ
ಸಾಕುತಾರೆ ಹೆಣ್ಣು ಮಗುವ
ಒಂದು ವರುಷ ಆಯಿತಯ್ಯ
ದೊರೆತನ ಬಂದು ಅಲ್ಲಿಗೆ
ಅಯ್ಯ ಎರಡು ಮೂರು ನಾಲ್ಕು ಐದು
ವರ್ಷವಾದರೆ ಆದುವಯ್ಯ
ಆಗ ಮತ್ತೊಂದು ಹೆಣ್ಣು ಮಗುವು
ಹುಟ್ಟಿತಯ್ಯ ಕೆಂಪೇಗೌಡನಿಗೆ
ಆಗ ದಂಡುದಾಳಿ ಕಟ್ಟಿಕೊಂಡು
ಬೆಂಗಾಡಿಗೆ ಹೋದನಯ್ಯ
ಅಯ್ಯ ಬೆಂಗಾಡು ಎಂಬೋದು
ಗಂಡುಭೂಮಿ ಕಾಣಿರಯ್ಯ
ಆಗ ನೊಡುತಾನೆ ಕೆಂಪೇಗೌಡ
ಬಾಳ ಗಂಡು ಭೂಮಿಕಾಣಯ್ಯ
ಬೆಂಗಾಡು ಹೋಗಿ ಆಗ
ಬೆಂಗಳೂರು ಆಗುತೈತೆ

೧೪೦ ದೊಂಬಿದಾಸ ಸಮುದಾಯ

ಎಂದು ಮುವ್ವತ್ತು ಮೈಲಿ ಚದರಳತೆ
ಮಾಡಿಸ್ಯಾನು ಕೆಂಪೇಗೌಡ
ಅಯ್ಯ ಮುವ್ವತ್ತು ಮೈಲಿ ಚದರಳತೆ
ಮೀರಿ ಹೋದ ಕಾಲಕಾದರೆ
ಅಯ್ಯ ಒಬ್ಬರ ತಲೆ ಒಬ್ಬರ ಕೈಲಿ
ಮಡಿಯಲಿರಾಜ್ಯವು
ಎಂದು ಶಾಸನ ಮಾಡಿಸ್ಯಾನು
ಮಾಗಡಿಯ ಕೆಂಪೇಗೌಡ
ಮಾಗಡಿಗೆ ಹಿಂದಿರುಗಿ ಆಗ
ಹೊರಟೈತೆ ದಂಡುದಾಳಿ
ಅಯ್ಯ ಪೂಜಾರಿ ಪುಟ್ಟಣ್ಣನ
ಹೇಳಿ ಕರಸಿದ ಕೆಂಪೇಗೌಡ
ಅಯ್ಯ ನಾಳೆ ಆದರೆ ರಂಗಧಾಮನ
ಪೂಜೆಗೆ ನಾವು ಬರುತೀನಿ ಪುಟ್ಟಣ್ಣ
ಆಗ ಬೆಳಗಿನ ಜಾವದಲ್ಲಿ ಪೂಜಾರಿ
ಹೂವಿನ ತೋಟಕ್ಕೆ ಹೋದಾನು
ಆಗ ದೇವಲೋಕದ ಬಿಳಿಯ ಆನೆ
ಹೂವಿನ ಗಿಡಕೆ ಮೈಯ ಉಜ್ಜಿ
ಒಂದು ಹುವ್ವಾದರೆ ಕುಯ್ಕೊಂಡು
ಬಂದನಲ್ಲ ಪೂಜಾರಿ
ಆಗ ಪೂಜೆ ಹೊತ್ತಿಗೆ ಬಂದನು
ಮಾಗಡಿಯ ಕೆಂಪೇಗೌಡ
ಆಗ ಪ್ರಸಾದವನ್ನು ಕೊಡುತಾನೆ
ಪೂಜಾರಿ ಪುಟ್ಟಣ್ಣ
ಆಗ ಅಣ್ಣೋಜಿ ತಮ್ಮೋಜಿ
ಹಿಂದುಗಡೆ ನಿಂತವೆ
ಅಯ್ಯ ಹೂವಿನಲ್ಲಿ ಬಿಳಿಯ ಕೂದಲ
ತೋರಿಸುತಾರೆ ಮಂತ್ರಿಗಳು
ಅಯ್ಯ ನೋಡಿದೇನೊ ಕೆಂಪೇಗೌಡ
ರಂಗಧಾಮ ಮುದುಕನಾದ
ಅಯ್ಯ ಮುದಿಯ ರಂಗಧಾಮ
ಗಂಡು ಮಕ್ಕಳ ವರವನ್ನು
ಅಯ್ಯ ಹ್ಯಾಗೆತಾನೆ ಕೊಡುತಾನೊ
ಮಾಗಡಿ ಕೆಂಪೇಗೌಡ
ಅಯ್ಯ ಸೋಮೇಶ್ವರನ ಗುಡಿಯ ಕಟ್ಟಿಸು
ಗಂಡು ಮಕ್ಕಳಾಗುತಾವೆ
ಆಗ ಅಂಗಂದ ಮಾತು ಕೇಳಿ

ಹೂವನ್ನೆ ನೆಲಕೆ ಹಾಕಿಬಿಟ್ಟ
ಅಯ್ಯ ಕಾಲಿನಿಂದ ಹೊಸಗ್ಯಾನು
ಮಾಗಡಿ ಕೆಂಪೇಗೌಡ
ಅಯ್ಯ ಬಂತಲ್ಲೊ ತಿರುಗಿ
ಕೇಡುಗಾಲ ಕೆಂಪೇಗೌಡಗೆ
ನಾನಾದರೆ ದೊರೆಯಾಗಿ
ಮುದಿರಂಗಧಾಮನ ಪೂಜೋದಿಲ್ಲ
ಅಯ್ಯ ಸೋಮನಾಥನ ಗುಡಿಗಾದರ
ತಳಹದಿಯ ಮಾಡಿಸ್ಯಾನು
ಆಗ ಸೋಮನಾಥ ಗುಡಿಯ ಕಟ್ಟಿ
ಮನೆಗೆ ಬಂದ ಕೆಂಪೇಗೌಡ
ಅಯ್ಯ ಅರ್ಧರಾತ್ರಿ ಒಳಗೆ
ರಂಗಧಾಮ್ನ ದೃಷ್ಟಿ ಬಿತ್ತು
ಅಯ್ಯ ಬೆಳಗಾಗೊಹೊತ್ತಿಗೆ
ಗುಡಿಯೆಲ್ಲ ಬಿದ್ದಿತ್ತು
ನೋಡುತಾನೆ ಕೆಂಪೇಗೌಡ
ಗುಡಿಯೆ ಬಿದ್ದು ಹೋಗ್ಯೆತೆ
ಆಗ ಬಿಮ್ಮನಸೆ ಬಲಿಯನಾದ್ರೆ
ಕೇಳಿತು ಆ ಗುಡಿಯು ಆಗ
ಅಯ್ಯ ಅಲಮೇಲ ಮಂಗಮ್ಮ
ಆರು ತಿಂಗಳ ಬಿಮ್ಮನಸೆ
ಆಗ ಅಂತ ಬಿಮ್ಮನಸೆ
ಬಲಿಯ ಕೊಡಿಸಿದ ಕೆಂಪೇಗೌಡ
ಆಗ ಮಾಗಡಿ ರಂಗದಾಮ
ಏಳು ವರ್ಷದ ಹುಡುಗನಾಗಿ
ಅಯ್ಯ ವಾರಕೊಂದು ಪೂಜೆನಾರ
ಮಾಡಿಸಪ್ಪ ಕೆಂಪೇಗೌಡ
ಎಂದು ಅವನು ಕೇಳುತಾನೆ
ಅಯ್ಯ ಅಂತ ಮಾತ ಕೇಳಿದಾನು
ಮುಚ್ಚು ಗೋಡೆ ಹಾಕಿಸ್ಯಾನು
ರಂಗಧಾಮನ ಗುಡಿಗಾದರೆ
ಆಗ ಅತ್ತಿಗೆ ಚರಿಯಾಲಮ್ಮ
ಹೋಗುತಾಳೆ ರಾಜಾಲಯಕೆ
ಕಂದ ಸಿರಿತನ ಕೊಟ್ಟ ರಂಗಧಾಮನ
ಮರೆಯಬೇಡ ಕೆಂಪೇಗೌಡ
ಅತ್ತಿಗೆ ಆಡೋ ಮಾತು ಕೇಳಿ
ನಿನ್ನೆನ್ನ್ಯಾರು ಕರೆದೋರು

ಎಂದು ಈಚೆಗೆ ತಳ್ಳಿದಾರು
ಬಾಕಲಲ್ಲಿ ಪ್ರಾಣಬಿಟ್ಲು
ಅಲ್ಲಿಗನ್ನೆರಡು ವರ್ಷ ದೊರೆತನ
ಆದಮೇಲೆ ಅವನಿಗೆ
ವಿನಾಶಕಾಲ ಬಂದಿತಯ್ಯ
ಮಾಗಡಿ ಕೆಂಪೇಗೌಡ್ಗೆ
ಅಯ್ಯ ಒಂದೊಂದೆ ಲಯಕಾಲ
ಬಂದೀತು ಮಾಗಡಿಗೆ
ಅಯ್ಯ ಸತ್ಯದ ನುಡಿಯ ಲಾಲಿಸಿರಿ
ಸತ್ಯಕೆ ಶಿರವ ಬಾಗಿಸಿರಿ
ಅಯ್ಯ ಹಾಳು ಪಾಪಿ ಹಾರುವರು
ಹೋಳು ಸಂಚು ನಡಿಸ್ಯಾರು
ಅಯ್ಯ ಬೇಕಾದಷ್ಟು ಮದ್ದುಗುಂಡು
ಇಡಿಸ್ಯಾನೆ ಕೆಂಪೇಗೌಡ
ಆಗ ಮಾಗಡಿ ರಂಗಧಾಮ
ಮೈಸೂರು ಚಾಮುಂಡಿ ಬೆಟ್ಟಕ್ಕೆ
ಹೋಗಿ ಚಾಮುಂಡಿ ಬೆಟ್ಟಕ್ಕೆ
ಹೋಗಿ ಚಾಮುಂಡಿ ಮರೆಯನ್ನು
ಬೀಳುತಾನೆ ರಂಗಧಾಮ
ಆಗ ಮಾಗಡಿಯ ಕೆಂಪೇಗೌಡ
ಸೂಳೆ ಚನ್ನಕ್ಕನ ಮನೆಯಲವ್ನೆ
ಮಟ್ಟ ಮಂಗಳವಾರ ಗಂಡನಾದ್ರೆ
ಎಬಿಸವ್ಳೆ ಚಾಮುಂಡಮ್ಮ
ಆಗ ಒಂಬತ್ತು ಜನ ಪಾಳೆಗಾರು
ಮಾಗಡಿಯಲ್ಲಿಲ್ಲವಯ್ಯ
ಅಯ್ಯ ಚಾಮುಂಡೇಶ್ವರಿ ದಂಡು ಬಂದು
ಮಾಗಡಿಯ ಮುತ್ತಿತಯ್ಯ
ಆಗ ಅಣ್ಣೋಜಿ ತಮ್ಮೋಜಿ
ನೋಡಿದರು ದಂಡನ್ನು
ಅಣ್ಣ ಇದು ಒಳ್ಳೆ ಸಮಯ
ಕೆಂಪೇಗೌಡ್ನ ಕೊಲ್ಲಿಸಕ್ಕೆ
ಅಯ್ಯ ಇದ್ದ ಮದ್ದು ಗುಂಡಿಗೆಲ್ಲ
ಎಳ್ಳುರಾಗಿ ಬೆರಸ್ಯಾರು
ಆಗ ಸೂಳೆಯ ಮನೆಯಲ್ಲಿ
ನೆಲಮಾಳಿಗೆ ಸೇರ್ಯಾನು
ಆಗ ಚಾಮುಂಡಿ ದಂಡಾದರೆ
ನುಗ್ಗೈತೆ ಮಾಗಡಿಗೆ

ಆಗ ಸೂಳೆಮನೆ ಸುತ್ತ
ಉಕ್ಕಿನ ದಸಿ ನೆಡಿಸ್ಯಾಳೆ ಚಾಮುಂಡಿ
ಅಯ್ಯ ಒಂದು ಕ್ಯಾಕ ಹಾಕ್ಯಾನು
ಕೆಂಪೇಗೌಡನಾವಾಗ
ಅಯ್ಯ ಪುಲಿಯೂರು ದುರ್ಗದ
ಬೆಟ್ಟದ ಮೇಲೆ ಹಾಕ್ಯಾನು
ಆಗ ಕನಕದಮಟೆ ಕುಲವಾಡಿ
ಅವನೊಬ್ಬನವನಯ್ಯ
ಚಾಮುಂಡೇಶ್ವರಿ ದಂಡಾದರೆ
ಬೆಟ್ಟಸುತ್ತ ಮುತ್ತಿತಯ್ಯ
ಬೆಟ್ಟದ ಸುತ್ತ ಉಕ್ಕಿನದಸಿ
ಏಳು ಮೈಲಿ ದೂರವು
ಮದ್ದುಗುಂಡಿಗೆ ಕುಲವಾಡಿಯ
ಓಡಿ ಕಳಿಸಿದ ಕೆಂಪೇಗೌಡ
ಆಗ ಎಳ್ಳು ಬೆರಸಿದ ಮದ್ದುಗುಂಡ
ಕೊಟ್ಟು ಕಳಿಸಿದರು ಹಾರುವರು
ಅಣ್ಣ ಇದು ಒಳ್ಳೆ ಸಮಯವು
ಕೆಂಪೇಗೌಡ್ನ ಕೊಲಿಸಾಕೆ
ಆಗ ಚಾಮುಂಡೇಶ್ವರಿ ದಂಡು ಆದ್ರೆ
ಸಂಹಾರ ಮಾಡುತಾನೆ ಕೆಂಪೇಗೌಡ
ಆಗ ಚಾಮುಂಡೇಶ್ವರಿ ತೀರ್ಥಹಾಕಿದಳು
ದಂಡಾದರೆ ಮೇಲಕೇಳುತದೆ
ಅಯ್ಯ ಮದ್ದುಗುಂಡಿನ ಸಹಾಯವಿಲ್ಲದೆ
ಸೋತು ಬಿಟ್ಟ ಕೆಂಪೇಗೌಡ
ಆಗ ಹಿಂದು ಮುಂದು ನೋಡುತಾನೆ
ಮಾಗಡಿಯ ಕೆಂಪೇಗೌಡ
ಅಯ್ಯ ಒಂದು ಕ್ಯಾಕ ಹಾಕಾತಾನೆ
ಮಾಗಡಿಯ ಕೆಂಪೇಗೌಡ
ಆಗ ಬೆಟ್ಟದ ಮ್ಯಾಲಿಂದ ನೆಗುದಾನೆ
ಮಾಗಡಿಯ ಕೆಂಪೇಗೌಡ
ಅಯ್ಯ ಒಂದು ಹಿಂಗಣ್ಣು ಹೊಡೆದಾನೆ
ಅಯ್ಯ ಎರಡು ಹಿಂಗಣ್ಣು ಹೊಡೆದಾನೆ
ಅಯ್ಯ ಕೊನೆ ಉಕ್ಕಿನ ದಸಿಗೆ
ನಾಟಿಕೊಂಡ ಕೆಂಪೇಗೌಡ
ಆಗ ಓಡಿ ಹೋದ ರಂಗಧಾಮ
ಕೆಂಪೇಗೌಡನಿದ್ದ ಬಳಿಗೆ
ಅಯ್ಯ ಈಗಲಾದರು ನನ್ನ ಪೂಜೆ

ಮಾಡಿಸೀಯ ಕೆಂಪೇಗೌಡ
ಆಗ ಹೋಗೊ ಹೋಗೋ ರಂಗಧಾಮ
ನಿನ್ನ ಮಕ ನೋಡೋದಿಲ್ಲ
ಅಲ್ಲಿಗೆ ಚಾಮುಂಡೇಶ್ವರಿ ಓಡಿಹೋಗಿ
ಎರಡು ಕೈಯ್ಯ ಜೋಡಿಸ್ಯಾಳು
ಕೆಂಪೇಗೌಡ್ನ ಕೈಯಿಗೆ
ಹಣತೆ ಆದರೆ ಹಚ್ಚಿಸ್ಯಾಳು
ಆಗ ಕೆಂಪೇಗೌಡ್ನ ದೊರೆತನ
ಹನ್ನೆರಡು ವರ್ಷವು ನಡೆಯಿತು
ಆಗ ಚಾಮುಂಡೇಶ್ವರಿ ಹಿಂದಿರುಗಿ
ಚಾಮುಂಡಿಬೆಟ್ಟ ಸೇರಿಕೊಂಡ್ಳು
ಆಗ ರಂಗಧಾಮ ಬಂದು
ಶ್ರೀರಂಗಪಟ್ನ ಸೇರಿಕೊಂಡ
ಆಗ ಕೆಂಪೇಗೌಡ್ನ ಹೆಣ್ಣುಮಕ್ಳು
ವರ್ಷಕ್ಕೆ ಒಂದು ಸಾರಿ
ಅಯ್ಯ ರಂಗಧಾಮನ ಜಾತ್ರೆಯನ್ನು
ನಡೆಸುತಾರೆ ಹೆಣ್ಣು ಮಕ್ಳು
ಹಾಲಿ ಹಸುಮಕ್ಕಳಿಗೆ
ಹಾಲು ಅಂಬಲಿದಾನ ನಡೆಯುತ್ತೈತೆ
ಅಲ್ಲಿಗೆ ಕೆಂಪೇಗೌಡ್ನ ಕತೆಯೆ
ಅಂಕಿತವಾಯ್ತು ತಂದೆನಾನಿತಾನೆ

*ಹಾಡಿದವರು : ಚಿಮ್ಮನಹಳ್ಳಿ ವೆಂಕಟಪ್ಪ*

## ಮಾರೇಗೌಡ

ಕಾಶಿಪುರಿಯೊ ಪಟ್ಟಣವಲ್ಲಿ
ನೀಟುಗಾರ ಮಾರೇಗೌಡ
ಮಾರೇಗೌಡ್ನ ಮನೆಯೆಂಬೋದು
ಹ್ಯಾಗಿರುವೋದು ಕಂಡಿಲ್ಲ ನೀವು
ಸಾಲಿಗೆ ಸಾವಿರ ಕಂಬದ ಮನೆ
ಮೂಲೆ ಮುನ್ನೂರು ಕಂಬದ ಮನೆ
ದೊಡ್ಡ ಪಡಸಾಲೆ ಮನೆಯೇ ಉಂಟು
ಮಾಡಿಯ ಮೇಲೆ ಮಾಡಿ ಉಂಟು
ಚಿನ್ನದ ಕಳಸ ಬೆಳ್ಳಿಯ ಕಳಸ
ಮತ್ತೆ ಕಳಸವ ಎತ್ತಿದ ಗೌಡ
ಎಷ್ಟು ಪುಣ್ಯವಂತ ಮಾರೇಗೌಡ
ಹೆಂಡ್ತಿಗೆ ಬುದ್ಧಿಯ ಹೇಳುತಲವ್ನೆ
ಗಂಡು ಮಕ್ಕಳ ಹನ್ನೆರಡು ಮಂದಿ
ಹೆಣ್ಣು ಮಕ್ಕಳು ಹನ್ನೆರಡು ಮಂದಿ
ಕೇಳು ಕೇಳೆ ಇಕ್ಕದ ಮಾರಿ
ನನ್ನ ಮಾತ ನೀ ಕೇಳಬೇಕು
ಊರ ಒಳಗೆ ನಮ್ಮ ಮನೆಯೇ ಬೇಡ
ಊರ ಹತ್ತಿರ ನಮಗೆ ಮನೆಯೇ ಬೇಡ
ಊರ ಒಳಗೆ ನಮಗೆ ಮನೆಯಿದ್ರೆ ಹೆಂಡ್ತಿ
ಹರುಕರು ತಿರುಕರು ಬರುತರೆ ಹೆಣ್ಣೆ
ಪಡಿಯೊ ಪಾವೊ ನಾವ್ಕೊಡಬೇಕು
ಕೊಟ್ಟರೆ ನಮಗೆ ಫಲವೇನಾಯ್ತು
ಊರ ಹತ್ತಿರ ನಮ್ಮ ಹೊಲವಿದರೆ
ಕಂದಾಯ ಕಾಣ್ಕೆ ನಾವ್ಕಟ್ಟಬೇಕು
ಊರೋರ ದನ ಹೊಲ ಮೆಯ್ಯುತಾವೆ
ಊರ ಹತ್ತಿರ ಹೊಲವೆ ಬೇಡ
ಊರ ಹತ್ತಿರ ಹೊಲವೆ ಬೇಡ
ಊರೊಳಗೆ ಮನೆಯೇ ಬೇಡ

ಏಳು ಬೆಟ್ಟದ ಸೊಂಪಲ ನಡುವೆ
ತಕ್ಕಲ ಕಡಿದು ನಾವು ಹೊಲ ಮಾಡೋಣ
ತಕ್ಕಲ ಕಡಿದು ನಾವು ಹೊಲ ಮಾಡೋಣ
ಅಲ್ಲಿ ನಾವೊಂದು ಮನೆಯ ಕಟ್ಟಿಸೋಣ
ಅಲ್ಲೇ ವಾಸವ ನಾವ್ ಮಾಡೋಣ
ಗೌಡನ ಮಾತ ಮೀರೋ ಹೆಂಡತಲ್ಲ
ಹೆಂಡತಿ ಮಾತ ಮೀರೋ ಗಂಡನಲ್ಲ
ಏಳು ಬೆಟ್ಟದ ಸೊಂಪಲಿಗೋದ
ಹನ್ನೆರಡು ಹರಿದಾರಿ ಗಿಡವನ್ನೆ ಕಡಿದ
ಹನ್ನೆರಡು ಹರಿದಾರಿ ಗಿಡವನ್ನೆ ಕಡಿದು
ಆರು ಹರಿದಾರಿ ಹೊಲವ ಮಾಡಿಸವ್ನೆ
ಅಲ್ಲೆ ಒಂದು ಮನೆ ಕಟ್ಟಿಸವ್ನೆ
ಹೆಂಡತಿಗೇನಂತ ಹೇಳುತಾನಾವಾಗ
ಕೇಳು ಕೇಳೆ ಇಕ್ಕದ ಮಾರಿ
ನನ್ನ ಮಾತ ನೀ ಕೇಳಬೇಕು
ಮೂರು ವರ್ಷದ ಮುಗ್ಗಿದ ಜೋಳ
ಆರು ವರುಷದ ಬುರುಡೆಯ ರಾಗಿ
ಅಳೆದು ಮೂರು ಪಾವ ತಕ್ಕೊಳ್ಳೆ ಗರತಿ
ಮಾಡಿಯ ಕಂಡ್ಯ ಕೇರಿಯ ಕಂಡ್ಯ
ಮಾಡಿದರೆ ಮಣ್ಣೋಗುತ್ತೈತೆ
ಕೇರಿದರೆ ಕುಸುಗೋಗುತ್ತೈತೆ
ಹಾಗೇ ಬಿಸೇ ಹಂಬಲಿ ಕಾಸೆ
ಗುಡಾಣದಂಬಲಿ ಕಾಸೇ ಗರತಿ
ಮನೆ ಹಿಂದಲ ಹೊಲಕೆ ನೀ ಹೋಗೇ
ಮೂರುಮಂಕರಿ ಮುದಣ್ಣೆ ಸೊಪ್ಪ
ತಕ್ಕೊಂಡಾದರೆ ಬಾರಲ ಗರತಿ
ಸೊಪ್ಪು ಗಿಪ್ಪುನೀ ಸೊಸಲಿಬೇಡ
ಸೊಪ್ಪಿನ ಹುಳವನೆ ತೆಗಿಯಲಿಬೇಡ
ಸಪ್ಪೆ ಸೊಪ್ಪ ಬೇಸ್ಬೇಕು ಕಂಡ್ಯ
ಉಪ್ಪಿಗೆ ಕಾಸಕೊಡು ಗಂಡನಲ್ಲ
ನನ್ನ ಮಾತ ಮೀರಿ ಉಪ್ಪ ಹಾಕಿದರೆ
ನಿನ್ನ ಸೊಂಟವ ನಾ ಮುರಿತೀನಿ
ಹಜಾಮರಣ್ಣನ ಕರಸೇನು ಕಂಡ್ಯ
ತಲೆ ಮೂರು ಪಟ್ಟೆ ತೆಗಸೇನು ಕಂಡ್ಯ

ಸುಣ್ಣದ ಪಟ್ಟೆಯ ಬಳಿಸೇನು ಕಂಡ್ಯ
ಕತ್ತೆ ಮೇಲೆ ನಿನ್ನ ಗುಂಡುಸೇನು ಕಂಡ್ಯ
ಹಳೇ ಮೊರವ ಛತ್ರಿಯ ಹಿಡಿಸೆ
ಊರು ಮೂರು ಸುತ್ತು ಮೆರಸೇನು ಕಂಡ್ಯ
ಇಷ್ಟು ಬುದ್ದಿಯ ಹೇಳಿ ಕೊಟ್ಟವ್ನೆ
ಗಂಡನಾದ ಮಾರೇಗೌಡ
ಕೇಳು ಕೆಳೇ ಇಕ್ಕದ ಮಾರಿ
ನನ್ನ ಮಾತ ಕೇಳೆ ನೀ ಗರತಿ
ಕಡಿಯೊ ನಾಯಿ ಬಾಕಲಿಗೆ ಕಟ್ಟು
ಹಾಯೋ ಹಸವ ಬಾಕ್ಲಲಿ ಕಟ್ಟು
ಅಷ್ಟು ಮೀರಿ ನಮ್ಮನೆಗೆ ಬಂದ್ರೆ
ಯಾರಾದರು ಭಿಕ್ಷಕೆ ಬಂದೆ
ಕೊಡ್ಲಿ ತಕ್ಕೊಂಡು ಓಡಿಸ್ಕೊಂಡೋಗೆ
ದೇವ್ರ ಬಂತಂದು ಓಡೋಗುತಾರೆ
ಇಷ್ಟೊಂದು ಬುದ್ಧಿ ಮಾತ ಹೇಳಿಕೊಡುತಾನೆ
ತನ್ನ ಹೆಂಡತಿ ಇಕ್ಕದ ಮಾರಿಗೆ
ಬ್ಯಾಸಿಗೆಂಬೊ ಬಿಸಿಲಲಿ ಗೌಡ
ಹನ್ನೆರಡು ಆರ ಕಟ್ಟಿಸ್ಯಾನೆ ಗೌಡ
ಹನ್ನೆರಡು ಆರ ಕಟ್ಟಿಸ್ಯಾನೆ ಗೌಡ
ಮುಂದಲೇರಿಗೆ ಚಿನ್ನದ ನೊಗವು
ಹಿಂದಲೇರಿಗೆ ಬೆಳ್ಳಿಯ ನೊಗವು
ಹನ್ನೆರಡು ಆರ ಕಟ್ಟಿಸ್ಯಾನೆ ಗೌಡ
ಬ್ಯಾಸಿಗೆಂಬೊ ಬಿಸಿಲಲಿ ಗೌಡ
ಆಳದ ಮೂರುಪಾವು ಜೋಳ ತಕ್ಕಂಡ
ಬ್ಯಾಸಿಗೆಂಬೊ ಬಿಸಿಲಲಿ ಶಿವನೆ
ದೇಶಕಿಲ್ಲದ ಬೆಳೆಕೊಟ್ಟರೀಗ
ಅರ್ಧ ಕಾಸಿಗೆ ಹರಸೇವೆ ಮಾಡುವೆ
ಕೀಲು ಕಾಸಿನ ಗುರುಸೇವೆ ಮಾಡುವೆ
ಆಂಗಂತ ಅರಿಕೆಯ ಮಾಡಿಕೊಂಡು ಗೌಡ
ಮೂರುಪಾವು ಜೋಳ ಬಿತ್ತಿ ಬಿಟ್ಟ ಹೊಲಕೆ
ಮೂರುಪಾವು ಜೋಳವ ಬಿತ್ತಿದ ಜೋಳ
ಬಿತ್ತಿ ಮನೆಗೆ ಬಂದನು ಗೌಡ
ಆಗ್ತದೊ ಕಾಣೆ ಹೋಗ್ತದೊ ಕಾಣೆ
ಹಾಳದ ಹೊಲಕೆ ಜೋಳ ಬಿತಿ ಬಂದೆ

ಗಿಳಲ ದೊಂಬಿದಾಸ ಸಮುದಾಯ

ಹಾಳದ ಹೊಲಕೆ ಜೋಳ ಬಿತ್ತಿ ಬಂದೆ
ಬಿತ್ತಿ ಮನೆಗೆ ಬಂದವ್ನೆ ಗೌಡ
ಚಿನ್ನದ ತಣಿಗೆ ಬೆಳಗ್ತ ಕುಂತವ್ನೆ
ಲಬಲಬನೆ ಬಾಯ ಬಡಕೊಂಡ ಗೌಡ
ತಣಿಗೆ ಕಿತ್ತು ಕಣಜಕ್ಕೆಸೆದವ್ನೆ
ಏನಂತ ಹೆಂಡ್ತಿಗೇಳುತಾನಾವಾಗ
ಕಳ್ಳರು ಕಾಕರು ಕಂಡರೆ ಹೆಂಡ್ತಿ
ತಣಿಗೆ ಕದ್ದು ಕೊಂಡು ಹೋಗ್ತರೆ ಕಂಡ್ಯ
ತಣಿಗೆ ಕಿತ್ತು ಕಣಜಕ್ಕೆ ಎಸೆದಾನೆ
ಮುಕ್ಕ ಮೊಗೆಯಲ್ಲಿ ನೀರ ತಕ್ಕೊಂಬಾರೆ
ಕಾಲ ಮೊಗೆಯಲ್ಲಿ ನೀರು ಕೊಟ್ಲು ಹೆಂಡ್ತಿ
ಕೈ ಕಾಲು ಮೋಕವೆ ಘನದಿಂದ ತೊಳೆದ
ವಿಭೂತಿ ಆದ್ರೆ ಆಗೋಯ್ತು ಗೌಡ್ರೆ
ಒಲೆಯ ಬೂದಿ ತಗೊಂಬಾರೆ ಗರತಿ
ಒಂದು ಮರ ಬೂದಿ ತರಿಸಿ ಸುರಿದಾನು
ತಿಲಕನಾದರೆ ತಿದ್ದಿಬಿಟ್ಟ ಗೌಡ
ನಡುಮನೆಯಲ್ಲಿ ಕೂತವ್ನೆಗೌಡ
ಹೆಂಡತಿಗೇನಂತ ಹೇಳಿದನಾಗ
ಹಿಂದಲಟ್ಟಿಗೆ ಹೋಗಲ ಗರತಿ
ಮೂರು ಮಂಕರಿ ಮುದಮ್ಮೆ ಸಗಣಿ
ಸಗಣಿ ತಂದು ನಡುಮೆಯಲ್ಲಿ
ಕಟ್ಟೆಯಾದರೆ ಕಟ್ಟಲ ಗರತಿ
ಕಟ್ಟೆ ತುಂಬ ಅಂಬಲಿ ಸುರಿದು
ಅಣಸೊಪ್ಪ ತಂದು ಹಾಕೆಣ್ಣೆ
ಮುಂದಲ ಬಾಕಲ ಹಾಕಲ ಗರತಿ
ಹಿಂದಲ ಬಾಕಲ ತೆಗಿಯಲ ಗರತಿ
ದಗ್ಗಲ ಮಂಡಿ ಊರನೆ ಗೌಡ
ಕೈಲಿ ಊಂಡರೀಗ ತಡವಾಗುತ್ತೈತೆ
ನಾಯಿ ನೆಕ್ಕಿದಂಗೆ ಅಂಬಲಿ ನೆಕ್ಕುತಾನೆ
ಕತ್ತೆ ತಿಂದಂಗೆ ಸೊಪ್ಪು ತಿನ್ನುತಾನೆ
ಅಂಬಲಿ ಕುಡಿಯೋ ಸಮಯದಲ್ಲಿ
ಹಾಳಾದ್ದೊಂದು ನೊಣವೆ ಬಂದು
ಅಂಬಲಿಗಾದರು ಬಿತ್ತಲ್ಲೊ ಶಿವನೆ
ಹಾಳದ ನೋಣವೆ ಎಷ್ಟಂಬಲಿ ಕುಡಿದೆ

ನನ್ನ ಹೊಟ್ಟೆಗೆ ಸಾಲದೆ ಬಂತು
ಹುಲಿ ಹಿಡಿದಂಗೆ ನೊಣವನೆ ಹಿಡಿದು
ನೊಣವನಾದರೆ ಸೀಪಿದ ಗೌಡ
ಹೇಳಲಾರದೆ ಒದ್ದಾಡುತಾನೆ
ಇತ್ತತ್ತ ಬಾರೆ ಕೆಟ್ಟಬಡ್ಡಿ ಹೆಂಡತಿ
ಹೆಂಡತಿ ಸೊಂಟವ ಹಿಡಕೊಂಡು ಗೌಡ
ಮುಗ್ಗರಿಸಾದರೆ ಎದ್ದನು ಗೌಡ
ಉಡುದಾರನಾದರೆ ಕಿತ್ತೆಹೋಗ್ಯೆತೆ
ಉಡುದಾರಕ್ಕೆ ಕಾಸು ಇಲ್ಲವಲ್ಲೊ ಶಿವನೆ
ಎಂದು ಯೋಜನೆ ಮಾಡುತ ಕುಂತವ್ನೆ
ಹೆಂಡತಿ ಸೀರೆಯ ಹರಿದಾನೆ ಗೌಡ
ಉಡುದಾರವ ಕಟ್ಟಿದ ಗೌಡ
ಮಂಚದ ಮೇಲೆ ಕೂತವ್ನೆ ಗೌಡ
ವೀಳ್ಯವಾದರೆ ತಕಂಬಾರೆ ಗರತಿ
ಹನ್ನೆರಡು ವರ್ಷದ ತರಗೆಲೆ ತಾರೆ
ಆರು ವರ್ಷದ ಗೋಟಡಕೆ ತಾರೆ
ಮೂರು ವರ್ಷದ ಒಣಸುಣ್ಣ ತಾರೆ
ಇಷ್ಟೊಂದು ವೀಳ್ಯವ ಮೆಲ್ಲಿದ ಗೌಡ
ಏನಂದು ಯೋಚನೆ ಮಾಡುತನಾವಾಗ
ಆಳಾದ ಹೊಲಕೆ ಜೋಳ ಬಿತ್ತಿ ಬಂದೆ
ಆಗ್ಯೆತೊ ಕಾಣೆ ಹೋಗ್ಯೆತೊ ಕಾಣೆ
ಮಾಯಕಾರಿ ಜಗದೀಶನಾಗ
ಇವನ ಸತ್ಯವ ನೋಡಬೇಕೆಂದು
ಮಾಯದ ಮಳೆಯ ಹುಯ್ದೊನೆ ಸ್ವಾಮಿ
ಮಾಯದ ಬೆಳೆಯ ಕೊಟ್ಟಾನೆ ಸ್ವಾಮಿ
ಮಾಯದ ಬೆಳೆಯ ಕೊಟ್ಟಾನೆ ಸ್ವಾಮಿ
ದಂಟೆಂಬೋದೆ ಕಣಕಾಲು ಗಾತ್ರ
ತಲೆಯೆಂಬೋದೆ ಮೂಡೆಯಗಾತ್ರ
ಹೊಲತಕ್ಕೆ ಹೋಗಿ ನೋಡಿದ ಗೌಡ
ಅವನಿಗೆ ಬಾಳ ಸಂತೋಷವೆ ಆಯ್ತು
ಮಾಯದ ಬೆಳೆಯ ನೋಡಿದ ಇವನಿಗೆ
ಬಾಳ ಸಂತೋಷವೆ ಆಯಿತು ಇವನಿಗೆ
ಹೀಗೆ ಹೊಲವ ನಾ ಬಿಟ್ಟಿದ್ದರೆ
ಕುಬುಚಕ್ಕಿ ಅರ್ಧ ಮೇದೋಗುತಾವೆ

ಇಲಿ ಆದರೆ ತಿಂದೋಗುತಾವೆ
ಎನ್ನುತಗೌಡ ಯೋಚನೆ ಮಾಡಿ
ಹನ್ನೆರಡಾಳುದ್ದ ಮಂಚವ ಹಾಕಿದ
ಮಂಚದ ಮೇಲೆ ಕೂತುಕೊಂಡ ಗೌಡ
ಆಕಳಿಸುತಾನೆ ತೂಕಡಿಸುತಾನೆ
ಜೋಳದ ಗದ್ದೆಯ ಕಾಯ್ತಾ ಕೂತವ್ನೆ
ತನೆತೆನೆಗೆಲ್ಲ ಚೀಲ ಕಟ್ಟಿಸ್ಯಾನೆ
ಸಾಲದ ಹೊಲಕೆ ಗುಬಚಿಯ ಮುಳ್ಳ
ತಂದು ಕಟ್ಯಾನೆ ಮಾರೇಗೌಡ
ಇವನ ಸತ್ವವ ಈಗ ನೋಡಬೇಕು
ಎಂದು ಮಾಯಕಾರಿ ಪರಶಿವನಾಗ
ಮುದುಕ ಜಂಗಮನಾಗೆ ಬಂದವ್ನೆ
ಕಾಶಿಯಾತ್ರೆಗೆ ಹೋಗಿದ್ದೆ ಮಗನೆ
ಬಾಳ ಹಸಿವೆ ನನಗಾಗ್ಯೆತೆ
ಒಂದು ಜೋಳದ ತೆನೆ ಕೊಡೊ ಗೌಡ
ತಿಂದುಕೊಂಡು ನಾನು ಹೋಗುತಿನಿ ಅಂದ
ಅಂತ ಮಾತ ಕೇಳಿದ ಗೌಡ
ಮಂಚದಿಂದ ಕೆಳಕ್ಕೆ ಇಳಿದು ಬಂದವ್ನೆ
ಹೋಗು ಹೋಗೊ ತಿರುಕ ಜಂಗಮನೆ
ಗೌಡ ಊರಿಗೆ ಹೋಗವ್ನೆ ಕಾಣೊ
ಗದ್ದೆಯ ಗೌಡ ಇಲ್ಲಿಲ್ಲವಲ್ಲಪ್ಪ
ನಾನು ತೆನೆಯ ಕೊಡುವುದಿಲ್ಲಪ್ಪ
ನಾನು ಅವರ ಮನೆಯ ಸಂಬಳದಾಳು
ನಾನು ತೆನೆಯ ಕೊಡಲಾರೆ ಕಾಣೊ
ಅಪ್ಪು ನಿನಗೆ ಪಸಿವೆ ಆಗಿದ್ರೆ
ನನ್ನ ಹೆಂಡತಿ ಮನೆಯಲ್ಲವ್ಳೆ
ಹೋಗಿನೀನು ಊಟ ಮಾಡಯ್ಯ
ಎಂದು ಹೇಳುತಾನೆ ಮಾರೇಗೌಡ
ಮಾಯಕಾರಿ ಪರಮೇಶ್ವರನಾಗ
ಇಲ್ಲಿ ಇವನ ಸತ್ಯ ನೋಡಿದಾಯ್ತು
ಮನೆಯಲಿ ಹೆಂಡತಿಯ ಭಕ್ತಿ ನೋಡಬೇಕು
ಎಂದು ಹೊರಟನೆ ಶಿವನು ಆವಾಗ
ನನ್ನ ಹೆಂಡತಿಯ ಗುರುತೇಳುತೀನಿ
ಸಿಕ್ಕುಸೀರಣಿಗೆ ಬಕ್ಕುತಲೆಯಲ್ಲ .

ಮೂಗೆಂಬುದು ಮುಂಗೈಗಾತ್ರ
ಕಣ್ಣೆಂಬೊದೆ ಕೋತ್ತಿಯ ಕಣ್ಣು
ಇಂಥ ಚೆಲುವೆ ನನ ಹೆಂಡತಿ ಅವಳೆ
ಹೋಗೋ ಹೋಗಿ ಊಟ ಮಾಡ್ಕೆಯ್ಯೆ
ಆಂಗಂಡ ಮಾತ ಕೇಳಿದ ಸ್ವಾಮಿ
ಜೋಳದ ಗದ್ದೆಯಿಂದ ಮನೆಗೊರಟಾನೆ
ನಡುಮನೆಯಲ್ಲಿ ಕೂತವ್ಳೆಗರತಿ
ಏನಂತ ಸ್ವಾಮಿ ಹೇಳುತನಾವಾಗ
ಕಾಶಿ ಯಾತ್ರೆಗೆ ಹೋಗಿದ್ದೆ ಮಗಳೆ
ಜೋಳದ ಗದ್ದೆ ಬಳಿಗೆ ಬಂದೆ ಮಗಳೆ
ಮನೆಗಾದರೆ ನೀ ಹೋಗು ಅಂತ ಹೇಳಿದ ಗೌಡ
ಊಟಕಾದರೆ ನೀಡಮ್ಮ ಮಗಳೆ
ಎಂದು ಸ್ವಾಮಿಕೇಳುತಾನಾವಾಗ
ಆಂಗಂಡ ಮಾತ ಕೇಳಿದಳಾವಾಗ
ಇಕ್ಕದ ಮಾರಿ ಏನಂದಳಾಗ
ಹೋಗೋ ಹೋಗೋ ತಿರುಕ ಜಂಗಮನೆ
ನಾನು ಈ ಮನೆಯ ಸಂಬಳದಾಳು
ಮನೆಯ ಗರತಿ ಊರಿಗೋಗವ್ಳೆ
ಎಂದು ಹೇಳ್ತಾಳೆ ಪರಶಿವನಲ್ಲಿ
ಎಷ್ಟು ಬೇಡಿದರು ಊಟಕ್ಕಿಡಲಿಲ್ಲ
ಪಾಪಿಗೇಡಿ ಇಕ್ಕದ ಮಾರಿ
ಹಿಂದಿರುಗಿ ಹೊಲಕ್ಕೆ ಬರುತಾನೆ ಸ್ವಾಮಿ
ಏನೋ ಗೌಡ ಊಟಕೆ ಕೊಡಲಿಲ್ಲ
ಮನೆಯ ಯಜಮಾನಿ ಊರೊಳಗಿಲ್ಲ
ಸಂಬಳದಾಳು ಮನೆಯೊಳಗಿದ್ಲು
ಒಂದರ್ಧ ಜೋಳದ ತೆನೆಯ
ಕೊಡ್ಕೆಯ್ಯ ಎಂದು ಕೇಳಿದ ಸ್ವಾಮಿ
ಜೋಳದ ತೆನೆಯ ಕೊಡುವುದಿಲ್ಲ
ನಾನು ಇವರ ಮನೆಯಸಂಬಳದಾಳು
ಅಷ್ಟು ನಿನಗೆ ಹಸಿವೆ ಆಗಿದ್ರೆ
ನಾನೆ ಬರುತ್ತೀನಿ ಊಟಕೆ ಕೊಡುಸ್ತೀನಿ
ಎಂದು ಕರಕೊಂಡು ಜಂಗಮನನ್ನು
ಮನೆ ಕಡೀಕೆ ಹೊರಟಾನೆ ಗೌಡ
ಏನಂತ ಆಗ ಹೇಳಿದ ಶಿವನಿಗೆ

ನೀನು ಹಿಂದಾಗಿ ಬಾರೋ ನಮ್ಮ ಮನೆಗೆ
ನಾನು ಮುಂದಾಗೆ ಮನೆಗೆ ಹೋಗಿ
ನನ್ನ ಹೆಂಡತಿಗೆ ಹೇಳುತೀನಿ ಅಂದ
ಓಡೋಡಿ ಮನೆಗೆ ಓಡೋದ ಗೌಡ
ಹಿಂದೆ ಬರುತಾನೆ ಜಂಗಮನಾಗ
ಯಾವಳೆ ಹೆಂಡತಿ ಕೆಟ್ಟ ಬಟ್ಟಿ ನೀನು
ಹರಕಲ ಚಾಪೆ ತಕ್ಕಂಡು ಬಾರೆ
ಹರಕಲು ಚಾಪೆ ತಂದು ಕೊಟ್ಟವ್ಳೆ
ಬೆಲ್ಲದ ನೀರ ಮಾಡಿಕೊಂಡು ಬಾರೆ
ನನಗೆ ಚಾಪೆಯ ಬಿರಬಿರನೆ ಸುತ್ತೆ
ಬೆಲ್ಲದ ನೀರೆಲ್ಲ ಮೇಲೆ ಚೆಲ್ಲೆ
ತಲೆತಾವಾದರೆ ಕೂತುಕೊಳ್ಳೆ ಗರತಿ
ಲಬಲಬನೆ ಬಾಯ ಬಡಕೊಳ್ಳೆ ಗರತಿ
ನನ್ನ ಗಂಡ ಸತ್ತೋದನೆಂದು
ಬಡಕೊಂಡು ಕೂತವ್ಳೆ ನಡುಮನೆಯಲ್ಲಿ
ಮಾಯಕಾರಿ ಪರವೇಶನಾಗ
ಮನೆಗೆ ಬಂದವ್ನೆ ನಿಧಾನವಾಗಿ
ಬಂದು ಬಾಗ್ಲಲ್ಲಿ ನಿಂತುಕೊಂಡ ಸ್ವಾಮಿ
ಏನಮ್ಮ ಇದು ಪೂರ ಅನ್ಯಾಯ
ಹೋಗೋಗೊ ತಿರುಕ ಜಂಗಮ ನೀನು
ಗಂಡಸತ್ತು ಮನೆಯಲ್ಲಿ ಬಿದ್ದವ್ನೆ
ಅಡಿಗೆಯನ್ನೆ ನಾನು ಮಾಡಿಲ್ಲ ಕಾಣೊ
ಗಂಡನ ಕಳಕೊಂಡು ದುಃಕವೆ ನನಗೆ
ಅಂತ ಮಾತ ಕೇಳಿದ ಸ್ವಾಮಿ
ಮಾಯಕಾರಿ ಪರಮೇಶ್ವರನು
ಕಲಿಯುಗದೊಳಗೆ ಇಂಥ ಅನ್ಯಾಯ ನಡೀತೆ
ಎಂದು ಮನದೊಳಗೆ ಯೋಚನೆಮಾಡಿ
ಗಂಡನ ಕಳಕೊಂಡೆ ಎಂದು
ಯೋಚನೆನಾದರೇನೀ ಮಾಡಬೇಡ
ಗಂಡನ ಪ್ರಾಣವ ಉಳಿಸಿ ನಾ ಕೊಡುತೀನಿ
ಅಂಗಂದಮಾತ ಕೇಳಿದಳಾಗ
ಗಂಡ ಉಳುಕೊಂಡ್ರೆ ಅನ್ನ ಊಟಕ್ಕಿಡಬೇಕು
ನಿನ್ನನ್ಯಾರೊ ನಾನು ಕರೆಸ್ಲಿಲ್ಲ ಕಾಣೊ
ಎಂದು ಬರಲ ಹಿಡಕೊಂಡು ಪಾಪಿ

ಇಂಥ ಪಾಪಗೇಡಿ ಗಂಡ ಹೆಂಡ್ತೀರ
ಕಲಿಯುಗದಲ್ಲಿ ನಾ ಬಿಡಬಾರದೆಂದು
ಒಳಗ್ಗಡೇಕೆ ಹೋಗವ್ನೆ ಸ್ವಾಮಿ ಆವಾಗ
ಹರಕಲ ಚಾಪೇಲಿ ಸುತ್ತಿಟ್ಟವಳೆ
ಊಟ ಕೊಡದಿದ್ದರೆ ಅಂತೆ ಹೋಗಲಿ
ಜೋಳದ ಹೊಲನಾದರೆ ಕಾಯೋಗೋ ಗೌಡ
ಎಷ್ಟು ಕೂಗಿದರು ಮಾತಾಡಲಿಲ್ಲ
ಸತ್ತೋದೊನಂಗೆ ಬಿದ್ದವ್ನೆ ಗೌಡ
ಮಾಯಕಾರಿ ಪರಮೇಶ್ವರನಿಗೆ
ಬಾಳ ಆಶ್ಚರ್ಯವೆ ಆಯಿತಾವಾಗ
ದೇವಲೋಕದಿಂದೆರಡಾನೆ ತರಸಿದ
ಗಂಡ ಹೆಂಡತಿಯ ಆನೆ ಕಾಲಿಕ್ಕಟ್ಟಿಸಿದ
ಆನೆಕಾಲ್ಗೆ ಕಟ್ಟಿಸವ್ನೆ ಸ್ವಾಮಿ
ನಗ್ಗಿನ ಮುಳ್ಳಲ್ಲಿ ಎಳಸೀದ ಸ್ವಾಮಿ
ನಗ್ಗಿನ ಮುಳ್ಳಲ್ಲಿ ಎಳಸೀದ ಸ್ವಾಮಿ
ಗಿಡಕೊಂದೆ ಖಂಡ ಕಿತ್ತೋಗುತ್ತೈತೆ
ಮಾತನಾದರೆ ಆಡಲಿಲ್ಲ
ಪರಮ ಚಂಡಾಲ ಮಾರೇಗೌಡ
ಮಡದಿಯಾದಂಥ ಇಕ್ಕದ ಮಾರಿ
ಧರಣಿ ಶೋಕವ ಮಾಡುತಳಾವಾಗ
ನಗ್ಗಿನ ಮುಳ್ಳಲಿ ತಿರುಗಿಸಿದರು
ಇವನು ಮಾತೇ ಆಡಲಿಲ್ಲವಲ್ಲ
ಅವನ ಉದ್ದ ಗುಂಡಿ ಹೊಡಸ್ದ
ಕುತ್ಕೆ ತಕ್ಕ ಹೂಣಿಬಿಟ್ಟ ಸ್ವಾಮಿ
ಈಗಲಾದರೂ ಮಾತಾಡ್ತೀ ಇಲ್ವೊ
ಇಲ್ಲದಿದ್ದರೆ ಕಲ್ಲ ಎತ್ಕೊಂಡ ಸ್ವಾಮಿ
ನಿಂತ್ಕಂಡ ಮಾರೇಗೌಡನ ಮುಂದೆ
ಮಾತಾಡ್ತೀಯೊ ಇಲ್ಲವೊ ಗೌಡ
ಕಲ್ಲ ಕೈಯ್ಯನ್ನೆ ಬಿಡುತೀನಿ ಈಗ
ಊಟಕೆ ನೀಮ ಕೇಳದೆ ಹೋದರೆ
ಮಾತ ನಾನು ಆಡ್ತೀನಿ ಸ್ವಾಮಿ
ಪರಮ ಪಾಪಿಯು ಇವನು ಎಂದು
ಮನದಲ್ಲಿ ಯೋಚನೆ ಮಾಡಿದ ಸ್ವಾಮಿ
ಗುಂಡಿಂದೀಚೆಗೆ ಎತ್ತಿಕೊಂಡ ಇವನ

ಗುಂಡಿಂದೀಚೆಗೆ ಕರಕೊಂಡನಾಗ
ಹೂವಿನ ಪಾಲಕಿ ತರಿಸಿದ ಸ್ವಾಮಿ
ದಾನಧರ್ಮವ ಮಾಡದ ಪಾಪಿ
ಕಲಿಯುಗದಲ್ಲಿ ಇರಲು ಬಾರ್ದು
ಎಂದು ಕೈಲಾಸಕೆ ಕಳುಸ್ಥ ಸ್ವಾಮಿ ಗಂಡ ಹೆಂಡ್ತಿ ಕೈಲಾಸಕೆ ಕಳುಸ್ಥ
ಕೈಲೈಸಕೆ ಕಳಿಸ್ದ ಸ್ವಾಮಿ
ಏನಂದಾಗ ಹೇಳುತಾನೆ ಸ್ವಾಮಿ
ದಾನಧರ್ಮದ ಮಾಡಲಾರದ ಪಾಪಿಯು
ಕೈಲಾಸಕೋದ ಕತೆಯಿದು ಕೇಳಿರಿ
ಇಂಲ್ಲಿಗಾದರೆ ಮಾರೇಗೌಡನ
ಕತೆಯು ಅಂಕಿತವಾಯಿತೀವಾಗ

*ಹಾಡಿದವರು : ವೆಂಕಟಪ್ಪ*

## ಕೃಷ್ಣ ಕೊರವಂಜಿ

ಮಾಯವೊಂದವತಾರವೆತ್ತೀದ ದೇವ
ಮತ್ತೊಂದವತಾರವೆತ್ತೀದ ಕೃಷ್ಣ
ತನ್ನದೊಂದವತಾರ ತಾ ಮಾಯ ಮಾಡಿ
ಯಾವ ರೂಪಿನಲಿ ತಾ ಹೋಗಬೇಕೆಂದು
ಅಮ್ಮ ಹೆಣ್ಣೊಂದು ಅತಿಚೆಲುವೆ ನೋಡಬೇಕೆಂದು
ಭಾಷೆಯ ಬಗೆದಲ್ಲಿ ತೆಗೆದಾನೋ ದೇವ
ಪಂಜರದ ವಾಲೆಯ ಕಿವಿತುಂಬ ಧರಿಸಿ
ವಾಲೆ ಚೆಂತಾಕೆಂಬ ಒಡವೆಯ ಧರಿಸಿ
ಅಮ್ಮ ಮೇಲಾಟ ಕೊರವಂಜಿ ರೂಪವ ತಾಳಿ
ಮುತ್ತೀನ ಮೂಗುತಿ ಮುದ್ದಾಗಿ ಧರಿಸಿ
ಹವಳದೊಂದಾರವ ಕೊರಳೀಗೆ ಹಾಕಿ
ಪಟ್ಟೆಯ ಸೀರೆಯ ಉಟ್ಟಾನೆ ಸ್ವಾಮಿ
ಕುಚ್ಚಿನ ಕುಪಸವ ಬೆನ್ನೀಗೆ ತೊಟ್ಟು
ಅಪರಂಜಿ ಬಳೆಗಳ ಕೈ ತುಂಬ ತೊಟ್ಟು
ಕಾಲಿಗೆ ಮಿಂಚುಗಳ ನಿಟ್ಟಾನೆ ಸ್ವಾಮಿ
ಮಾಯದ ಮಗವನ್ನೆ ಬೆನ್ನೀಗೆ ಬಿಗಿದು
ತಲೆಮೇಲೆ ಚಿನ್ನಾದ ಸಿಂಬೆಯ ಮಡಗಿ
ಸಿಂಬೆಯ ಮೇಲೆ ಕೊರವಿ ಗೂಡೆಯ ಮಡಗಿ
ಕಣಿ ಹೇಳೊ ಗಗ್ರವ ಕೈಯಲ್ಲಿ ಹಿಡಕೊಂಡು
ಅಪರೂಪ ಕೊರವಂಜಿ ಆದಾನೆ ಸ್ವಾಮಿ
ಒಕ್ಕಲ ಬೀದೀಲಿ ಹೊಕ್ಕು ಮೆರೆದಾಳೊ
ಕುಂಬಾರು ಬೀದೀಲಿ ಕುಣಿದಾಡಿಕೊಂಡು
ನಾಲ್ಕು ಬೀದೀಲಿ ತಿರುಗಿ ನಡುವೆ ನಿಂತಾಳು
ರಾಜಾಬೀದೀಲಿ ಬಂದು ನಿಂತವಳೆ ಕೊರವಿ
ಅಮ್ಮ ಕಣಿಕೇಳಿ ಕಣಿ ಎಂದು ಕರೆದು ಕೂಗಿದಳು
ಕಣಿಯೆಂಬ ಆ ಮಾತ ರುಕ್ಮಣಿ ಕೇಳಿ
ಕರೆತಾರೆ ಕೊರವೀನ ಕರೆ ನಮ್ಮ ಮನೆಗೆ
ತನುಮನೆ ದಾದೀರ ತಾನು ಕಳುಗಿದಳು

೧೫೬. ದೊಂಬಿದಾಸ ಸಮುದಾಯ

ಅರಮನೆ ಗೌಡೀರೆ ಓಡೋಡಿ ಬಂದು
ಅಮ್ಮಯ್ಯ ನೀನು ಬಾರೆ ಅಕ್ಕಯ್ಯ ನೀ ಬಾರೆ
ನಮ್ಮ ರಾಣಿ ಕರೆದಾಳು ನೀ ಬಾರೆ ಕೊರವಿ
ನಿಮ್ಮ ರಾಣಿ ಹೆಸರೇಳೆ ನಿನ್ನ ಊರೇಳೆ
ನಮ್ಮ ರಾಣಿಯಾದರೆ ರುಕ್ಮಿಣಿ ಕಾಣೆ
ನಾವು ಅವಳರಮನೆ ಗೌಡೀರು ಗರತಿ
ಪುರುಷರಿಲ್ಲದ ಮನೆಗೆ ಸೇರುವಳಲ್ಲ
ಗಂಡುಸಿಲ್ಲದ ಮನೆಗೆ ಹೇಗೆ ಬರಲಮ್ಮ
ಹೆಣ್ಣು ನಾವೆಲ್ಲವು ಏನಮ್ಮ ಭಯವು
ರುಕ್ಮಿಣಿ ಇರುವಾಗ ಏನಮ್ಮ ಚಿಂತೆ
ಅಂಜಿಕೊ ಬೇಡವೆ ಅಕ್ಕಯ್ಯ ಕೊರವಿ
ಅಂಜುತ ಒಂದೆಜ್ಜೆ ಅಂಜದೊಂದೆಜ್ಜೆ
ಹಿಂದಕೆ ಎರಡೆಜ್ಜೆ ಮುಂದೆ ಮೂರೆಜ್ಜೆ
ಹದಿನಾರು ಬಾಗಿಲ ದಾಟಿ ಬಂದಾಳು
ಅಮ್ಮ ಚೆಲುವ ಚಪ್ಪರದಲ್ಲಿ ಬಂದು ನಿಂತಾಳು
ಕೊರವಂಜಿ ಬರೋದಾರಿ ರುಕ್ಮಿಣಿ ನೋಡಿ
ಮುತ್ತಿನ ಗದ್ದಿಗೆ ಇಳುದುಬಂದಾಳು
ರತ್ನಗಂಬಳಿ ತಂದು ಆಗ ಹಾಸಿದಳು
ಚಿನ್ನದ ಚಿಟಚಾಪೆ ಕೊರವಿಗಾಸಿದಳು
ಹವಳದ ಗದ್ದಿಗೆ ಅವಳಾಸಿಕೊಂಡು
ಕೂರೆಲೆ ಎಲೆಕೊರವಿ ಕೂತುಕೊ ನೀನು
ಕೂತುಕೊಂಡ ಮೇಲೆ ಯಾವೂರೆ ನಿಮದು
ನಮ್ಮೂರ ನಮ್ಮ ಸೀಮೆ ಕೇಳೀಯ ರಾಣಿ
ನಮ್ಮೂರ ನಮ ಶೀಮೆ ಹೇಳೇನು ಕೇಳೆ
ಅಂಕಟಂಕಿನ ನಮ್ಮ ಗೋರ ಮಲೆಯಾಳ
ಮೆಚ್ಚಿನಾ ಬಂದರೆ ನಮ್ಮತ್ತೆಯ ಮನೆಯು
ಅಮ್ಮ ಬೇಸರಿಕೆ ಬಂದರೆ ನಮ್ಮ ತೌರೂರು
ದಿಳ್ಳಿದಿವಾನಗಿರಿ ಮೊದಲಲ್ಲೆ ನಮದು
ಆಕಾಶ ಬಾಣವ ಸೋಕಿ ನಾ ಬಂದೆ
ಹೆಣ್ಣೆ ಆದಿಗಣೇಶ್ವರನ ಮಗಳಲ್ಲವೇನೆ
ಸಿದ್ಧಲಿಂಗೇಶ್ವರ ಚಿಕ್ಕಪ್ಪ ನನಗೆ
ವೈಯ್ಯಾರಿ ಪುರದಿಂದ ಈಗಿಳಿದು ಬಂದೆ
ತೊಟ್ಲು ಗೂಡೆಯುತಂದು ಮಾರುವಳಲ್ಲ
ಒಂದು ಮನೆಕೊಪ್ಪಲಿಗೆ ಹೋಗುವಳಲ್ಲ

ಸುಳ್ಳು ಸೂವಾದ ಕಣಿಯು ನನಗೆ ಬರದಲ್ಲೆ
ಹೆಣ್ಣೆ ಸುಳ್ಳಂತಲಿದ್ದೀಯ ನನ್ನ ಕಣಿಯ ನೀನು
ಸುಳ್ಳಲ್ಲ ಕಾಣಮ್ಮ ಮಗುಮೇಗಲಾಣೆ
ಹುಸಿಯಲ್ಲ ಕಾಣಮ್ಮ ಶಿಶುಮೇಗಲಾಣೆ
ವಸುಂದರಪುರದ ವಲ್ಲಭರಾಯನಿಗೆ
ಮಾಯದ ಮಗುವಿನ ಹಣೆಯ ಮುಟ್ಟಿದಳು
ಹಣೆಯ ಮುಟ್ಟಿ ಕೊರವಿ ಭಾಷೆ ಮಾಡಿದಳು
ಗನವಾದ ಮಾತೀಗ ನಿನಗೇತಕೆಣ್ಣೆ
ಮುತ್ತು ನಾ ಕೊಡಿಸೇನು ಕಣಿ ಹೇಳೆ ಕೊರವಿ
ಮುತ್ತು ನನ್ನ ಅರಮನೆ ಮುಗ್ಗಿದ ಜೋಳ
ಹವಳವ ಕೊಡಿಸೇನು ಕಣಿ ಹೇಳೆ ದುಂಡಿ
ಹವಳವು ನನಮನೆ ತೊಗರಿ ಕಾಣೆಣ್ಣೆ
ಮಾಣಿಕ್ಯ ಕೊಡಿಸೇನು ಕಣಿಹೇಳೆ ಕೊರವಿ
ಮಾಣಿಕ್ಯ ನನಮನೆ ಮಲ್ಲಿಗೆ ಹೂವು
ರವರತ್ನ ಕೊಡಿಸೇನು ಕಣಿಹೇಳೆ ಕೊರವಿ
ರವರತ್ನ ನನಮನೆ ರಾಗಿಕಾಳಲ್ಲವೆ
ವಜ್ರವ ಕೊಡಿಸೇನು ಕಣಿಹೇಳೆ ದುಂಡಿ
ವಜ್ರಾವು ನನಮನೆ ಒಡಕು ಜೋಳವೆ
ಏನುಕೊಟ್ಟಾರು ಕೊರವಿ ಒಲ್ಲೆನೆಂದೀಯ
ಇನ್ನೇನು ಕೊಡಬೇಕೆ ಮಾಯದ ಕೊರವಿ
ಕುದುರೆಯ ಕೊಡಿಸೇನು ಕಣಿಹೇಳೆ ಕೊರವಿ
ಕುದುರೆಯು ನನಮನೆ ಕುರಿಹಿಂಡು ಕಾಣೆ
ಆನೆಯು ನನಮನೆ ಕೋಣಾದ ಹಿಂಡು
ಒಂಟೆಯ ಕೊಡಿಸೇನು ಕಣಿಹೇಳೆ ಕೊರವಿ
ಒಂಟೆಯು ನನಮನೆ ಭಂಟನು ಕಾಣೆ
ಏನು ಕೊಟ್ಟರು ಕೊರವಿ ಒಲ್ಲೆನೆಂದೀಯ
ಮತ್ತೇನ ಕೊಡಬೇಕ ಮಾಯದ ಕೊರವಿ
ನೀ ಕೊಡುವ ಒಡವೆಲ್ಲ ನನಗೇನು ಬೇಕು
ನೀಕಂಡ ಕನಸೆಲ್ಲ ನಾನು ಒಡದೇಳಿದರೆ
ನಿನ್ನ ಗುರುತು ನಿನ್ನ ನೆಪ್ಪು ನಾನು ಹೇಳಿದರೆ
ನೀನುಂಬ ಊಟವೆ ನಿನಗೆ ತೋರಿದರೆ
ಮೆಚ್ಚೇನ ಕೊಡಿಸೀಯೆ ರುಕ್ಮಿಣಿ ನನಗೆ
ನಾ ಕಂಡ ಕನಸೆಲ್ಲ ನೀನು ಹೇಳಿದರೆ
ನನ್ನ ಮನಸಿನಲ್ಲಿರುವಂಥ ಮಾತು ಹೇಳಿದರೆ

ಕನಸ ಕಂಡಿರುವಂಥ ಕಾರ್ಯ ಹೇಳಿದರೆ
ನಾನುಂಬೊ ಊಟವ ನನಗೆ ತೋರಿದರೆ
ನಿನ್ನ ಮಗುವಿಗೆ ಹೊನ್ನಿನುಂಗುರ ಮಾಡಿಸಿಕೊಡುವೆ
ಅಪರಂಜಿ ಬಳೆಗಳ ತೊಡಿಸಿ ನಾ ಕಳಹುವೆ
ಪಟ್ಟೆಯ ಸೀರೆಯ ನಾ ಉಡಿಸಿ ಕಳಹುವೆ
ಗೂಡೆ ತುಂಬ ಮುತ್ತ ನಾ ಸುರಿದು ಕೊಡುವೆ
ಮೆಚ್ಚೇನೆ ಎಲೆ ಕೊರವಿ ನಿನ್ನ ಮೆಚ್ಚೇನು
ಆ ಮಾತಿಗೆ ಕೊರವಿ ಒಪ್ಪಿಕೊಂಡಳು
ಮಂಗಳವಾರದ ದಾನದಲ್ಲಿ ಮನೆ ಸಾರಿಸೆಣ್ಣೆ
ಅಂಟು ಮಂಟುಗಳಿಗೆಯ ನೀರ ನೀ ಸ್ನಾನ ಮಾಡೆ
ನೆಲ್ಲಕ್ಕಿ ನೆಲಗಡಲೆ ತಂದಿರಿಸೆ ಗರತಿ
ಒಳ್ಳೆ ಹತ್ತು ತೆಂಗಿನಕಾಯ ಮುಂದಿಟ್ಟು ಕೇಳೆ
ಮೂಗಳ ಮುತ್ತ ತಂದು ಸ್ಯಾವೆಗಿಡು ಹೆಣ್ಣೆ
ಸಾಂಬ್ರಾಣಿ ಧೂಪಹಾಕಿ ಸಾಷ್ಟಾ ಬೀಳೆಣ್ಣೆ
ನಿಮ್ಮ ದೇವರ ನೀನು ನೆನಕೊಳ್ಳೆ ಗರತಿ
ನಮ್ಮ ದೇವರು ನಮ್ಮ ಭಾಗದಲ್ಲವನೆ
ನಮ್ಮ ದೇವರ ನಾನು ನೆನೆಕೊಂಬುತೀನಿ
ಮೂಡ್ಲಗಿರಿ ತಿಮ್ಮರಾಯ ಮುತ್ತತ್ತಿರಾಯ
ಅನ್ನಪೂರ್ಣ ಜ್ಞಾನೇಶ್ವರ ಹನುಮಂತರಾಯ
ನೆಲ್ಲೂರ್ ಮೂಲೇಶ ನೀಲಕಂಠೇಶ
ಅಲ್ಲೋರಿ ಪುಲ್ಲೋರಿ ಅಕ್ಕಲದೇವಿ
ಭೂಮಿ ದೇವತೆ ತಾಯಿ ಕೊಲ್ಲಾ ಪುರದರಸಿ
ಬೋರ ಬೋರನೆ ನನಗೆ ವಾಕ್ಕ ಕೊಡಮ್ಮ
ಮೇಲ್ಕೋಟೆ ಚೆಲುವರಾಯ ಬಂದು ನಿಲ್ಲಯ್ಯ
ಓಬಳದ ನರಸಿಂಹ ವಾಕು ಕೊಡೆನಗೆ
ಕಪಿನಿಯ ನಂಜುಂಡ ಬಾರೊ ದಮ್ಮಯ್ಯ
ಚುಂಚನಗಿರಿ ಭೈರವನೆ ಬಂದು ನಿಲ್ಲಯ್ಯ
ಇನ್ನು ಮೇಲೆ ನಿನಗೆ ಕಣಿಯ ಹೇಳುವುದು
ಕೈತಾರೆ ಎಲೆ ಹೆಣ್ಣೆ ಕೈಯ್ಯ ನೋಡೇನು
ಕೈನೋಡಿ ನಿನಗೊಂದು ಗುರುತು ಹೇಳೇನು
ಹೆಣ್ಣೆ ಅಂಟದೆ ಮುಟ್ಟದೆ ಕಣಿ ಹೇಳ ನನಗೆ
ಅಂಗಾದ್ರೆ ಕಣಿಯು ಆಗಾದು ಹೆಣ್ಣೆ
ಮುಟ್ಟಾದೆ ಎನ್ನೊಡಯ ವಾಕು ಕೊಡನಲ್ಲೆ
ತೊಟ್ಟಾದೆ ಮುಟ್ಟಾದೆ ಕೈ ಕೊಟ್ಟಳಾಗ

ಕೈ ನೋಡಿ ಕೊರವಂಜಿ ಏನನ್ನುತಾಳೆ
ಎಂಟು ಮಂದಿಯು ನಿನ್ನ ನಂಟರು ಗರತಿ
ಸುಂಟರಗಾಳೀಲಿ ತಿರುಗುತ್ತಿದ್ದಲ್ಲೆ
ಉಂಟೊ ಇಲವಂತ ಅನುಮಾನ ಬೇಡ
ಈವಾಗ ಒಂದು ಮಾತು ಕುರಿತಲ್ಲೆ ನೀನು
ಶಂಕಚಕ್ರವ ಒಂದ್ನೆನೆದಲ್ಲೆ ಗರತಿ
ವೇಣುನಾದದ ಕೃಷ್ಣ ನಿನ್ನ ಗಂಡನು ಹೋಗೆ
ಈ ಹೊತ್ತು ಬರುವವನು ನಾಳೆ ಬರುತಾನೆ
ಮೂಡಲ ಸೀಮೆಗೆ ಹೋಗವ್ನೆ ಕೃಷ್ಣ
ಮತ್ತನೇರುವ ರತ್ನ ನಿನಗೆ ತರುತಾನೆ
ನಿನಗಂಡ ಬರುತಾನೆ ನಿನಗೇನೆ ಚಿಂತೆ
ಇನ್ನು ಮೂರು ದಿನಕೆ ತಪ್ಪದೆ ಬರುವ
ಬಂದಾ ಮೂರುದಿನಕೆ ನಿನಗೆ ಮದುವೆಹೆಣ್ಣೆ
ಈ ಮನೆ ಮುಂದುಗಡೆ ಚಪ್ಪರಾ ಕೋರು
ಈ ಚಪ್ಪರದೊಳಗೆಣ್ಣೆ ಕೈಯ ಹಿಡಿಸೋದು
ಬರುವೋದು ತಡವಾಗಿ ಪಾದ ಹಿಡಿಯಮ್ಮ
ಪನ್ನೀರ ತಂದಾಗ ಪಾದ ತೊಳೆಹೆಣ್ಣೆ
ಪಾದ ತೊಳೆದ ತೀರ್ಥ ಪಾನಮಾಡೆಣ್ಣೆ
ಅಪ್ಪರಲಿ ರುಕ್ಮಿಣಿ ಕೇಳಿಕೊಂಡಳಾಗ
ತಿಳುಕೊಂಡು ರಕ್ಮಿಣಿ ಏನಂಬುತಾಳೆ
ಕೈತಾರೆ ಕೊರವಂಜಿ ಕೈಯ ನೋಡೇನು
ಕೈ ನೋಡಿ ರುಕ್ಮಿಣಿ ಏನಂಬುತಾಳೆ
ಇದು ಎಲ್ಲಿ ಹೆಣ್ಣು ಕೈಯಿ ಇದು ಗಂಡಸರದು
ಇದು ಎಲ್ಲಿ ಹೆಣ್ಣು ಮಾತು ಇದು ಗಂಡು ಮಾತು
ನಾಚಿಕೆ ಪಟ್ಟಾಳೊ ಕೋಣೆ ಸೇರಿದಳೊ
ಹೆಂಗಸರ ನಾಚಿಕೆ ಕೆಡಸಬಾರದೆಂದು
ಇದ್ದೋನು ಇದ್ದಂಗೆ ತಾ ಮಾಯವಾದ
ದ್ವಾರಕಪುರದಲ್ಲಿ ಸೇರಿದ ಸ್ವಾಮಿ
ಮಾಯವೊಂದವತಾರ ಮಾಯವ ಮಾಡಿ
ಪಟ್ಟು ಪಟ್ಟಾವಳಿ ಪೆಟ್ಟಿಗೆ ತುಂಬಿ
ಆಭರಣದೊಡವೆಯ ಭರಣಿಗೆ ತುಂಬಿ
ತನಮೇಗ್ಲ ಗೂಡೆಯ ಕೊರಮರಿಗೆ ಕೊಟ್ಟು
ತನ್ನ ಕಂಕುಳ ಮಗುವ ತಾ ಮಾಯ ಮಾಡಿ
ಕಾವೇರಿ ಹೊಳೆಯಲ್ಲಿ ಸ್ನಾನವ ಮಾಡಿ

ಪಟ್ಟ ತಿರುಮಣಿನೀಗ ಇಟ್ಟಾನೆ ಸ್ವಾಮಿ
ವಜ್ರದ ನಿಲುವಂಗಿ ತಾ ತೊಟ್ಟುಕೊಂಡು
ಪ್ರಬಲ ಕಿರೀಟವು ಧರಿಸಿದ ಕೃಷ್ಣ
ಶಂಖುಚಕ್ರವನ್ನು ಬಲಗೈಲಿ ಧರಿಸಿ
ವೇಣುನಾದದ ಕೋಲು ಕೈಲಿ ಹಿಡುಕೊಂಡು
ಒಳ್ಳೆ ಗೋವರ್ಧನಾಗಿರಿಯ ಬೆಟ್ಟವೆತ್ತಿದ
ಹದಿನಾರು ಸಾವಿರ ಗೋಪಾಲ ಸ್ತ್ರೀಯರ
ಗೋಪಾಲಸ್ತ್ರೀಯರ ತನವ್ವೊಂದಿಗೆ ಕರಕೊಂಡು
ತಾಳಮೇಳದಿಂದ ಹೊರಟಾನೆ ಸ್ವಾಮಿ
ಕೃಷ್ಣ ಬರೊದಾರಿ ರುಕ್ಮಿಣಿ ನೋಡಿ
ಇವನೆ ತನ ಪುರುಷನೆಂದು ಕೈಯೆ ಮುಗಿದು
ಪನ್ನೀರು ತಂದಾಗ ಪಾದ ತೊಳೆದಾಳು
ಪಾದತೊಳೆದ ತೀರ್ಥ ಪಾನವೆ ಮಾಡಿ
ಮುತ್ತಿನ ಸೆರಗಿನಲಿ ಪಾದ ವೊತ್ತಿದಳು
ಸ್ವಾಮಿ ನಿನ ಮಾಯವೆ ನಾನು ಕಾಣದೆ ಹೋದೆ
ನಿಮ್ಮುಂದೆ ನಿಜರೂಪು ತಿಳಿಯದೆ ಹೋದೆ
ಒತ್ತಿದ್ದೀಯೆ ಸ್ವಾಮಿ ಗಂಡುರೂಪನ್ನು
ತಾಳಿದೆ ಸ್ವಾಮಿ ಹೆಣ್ಣು ರೂಪನ್ನು
ಹತ್ತನೆ ಅವತಾರ ನಿಮಗೆ ಸಲುವುದು
ಹನ್ನೊಂದನೆ ಅವತಾರ ನಿಮಗೆ ಸಲುವುದು
ಕೃಷ್ಣನ ತಾಯ್ತಂದೆ ಅಲ್ಲಿಗೆ ಬಂದು
ರುಕ್ಮಿಣಿ ತಾಯ್ತಂದೆ ಅಲ್ಲಿಗೆ ಸೇರಿ
ದೇವ ದೇವರ್ಕಳು ಅಲ್ಲಿಗೆ ಬಂದು
ಆಕಾಶವೇನಷ್ಟು ಚಪ್ಪರವನಿಟ್ಟು
ಭೂಮಿದೇವತೆಯಷ್ಟು ಹಸೆ ಜಗಲಿ ಬರೆದು
ಚಿಕ ಚಿಕ ಮುತ್ತಿನಲೆ ಸಾಸನಿಟ್ಟರು
ಆಣೆ ಮುತ್ತನು ತಂದು ಧಾರೆ ಎರೆದಾರು
ಕೃಷ್ಣನಿಗು ರುಕ್ಮಿಣಿಗು ಲಗ್ನ ಮಾಡಿದರು
ಬ್ರಹ್ಮತ್ರೈಮೂರ್ತಿಗಳು ದಾರೆಯ ಎರೆದರು
ಮದುವಿನ್ನ ಆಯಿತು ಕೃಷ್ಣನೆ ನಿನಗೆ
ಕಲ್ಯಾಣವಾಯಿತೆ ರುಕ್ಮಿಣಿ ನಿನಗೆ
ಬ್ರಹ್ಮತ್ರೈಮೂರ್ತಿಗಳು ಏನಂದರಾಗ
ಇಬ್ಬರಿಗು ಇದು ಚೆಂದ ಇದು ಒಳ್ಳೆ ಅಂದ
ಎಷ್ಟು ಪುಣ್ಯ ಕಥೆ ಕೇಳಿದವರಿಗೆ

ರುಕ್ಮಿಣಿ ಕಲ್ಯಾಣ ಕೇಳಿದವರಿಗೆ
ಮಾಡಿದ ಪಾಪವೆ ಪರಿಹಾರವೆಂದು
ಹರಿಲೋಕದಲ್ಲೊಂದು ಹರಿಯಸ್ಮರಣೆಯು
ಶ್ರೀ ಕೃಷ್ಣ ಮಂಗಳಂ ಲೋಕಾದಿ ಸೇವಿತ
ಕಾರುಣ್ಯ ಪುರುಷ ಲೋಕಾದಿ ಸೇವಿತ
ಮುಖಾರವಿಂದವಿನುತ ವರಕಾಮ ಪಾಲಿತ
ಶಾರದ ಬಂಧುವೆ ನೀರೇಜ ಕಂದನೆ
ರಕ್ಷಿಸಯ್ಯ ದಾಸರ ಅಕ್ಷಯವನಿತ್ತು
ರಕ್ಷಿಸೆನ್ನನು ಪಕ್ಷಿವಾಹನನೆ
ಶ್ರೀಕೃಷ್ಣ ಮಂಗಳಂ

*ಹಾಡಿದವರು : ಮರಿಯಪ್ಪ ಚೆನ್ನಪ್ಪ*

## ಅಂಕಿಅಂಶಗಳು: ೧. ಕರ್ನಾಟಕ ದೊಂಬಿದಾಸ ಸಮುದಾಯದ ಕುಟುಂಬವಾರು ನೆಲೆಗಳು

| ಜಿಲ್ಲೆ | ತಾಲೂಕು | ಗ್ರಾಮೀಣ | ನಗರ | ನೆಲೆ | ಕುಟುಂಬ | ಗಂಡು | ಹೆಣ್ಣು | ಒಟ್ಟು |
|---|---|---|---|---|---|---|---|---|
| I | II | III | IV | V | VI | VII | VIII | IX |
| ಬೆಂಗಳೂರು | | | | | ೧೬೫ | ೩೫೨ | ೩೨೬ | ೮೫೬ |
| | ಬೆಂಗಳೂರು ಉತ್ತರ | ಬ್ಯಾಡರಹಳ್ಳಿ | | ಮುದ್ದಿನಪಾಳ್ಯ | ೧೩ | ೨೩ | ೨೭ | ೬೩ |
| | | ದಾಸರಹಳ್ಳಿ | | ಮೂಗಡ ಲಕ್ಷ್ಮಿ, ದಾಸರಹಳ್ಳಿ | ೩೮ | ೬೭ | ೬೨ | ೧೬೭ |
| | | ಟಿ. ದಾಸರಳ್ಳಿ | | ಟಿ. ದಾಸರಳ್ಳಿ | ೫೨ | ೧೬೬ | ೧೪೨ | ೩೯೦ |
| | | ರಾಜಾಜಿನಗರ | | ಕಮಲನಗರ | ೧೦ | ೧೫ | ೨೨ | ೪೭ |
| | | ಶಿವಕೋಟೆ | | ಕಾಳೇನಹಳ್ಳಿ | ೩೨ | ೮೧ | ೬೩ | ೧೮೬ |
| ಬೆಂಗಳೂರು ಗ್ರಾಮಿಣ | | | | | ೨೫ | ೬೧ | ೮೫ | ೧೪೧ |
| | ದೊಡ್ಡಬಳ್ಳಾಪುರ | ಮದೂರೆ | | ಮಧುರೆ | ೨ | ೭ | ೮ | ೧೬ |
| | | ತೊಬಗೇರೆ | | ತೊಬಗೇರೆ | ೫ | ೧೩ | ೧೬ | ೩೪ |
| | | | ದೊಡ್ಡಬಳ್ಳಾಪುರ | ದೊಡ್ಡಬಳ್ಳಾಪುರ | ೨ | ೨೦ | ೨೪ | ೪೬ |
| | ಮಾಗಡಿ | ಬಿಲಗುಂಬ | | ಬಿಲಗುಂಬ | ೧೨ | ೨೪ | ೨೯ | ೬೫ |
| | | | | ಹೊಸಪಾಳ್ಯ | ೪ | ೭ | ೮ | ೧೯ |

| I | II | III | IV | V | VI | VII | VIII | IX |
|---|---|---|---|---|---|---|---|---|
| ಚಿಕ್ಕಮಗಳೂರು | | | | | ೧೦೫ | ೨೮೪ | ೨೭೬ | ೬೬೫ |
| | ಕಡೂರು | ಜೋಡಿತಿಮ್ಮನಹಳ್ಳಿ | | ದಾಸರಹಟ್ಟಿ | ೭೭ | ೧೭೮ | ೧೬೪ | ೪೧೯ |
| | ತರಿಕೆರೆ | ಅಜ್ಜಂಪುರ | | ಅಜ್ಜಂಪುರ | ೬ | ೧೫ | ೧೨ | ೩೩ |
| | | ದಾಸರಹಟ್ಟಿ | | ದಾಸರಹಟ್ಟಿ | ೩೨ | ೯೧ | ೯೦ | ೨೧೩ |
| ಚಿತ್ರದುರ್ಗ | | | | | ೬೩ | ೧೩೮ | ೧೧೦ | ೨೪೮ |
| | ಹಿರಿಯೂರು | | ಹಿರಿಯೂರು | ಹಿರಿಯೂರು | ೬೩ | ೧೩೮ | ೧೧೦ | ೨೪೮ |
| ದಾವಣಗೆರೆ | | | | | ೨೯೦ | ೭೧೨ | ೬೪೧ | ೧೬೪೩ |
| | ದಾವಣಗೆರೆ | ಅಣಜಿ | | ಅಣಜಿ | ೨೪ | ೫೯ | ೪೧ | ೧೨೪ |
| | | ಬಾತಿ | | ಬಾತಿ | ೧೨ | ೨೩ | ೨೪ | ೫೯ |
| | | ಬೆಳವನ್ನೂರು | | ತರಳುಬಾಳು | ೧೩ | ೩೦ | ೨೦ | ೬೩ |
| | | ಗುತ್ತೂರು | | ಗುತ್ತೂರು | ೫ | ೧೧ | ೮ | ೨೪ |
| | | ಕೈಧಾಳೆ | | ಕೈದಾಳೆ | ೮ | ೨೨ | ೧೨ | ೪೨ |
| | | ಕೊಂಡಜ್ಜಿ | | ಕೊಂಡಜ್ಜಿ | ೧೦ | ೨೫ | ೧೯ | ೫೪ |

| I | II | III | IV | V | VI | VII | VIII | IX |
| --- | --- | --- | --- | --- | --- | --- | --- | --- |
| | ಹರಿಹರ | ಬೆಳ್ಳೂಡಿ | | ಎಕ್ಕೆಗುಂಡಿ | ೪೩ | ೯೬ | ೮೪ | ೨೨೩ |
| | | ಮಲೆಬೆನ್ನೂರು | | ಬಸವೇಶ್ವರ ಬಡಾವಣೆ | ೧೦ | ೨೨ | ೨೬ | ೫೮ |
| | ಜಗಳೂರು | ದೊಣೆಹಳ್ಳಿ | | ಸಿದ್ಧಮನಹಳ್ಳಿ | ೮೯ | ೨೩೭ | ೨೧೬ | ೫೪೨ |
| | | | | ಐನಹಳ್ಳಿ | ೬ | ೧೮ | ೧೬ | ೪೦ |
| | | | | ಬಂಗಾರಕ್ಕನಗುಡ್ಡ | ೪೦ | ೧೦೦ | ೧೦೫ | ೨೪೫ |
| | | ಗುತ್ತಿದುರ್ಗ | | ಮಹಾರಾಜಹಟ್ಟಿ | ೧೧ | ೨೨ | ೩೦ | ೬೩ |
| | | ಬಸವನಕೋಟೆ | | ಬಸವನಕೋಟೆ | ೮ | ೨೧ | ೨೧ | ೫೦ |
| ಹಾಸನ | | | | | ೧೭೭ | ೪೦೬ | ೩೬೨ | ೯೪೫ |
| | ಅರಸೀಕೆರೆ | ಶ್ಯಾನೆಗೆರೆ | | ತಿಮ್ಮನಹಳ್ಳಿ | ೩೦ | ೯೧ | ೭೭ | ೧೯೮ |
| | | | ಅರಸೀಕೆರೆ | ಅರಸೀಕೆರೆ | ೧೨ | ೩೦ | ೨೧ | ೬೩ |
| | ಸಿ.ಆರ್. ಪಟ್ಟಣ | ಬಡ್ಡಹಾಳ್ಳ | | ಮಡಬ | ೯ | ೨೨ | ೧೩ | ೪೪ |
| | | ಬಾಳಗಂಚಿ | | ತಿಮ್ಮಲಾಪುರ | ೨೨ | ೪೯ | ೪೩ | ೧೧೪ |
| | | ಬೆಳಗಿಹಾಳ್ಳ | | ಜಿನ್ನನಾಥಪುರ | ೧ | ೩ | ೩ | ೭ |
| | | | | ಕಾವಲಹೊಸೂರು | ೧೭ | ೩೫ | ೩೭ | ೮೯ |

| I | II | III | IV | V | VI | VII | VIII | IX |
|---|---|---|---|---|---|---|---|---|
| | | ಬಿದರೆ | | ಬಾಳೆಹಳ್ಳಿ | ೧ | ೩ | ೩ | ೭ |
| | | ಬ್ಯಾಡರಹಳ್ಳಿ | | ಮಡಬಕೊಪ್ಪಲು | ೩೪ | ೬೫ | ೬೫ | ೧೬೪ |
| | | ಚಿಮ್ಮನಹಳ್ಳಿ | | ಕೊಂಡಜ್ಜಿ | ೧೨ | ೨೭ | ೨೦ | ೫೯ |
| | | ದಿಡಗ | | ಮೆಲ್ಲಹಳ್ಳಿ | ೪ | ೮ | ೧೧ | ೨೩ |
| | | ಗೌಡಗೆರೆ | | ಬೇಡಿಗನಹಳ್ಳಿ | ೨ | ೪ | ೫ | ೧೧ |
| | | ಗುಳಸಿಂಧ | | ಚಿಕ್ಕನಾಯ್ಕನಹಳ್ಳಿ | ೨ | ೪ | ೪ | ೧೦ |
| | | | | ಗುಳಸಿಂಧ | ೮ | ೧೭ | ೧೭ | ೪೨ |
| | | | | ಮಾಳೆಕೊಪ್ಪಲು | ೩ | ೭ | ೫ | ೧೫ |
| | | ನೊರನಕ್ಕಿ | | ಕಲ್ಲೇನಹಳ್ಳಿ | ೩ | ೮ | ೫ | ೧೬ |
| | | | | ಕೆ. ಸಿಂಗೇನಹಳ್ಳಿ | ೧೦ | ೨೧ | ೧೯ | ೫೦ |
| | | ಸಾತೇನಹಳ್ಳಿ | | ಕುರಿಕಾವಲು | ೨ | ೪ | ೪ | ೧೦ |
| | | | ಸಿ.ಆರ್. ಪಟ್ಟಣ | ಸಿ.ಆರ್. ಪಟ್ಟಣ' | ೨ | ೩ | ೩ | ೮ |
| | ಎಚ್.ಎನ್.ಪುರ | ಎಚ್.ಎನ್.ಪುರ | | ಎಚ್.ಎನ್.ಪುರ | ೧ | ೨ | ೧ | ೪ |
| | | ಮೂಡಲಹಿಪ್ಪೆ | | ಅಡಕೆ ಹೊಸೂರು | ೧ | ೨ | ೨ | ೫ |
| | | | | ಗದ್ದೆ ಹೊಸೂರು | ೧ | ೧ | ೪ | ೬ |

| I | II | III | IV | V | VI | VII | VIII | IX |
| --- | --- | --- | --- | --- | --- | --- | --- | --- |
| ಕೋಲಾರ | | | | | ೩೬ | ೯೨ | ೯೧ | ೨೧೯ |
| | ಬಾಗೆಪಲ್ಲಿ | ಸೋಮನಾಥಪುರ | | ಹುರುವಳ್ಳಿ | ೧೨ | ೨೯ | ೨೮ | ೬೯ |
| | ಚಿಕ್ಕಬಳ್ಳಾಪುರ | ವೆಂಕಟಗಿರಿಕೋಟೆ | | ವೆಂಕಟಗಿರಿಕೋಟೆ | ೭ | ೧೯ | ೨೧ | ೪೭ |
| | ಗೌರಿಬಿದನೂರು | ಹೊಸೂರು | | ಸೊಮಶೆಟ್ಟಿಹಳ್ಳಿ | ೧೭ | ೪೪ | ೪೨ | ೧೦೩ |
| ಮಂಡ್ಯ | | | | | ೧೪೪ | ೩೨೦ | ೨೮೬ | ೭೫೦ |
| | ಕೆ.ಆರ್.ಪೇಟೆ | ಅಘಲಯ | | ರಾಮನಹೊಪ್ಪಲು | ೮ | ೨೧ | ೧೩ | ೪೨ |
| | | ಅಕ್ಕಿಹೆಬ್ಬಾಳು | | ಸಾಕ್ಷಿಬೀಡು | ೨ | ೬ | ೩ | ೧೧ |
| | | ಆನೆಗೊಳ | | ಜನಗೊಳ | ೧ | ೨ | ೧ | ೪ |
| | | ಚಿಕ್ಕೊನಹಳ್ಳಿ | | ಚಿಕ್ಕೊನಹಳ್ಳಿ | ೧ | ೩ | ೧ | ೫ |
| | | ಚೌಡನಹಳ್ಳಿ | | ಚೌಡೇನಹಳ್ಳಿ | ೮ | ೧೭ | ೧೮ | ೪೩ |
| | | | | ಮಾಣಿಕ್ಯನಹಳ್ಳಿ | ೧೭ | ೪೭ | ೪೨ | ೧೦೬ |
| | | ಮಾಕವಳ್ಳಿ | | ವಡ್ಡರಹಳ್ಳಿ | ೧೨ | ೨೧ | ೨೪ | ೫೭ |
| | | ಮಾಲಗೂರು ಹೊಸಳ್ಳಿ | | ಮಾಳಗೂರು ಹೊಸಳ್ಳಿ | ೭ | ೧೯ | ೧೫ | ೪೧ |
| | | ನಾಯಸಿಂಗನಹಳ್ಳಿ | | ನಾಯಸಿಂಗನಹಳ್ಳಿ | ೨೨ | ೪೫ | ೪೩ | ೧೧೦ |
| | ಮಂಡ್ಯ | ಗುತ್ತಲು | | ಗುತ್ತಲು | ೧೧ | ೨೧ | ೧೮ | ೫೦ |

| I | II | III | IV | V | VI | VII | VIII | IX |
|---|---|---|---|---|---|---|---|---|
| | | ಇಂಡವಾಳು | | ತಣಸನಹಳ್ಳಿ | ೩ | ೬ | ೬ | ೧೫ |
| | | | | ಇಂಡುವಾಳು | ೫ | ೧೪ | ೧೦ | ೨೯ |
| | | | ಮಂಡ್ಯ | ಕಮ್ಮನಾಯಕನಹಳ್ಳಿ | ೧ | ೧ | ೧ | ೩ |
| | | | | ಕಾವೇರಿನಗರ | ೧ | ೨ | ೧ | ೪ |
| | | | | ಗುರುಮಠಶೆಡ್ | ೧ | ೧ | ೧ | ೩ |
| | | | | ಹಾಲಳ್ಳಿಕೆರೆ | ೨ | ೩ | ೨ | ೭ |
| | | | | ಕುವೆಂಪುನಗರ | ೩ | ೩ | ೭ | ೧೩ |
| | | | | ಮರಿಗೌಡ ಲೇಔಟ್ | ೧ | ೧ | ೧ | ೩ |
| | ನಾಗಮಂಗಲ | ಬಿಂಡಿಗನವಿಲೆ | | ಮಂಗರವಳ್ಳಿ | ೧ | ೧ | ೩ | ೫ |
| | | ಹರದನಹಳ್ಳಿ | | ತೊಳಸಿಕೊಂಬರಿ | ೧೭ | ೩೯ | ೩೦ | ೮೬ |
| | | ಚಾಮರನಹಳ್ಳಿ | | ಮಾರ್ಗನಹಳ್ಳಿ | ೧ | ೨ | ೩ | ೬ |
| | | ಕತ್ರಿಗುಪ್ಪೆ | | ಕತ್ರಿಗುಪ್ಪೆ | ೩ | ೭ | ೯ | ೧೯ |
| | | ಲಾಲನಕೆರೆ | | ತುರುಬನಹಳ್ಳಿ | ೧ | ೧ | ೨ | ೪ |
| | ಎಸ್.ಆರ್.ಪಟ್ಟಣ | ಕಿರಂಗೂರು | | ಬಾಬುರಾಯನಕೊಪ್ಪಲು | ೧೦ | ೨೧ | ೧೮ | ೪೯ |

| I | II | III | IV | V | VI | VII | VIII | IX |
|---|---|---|---|---|---|---|---|---|
| ಮೈಸೂರು | | | | | ೧೪೩ | ೧೫೬ | ೧೭೫ | ೩೯೯ |
| | ಹುಣಸೂರು | ಬನ್ನಿಕುಪ್ಪೆ | | ಕುಪ್ಪೆ, ಬಾಪೂಜಿ ಕಾಲೋನಿ | ೧೬ | ೪೦ | ೨೭ | ೮೩ |
| | | ಮರದೂರು | | ಶ್ಯಾನಭೋಗನಹಳ್ಳಿ | ೨೧ | ೪೪ | ೩೩ | ೯೮ |
| | ಮೈಸೂರು | ನಾಗನಹಳ್ಳಿ | | ಏಕಲವ್ಯನಗರ | ೭೭ | ೧೫೧ | ೧೨೬ | ೩೫೪ |
| | | ಗುಂಗ್ರಾಲ್ ಛತ್ರ | | ಯಾಚೇಗೌಡನಹಳ್ಳಿ | ೨೪ | ೭೩ | ೫೮ | ೧೫೫ |
| | | | ಮೈಸೂರು | ಮೈಸೂರು | ೫ | ೧೩ | ೯ | ೨೬ |
| ರಾಮನಗರ | | | | | ೬೮ | ೧೫೬ | ೧೭೫ | ೩೯೯ |
| | ರಾಮನಗರ | ಬನ್ನಿಕುಪ್ಪೆ | | ಬನ್ನಿಕುಪ್ಪೆ | ೨೬ | ೭೫ | ೮೨ | ೧೮೪ |
| | | | ರಾಮನಗರ | ರಾಮನಗರ, ಐಜೂರುಗುಡ್ಡೆ | ೪೧ | ೮೧ | ೯೩ | ೨೧೫ |
| ಶಿವಮೊಗ್ಗ | | | | | ೨೫೪ | ೫೨೧ | ೪೮೬ | ೧೨೬೧ |
| | ಭದ್ರಾವತಿ | ಆನವೇರಿ | | ಆನವೇರಿ | ೯ | ೧೭ | ೨೨ | ೪೮ |
| | | ದೇವರ ನರಸಿಪುರ | | ದೇವರ ನರಸಿಪುರ | ೯ | ೨೨ | ೧೫ | ೪೬ |

| I | II | III | IV | V | VI | VII | VIII | IX |
|---|---|---|---|---|---|---|---|---|
| | | ಹೊಳೆಹೊನ್ನೂರು | | ಹೊಳೆಹೊನ್ನೂರು | ೨೧ | ೪೫ | ೪೦ | ೧೦೬ |
| | | ಹೊಸಬಳ್ಳಾಪುರ | | ಹೊಸಬಳ್ಳಾಪುರ | ೭ | ೧೭ | ೧೫ | ೩೯ |
| | | ಕಲ್ಲಾಜನಹಳ್ಳಿ | | ಕಲ್ಲಾಜನಹಳ್ಳಿ | ೧೬ | ೩೨ | ೩೦ | ೭೮ |
| | | ಮಾವಿನಕೆರೆ | | ಮಾವಿನಕೆರೆ | ೬ | ೧೫ | ೧೨ | ೩೩ |
| | | ವೀರಭದ್ರ ಕಾಲೋನಿ | | ವೀರಭದ್ರ ಕಾಲೋನಿ | ೮ | ೧೬ | ೧೬ | ೪೦ |
| | ಶಿಕಾರಿಪುರ | ಬೇಗೂರು | | ಮಾರಡಿ ತಾಂಡ | ೧೦ | ೧೯ | ೧೮ | ೪೭ |
| | | ಮುದ್ದನಹಳ್ಳಿ | | ಮುದ್ದನಹಳ್ಳಿ | ೨೫ | ೬೬ | ೫೨ | ೧೪೩ |
| | | | | ಕೆಂಗಟ್ಟೆ | ೧೩೫ | ೨೬೧ | ೨೫೫ | ೬೫೧ |
| | ಸೊರಬ | ಚಂದ್ರಗುತ್ತಿ | | ಬೆನ್ನೂರು | ೮ | ೧೧ | ೧೧ | ೩೦ |
| ತುಮಕೂರು | | | | | ೩೬೨ | ೭೭೦ | ೬೮೯ | ೧೮೨೧ |
| | ಗುಬ್ಬಿ | ಅಡಗೂರು | | ಹೊಸಪಾಳ್ಯ | ೧೧ | ೨೧ | ೨೨ | ೫೪ |
| | | ಅಗಲವಾಡಿ | | ಚಿಕ್ಕರಾಂಪುರ | ೮ | ೨೧ | ೧೨ | ೪೧ |
| | | | | ಶಿವರಾಂಪುರ | ೯ | ೧೮ | ೧೭ | ೪೪ |

| I | II | III | IV | V | VI | VII | VIII | IX |
|---|---|---|---|---|---|---|---|---|
| | | ಚೆಲೂರು | | ಸಾತೇಹಳ್ಳಿ | ೨ | ೩ | ೫ | ೧೦ |
| | | ಹೊಸಕೆರೆ | | ಹೊಸಕೆರೆ | ೧೨ | ೨೨ | ೨೧ | ೫೫ |
| | | ಕೊಪ್ಪ | | ಬಿ. ಮಲ್ಲೇನಹಳ್ಳಿ | ೪ | ೧೮ | ೯ | ೩೧ |
| | | | | ಅಲ್ಲೇನಹಳ್ಳಿ | ೨೮ | ೬೩ | ೫೮ | ೧೪೯ |
| | | ಮಾರಶೆಟ್ಟಿಹಳ್ಳಿ | | ಯಲ್ಲಾಪುರ | ೮ | ೧೬ | ೧೬ | ೪೦ |
| | | | ಗುಬ್ಬಿ | ಗುಬ್ಬಿ | ೪ | ೨೦ | ೨೧ | ೪೫ |
| | ಕುಣಿಗಲ್ | ಬಾಗೇನಹಳ್ಳಿ | | ಬಾಗೇನಹಳ್ಳಿ | ೪ | ೮ | ೧೨ | ೨೪ |
| | | ಚೆಡನಕುಪ್ಪೆ | | ಹಕ್ಕಿ ಮಾರಿಪಾಳ್ಯ | ೪ | ೭ | ೪ | ೧೫ |
| | | ಜಿನ್ನಾಗರ | | ಶೆಟ್ಟಿಪುರ | ೨ | ೧ | ೨ | ೫ |
| | | ಹೊಸದುರ್ಗ | | ಡಿ. ಹೊಸಹಳ್ಳಿ | ೧ | ೨ | ೧ | ೪ |
| | | ಕೆ. ಬ್ಯಾಡರಹಳ್ಳಿ | | ಮದ್ದ ಹನುಮನಪಾಳ್ಯ | ೧ | ೨ | ೨ | ೫ |
| | | ಕೊತ್ತಗೆರೆ | | ಕೊತ್ತಗೇರೆ | ೧೯ | ೩೬ | ೩೪ | ೮೯ |

| I | II | III | IV | V | VI | VII | VIII | IX |
|---|---|---|---|---|---|---|---|---|
| | | ಮಡಿಕೆಹಳ್ಳಿ | | ಕಳಸಿಪಾಳ್ಯ | ೨೬ | ೬೧ | ೫೦ | ೧೩೭ |
| | | | | ಮಡಿಕೆಹಳ್ಳಿ | ೧ | ೩ | ೧ | ೫ |
| | | ಶಿಗೆಹಳ್ಳಿ | | ಎರಗಹಳ್ಳಿ | ೩ | ೭ | ೪ | ೧೪ |
| | | ಯಡಿಯೂರು | | ಸಿಂಗಟಳ್ಳಿ | ೪ | ೧೦ | ೫ | ೧೯ |
| | | | ಕುಕ್ಕೇರೆ | ಕುವೆಂಪುನಗರ | ೩ | ೬ | ೪ | ೧೩ |
| | | | ಕುಣಿಗಲ್ | ಕೆ.ಆರ್.ಎಸ್. ಅಗ್ರಹಾರ | ೫ | ೯ | ೮ | ೨೨ |
| | ಮೂಡಿಗೆರೆ | ಬಿಲಸಾ | | ಬಿಲಸ | ೪ | ೭ | ೫ | ೧೬ |
| | | ಗರಣಿ | | ಹೊಸಕೋಟೆ | ೭ | ೧೫ | ೭ | ೨೯ |
| | ಪಾವಗಡ | ನಾಯಗುಂಟೆ | | ಜೊಟ್ಟಿ ಬೊಮ್ಮನಹಳ್ಳಿ | ೨೭ | ೫೭ | ೪೫ | ೧೨೯ |
| | ಶಿರಾ | ಬರಗೂರು | | ಬರಗೂರು | ೭ | ೧೪ | ೧೨ | ೩೩ |
| | | ದೊಡ್ಡಅಗ್ರಹಾರ | | ಕೆಂಚಗನಹಳ್ಳಿ | ೭ | ೧೨ | ೧೩ | ೩೨ |
| | | | | ಸಿ.ಬಿ. ಅಗ್ರಹಾರ | ೧೭ | ೩೧ | ೩೩ | ೮೧ |
| | | | | ಹಂದಿಮುಲುಕು | ೧೧ | ೨೦ | ೧೩ | ೪೪ |

| I | II | III | IV | V | VI | VII | VIII | IX |
|---|---|---|---|---|---|---|---|---|
| | | ತಡಕಲೂರು | | ಟಿ.ಎಂ.ಹಳ್ಳಿ | ೦ | ೦ | ೦ | ೩ |
| | | ಶಿರಾ | | ಪಟ್ಟನಾಯಕನಹಳ್ಳಿ | ೦ | ೨ | ೦ | ೪ |
| | | ತಾವರೆಕೆರೆ | | ಉಜ್ಜಿನಕುಂಟೆ | ೧೮ | ೩೪ | ೩೫ | ೮೭ |
| | | ಯೆರಗುಂಟೆ | | ಮುಗೊಡು | ೧೧ | ೧೮ | ೨೨ | ೫೧ |
| | | | ಶಿರಾ | ಮುಷ್ಟಿಗರಹಳ್ಳಿ | ೧೭ | ೩೬ | ೩೩ | ೮೬ |
| | | | | ನಾಡೂರು | ೦ | ೨ | ೦ | ೪ |
| | | | | ಶಿರಾ | ೨ | ೩ | ೪ | ೯ |
| | ತುರುವಕೆರೆ | ಅಮ್ಮಸಂದ್ರ | | ಅಪ್ಪಸಂದ್ರ | ೨೦ | ೩೮ | ೩೪ | ೯೨ |
| | | ಗುಂಗ್ರಮೆಳೆ | | ಗುಂಗರಮೆಳೆ | ೩ | ೮ | ೩ | ೧೪ |
| | | ಕನತ್ತೂರು | | ಲಕ್ಕಿ ರಾಮನಪಾಳ್ಯ | ೩೫ | ೭೦ | ೭೦ | ೧೭೫ |
| | | ಮಾದಹಳ್ಳಿ | | ಮಾದಲಿಪಾಳ್ಯ | ೧೯ | ೩೬ | ೩೯ | ೯೪ |
| | | ಶೆಟ್ಟಿಗೊಂಡನಹಳ್ಳಿ | | ಶೆಟ್ಟಿಗೊಂಡನಹಳ್ಳಿ | ೫ | ೧೨ | ೧೦ | ೨೭ |
| | | | | ಒಟ್ಟು | ೧೮೫೨ | ೪೧೪೩ | ೩೭೮೦ | ೭೯೨೩ |

## ವಕ್ತೃಗಳ ಸೂಚಿ

| ಹೆಸರು | ವಯಸ್ಸು | ವೃತ್ತಿ | ಗ್ರಾಮ |
|---|---|---|---|
| I | II | III | IV |
| ಅಪ್ಪರಾಯ ಶಾಂತಪ್ಪ ದಶವಂತ | ೨೬ | ಕೂಲಿ | ವಿಭೂತಿಹಳ್ಳಿ,, ಬಿಜಾಪುರ |
| ಅಕ್ಕಿನಪಲ್ಲಿ ವೆಂಕಟೇಶ | ೪೫ | ಕಲಾವಿದ | ಕೈವಾರ, ಕೋಲಾರ |
| ಅಚ್ಚಮ್ಮ | ೭೦ | ಕಲಾವಿದೆ | ಮಾಣಿಕನಹಳ್ಳಿ, ಮಂಡ್ಯ |
| ಆಂಜನಪ್ಪ | ೭೫ | ಕಲಾವಿದ | ದೇವಲಾಪುರ, ಬಳ್ಳಾರಿ |
| ಆಂಜನಯ್ಯ | ೫೪ | ಕೂಲಿ | ಜರಿಕಟ್ಟೆ, ದಾವಣಗೆರೆ |
| ಈರಪ್ಪ | ೭೦ | ಕಲಾವಿದ | ಮಾಣಿಕ್ಯನ ಹಳ್ಳಿ, ಮಂಡ್ಯ |
| ಕಾಮಣ್ಣದೇವಪ್ಪ ದಶವಂತ್ | ೪೫ | ಗ್ರಾ.ಪಂ.ಸದಸ್ಯರು | ಚವಡಿಹಾಳ, ಬಿಜಾಪುರ |
| ಕಾಕೋಳು ರಾಮಯ್ಯ | ೬೫ | ಕಲಾವಿದ, ಸಾಹಿತಿ | ಕೋರಮಂಗಲ, ಬೆಂಗಳೂರು |
| ಕೃಷ್ಣಯ್ಯ | ೬೫ | ವ್ಯವಸಾಯ | ಶ್ಯಾನುಬೋಗನಹಳ್ಳಿ, ಮೈಸೂರು |
| ಕೃಷ್ಣಪ್ಪದಾಸ್ | ೭೫ | ಕಲಾವಿದ | ಮಾಳೆ ಕೊಪ್ಪಲು, ಹಾಸನ |
| ಕಿಟ್ಟಯ್ಯ | ೬೫ | ಭಿಕ್ಷೆ,ಬಯಲಾಟ | ಕಳಸೀಪಾಳ್ಯ, ತುಮಕೂರು |
| ಗಂಗಮ್ಮ | ೫೮ | ಕಲಾವಿದೆ | ಮಡಬ, ಹಾಸನ |
| ಗಂಗಾಧರಪ್ಪ | ೪೮ | ಕೂಲಿ | ಜರಿಕಟ್ಟೆ, ದಾವಣಗೆರೆ |
| ಗಂಗಮ್ಮ | ೫೫ | ವ್ಯಾಪಾರ | ಕುಪ್ಪೆ, ಮೈಸೂರು |
| ಗಂಗಾಧರಪ್ಪ | ೬೦ | ನಿವೃತ್ತನೌಕರ | ತಿಮ್ಮನಹಳ್ಳಿ, ತುಮಕೂರು |
| ಗೌರಮ್ಮ | ೭೦ | ಮನೆಕೆಲಸ | ಮಾಣಿಕ್ಯನಹಳ್ಳಿ, ಮಂಡ್ಯ |

| I | II | III | IV |
|---|---|---|---|
| ಗುರುಭಕ್ತ ರಂಗಪ್ಪ | ೫೫ | ಕಲಾವಿದ | ಉಜ್ಜನಕುಂಟೆ, ತುಮಕೂರು |
| ಚನ್ನಪ್ಪ | ೬೫ | ಕಲಾವಿದ | ಆನಂದೂರುಕೊಪ್ಪಲು, ಮೈಸೂರು |
| ಚಿಕ್ಕಮುತ್ತಯ್ಯ | ೭೩ | ವ್ಯವಸಾಯ | ವಡ್ಡರಹಳ್ಳಿ, ಮಂಡ್ಯ |
| ಚಿನ್ನಾಂಜನಪ್ಪ | ೫೨ | ವ್ಯಾಪಾರ | ಸಮಾಜಸೇವೆ, ಹಿರಿಯೂರು |
| ಚಿಮ್ಮನಹಳ್ಳಿ ವೆಂಕಟಪ್ಪ | ೭೮ | ಕಲಾವಿದ | ನೆಲಮನೆ, ಮಂಡ್ಯ |
| ಜಯಸುಂದ್ರಮ್ಮ | ೫೬ | ಕೂಲಿ | ಮಳಲಿ, ಮೈಸೂರು |
| ತುಕಾರಾಂ | ೭೧ | ನಿವೃತ್ತ ನೌಕರ | ಬಾದಾಮಿ, ಬಾಗಲಕೋಟೆ |
| ತಿಪ್ಪಯ್ಯ | ೬೫ | ಕಲಾವಿದ | ಗಬ್ಬೂರು, ರಾಯಚೂರು |
| ತಿಪ್ಪಣ್ಣ | ೬೫ | ವ್ಯವಸಾಯ | ಕೆಂಗಟ್ಟೆ, ಶಿವಮೊಗ್ಗ |
| ದೊಡ್ಡಮಾರಪ್ಪ ಮೆಟ್ರಿ | ೭೦ | ಭಿಕ್ಷೆ | ಮೆಟ್ರಿ, ಬಳ್ಳಾರಿ |
| ದುರ್ಗಪ್ಪ | ೫೦ | ಕೂಲಿ | ಜರಿಕಟ್ಟೆ, ದಾವಣಗೆರೆ |
| ನಾರಾಯಣಪ್ಪ | ೫೪ | ವ್ಯವಸಾಯ | ಲಕ್ಕಿರಾಮನಪಾಳ್ಯ, ತುಮಕೂರು |
| ನಿತ್ಯಾನಂದಮೂರ್ತಿ | ೫೯ | ಕಲಾವಿದ | ಉಜ್ಜನಕುಂಟೆ, ತುಮಕೂರು |
| ಪುಟ್ಟರಾಮಮ್ಮ | ೭೬ | ಮನೆಕೆಲಸ | ಕುಪ್ಪೆ, ಮೈಸೂರು |
| ಭಕ್ತರಳ್ಳಿ ಆಂಜನಪ್ಪ | ೭೦ | ವ್ಯವಸಾಯ | ಭಕ್ತರ ಹಳ್ಳಿ, ಕೋಲಾರ |
| ಬಂಗಾರಪ್ಪ ದಶವಂತ | ೬೦ | ಗ್ರಾಮಸಹಾಯಕ | ಬಬಲಾದಿ, ಬಿಜಾಪುರ |
| ಬಂಗಾರಮ್ಮ | ೬೨ | ಕಲಾವಿದೆ | ಬಂಗಾರಕ್ಕನಗುಡ್ಡ, ದಾವಣಗೆರೆ |
| ಭದ್ರಮ್ಮ | ೭೦ | ಮನೆಕೆಲಸ | ನಾಯಸಿಂಗನಹಳ್ಳಿ, ಮಂಡ್ಯ |
| ಮುತ್ತುರಾಯಪ್ಪ | ೮೦ | ಕಲಾವಿದ | ಹೊಸಹಳ್ಳಿ, ಮಂಡ್ಯ |

| I | II | III | IV |
|---|---|---|---|
| ಮರಿಯಪ್ಪ | ೭೦ | ಕಲಾವಿದ | ಯಾಚೇಗೌಡನಹಳ್ಳಿ, ಮೈಸೂರು |
| ಎಂ. ಮುನಿಯಪ್ಪ | ೫೮ | ವ್ಯವಸಾಯ | ಕಾಳೇನಹಳ್ಳಿ, ಬೆಂಗಳೂರು |
| ಯಲ್ಲಮ್ಮ | ೫೨ | ಕಲಾವಿದೆ | ಶ್ಯಾನುಭೋಗನಹಳ್ಳಿ, ಮೈಸೂರು |
| ಯಲ್ಲಪ್ಪ | ೬೨ | ವ್ಯವಸಾಯ | ತಿಮ್ಮನಹಳ್ಳಿ, ಚಿಕ್ಕಮಗಳೂರು |
| ಯಲ್ಲಮ್ಮ | ೮೦ | ಕಲಾವಿದೆ | ಕೆಂಗಟ್ಟೆ, ಶಿವಮೊಗ್ಗ |
| ರಂಗಪ್ಪ | ೮೫ | ಕಲಾವಿದರು | ಸಿದ್ದಮ್ಮನಹಳ್ಳಿ, ದಾವಣಗೆರೆ |
| ರಾಮಸ್ವಾಮಿ | ೫೮ | ಕಲಾವಿದ | ಲಕ್ಕಿರಾಮನಪಾಳ್ಯ, ತುಮಕೂರು |
| ರಾಮಣ್ಣ | ೫೪ | ಕಲಾವಿದ | ಮಾಣಿಕನಹಳ್ಳಿ, ಮಂಡ್ಯ |
| ರಾಮಕೃಷ್ಣ | ೬೧ | ಕಲಾವಿದ | ನಾಯಸಿಂಗನಹಳ್ಳಿ, ಮಂಡ್ಯ |
| ರೇವಣ್ಣ | ೬೫ | ವ್ಯವಸಾಯ | ಕುಪ್ಪೆ, ಮೈಸೂರು |
| ರೇಣುಕ ಚಿಮ್ಮಲ್ | ೩೩ | ಗ್ರಾ.ಪಂ. ಅಧ್ಯಕ್ಷರು | ಹಂಸನೂರು, ಬಾಗಲಕೋಟೆ |
| ರಾಚಮ್ಮ | ೭೦ | ಕೂಲಿ | ಶ್ಯಾನುಬೋಗನಹಳ್ಳಿ, ಮೈಸೂರು |
| ರಾಜು .ಕೆ | ೩೮ | ಕೂಲಿ | ಏಕಲವ್ಯ ನಗರ, ಮೈಸೂರು |
| ಲಲಿತದೇವಿ | ೪೩ | ಕಲಾವಿದೆ | ಚವಡಿಹಾಳ, ಬಿಜಾಪುರ |
| ಲಕ್ಷ್ಮಯ್ಯ ಡಿ.ಎಂ. | ೬೫ | ಕಲಾವಿದ | ಮಂಡ್ಯ ನಗರ, ಮಂಡ್ಯ |
| ಲಕ್ಷ್ಮಣಮೂರ್ತಿ ವಿ. | ೭೦ | ಕಲಾವಿದ | ಕುಪ್ಪೆ, ಮೈಸೂರು |
| ವೆಂಕಟಸ್ವಾಮಪ್ಪ | ೫೮ | ಕಲಾವಿದ | ಯಾಚೇಗೌಡನಹಳ್ಳಿ, ಮೈಸೂರು |

| I | II | III | IV |
|---|---|---|---|
| ವೆಂಕಟಪ್ಪ | ೫೮ | ಕಲಾವಿದ | ಯಾಚೇಗೌಡನಹಳ್ಳಿ, ಮೈಸೂರು |
| ವೆಂಕಟೇಶ | ೩೪ | ಗ್ರಾಪಂ. ಅಧ್ಯಕ್ಷರು | ಜರಿಕಟ್ಟೆ, ದಾವಣಗೆರೆ |
| ವೆಂಕಮ್ಮ | ೫೪ | ಕೂಲಿ, | ಯಕ್ಲಾಸಪುರ, ರಾಯಚೂರು |
| ವೆಂಕಟೇಶ್ | ೪೫ | ವ್ಯಾಪಾರ | ಕೆಂಗಟ್ಟೆ, ಶಿವಮೊಗ್ಗ |
| ವೆಂಕಟಾಚಲ | ೪೫ | ಕಲಾವಿದ | ಲಕ್ಕಿರಾಮಾನಪಾಳ್ಯ, ತುಮಕೂರು |
| ಶಾಂತಾಬಾಯಿ | ೬೫ | ಕಲಾವಿದೆ | ಚವಡಿಹಾಳ, ಬಿಜಾಪುರ |
| ಶೋಭಾ ಶಾಂತಾಬಾಯಿ ದಶವಂತ | ೨೬ | ನಿರುದ್ಯೋಗಿ | ವಿಭೂತಿಹಳ್ಳಿ, ಬಿಜಾಪುರ |
| ಶೇಖರಪ್ಪ | ೫೮ | ವ್ಯವಸಾಯ | ಕೆಂಗಟ್ಟೆ, ಶಿವಮೊಗ್ಗ |
| ಶ್ರೀನಿವಾಸಯ್ಯ .ಬಿ.ಜಿ | ೮೪ | ನಿವೃತ್ತ ನೌಕರ | ಬನ್ನಿಕುಪ್ಪೆ, ಬೆಂಗಳೂರು |
| ಸಣ್ಣಬಾಬಯ್ಯ | ೫೦ | ಕಲಾವಿದರು | ದೇವಿನಗರ, ರಾಯಚೂರು |
| ಸಣ್ಣವೆಂಕಟೇಶ | ೪೫ | ಗ್ರಾ.ಪಂ.ಸದಸ್ಯರು | ಯಾಪಲದಿನ್ನೆ, ರಾಯಚೂರು |
| ಸಾವಿತ್ರಮ್ಮ | ೪೫ | ದಾರಸೂಜಿ ವ್ಯಾಪಾರ | ಕುಡತಿನಿ, ಬಳ್ಳಾರಿ |
| ಸುಬ್ಬಯ್ಯ | ೪೮ | ಕಲಾವಿದ | ಆಂದೋಲನ ಸರ್ಕಲ್, ಮೈಸೂರು |
| ಹನುಮಂತಪ್ಪ | ೭೫ | ಕೂಲಿ | ತುಳಸಿಗಿರಿ, ಬಾಗಲಕೋಟೆ |
| ಹನುಮಂತಪ್ಪ | ೬೦ | ವ್ಯವಸಾಯ | ದೇವಲಾಪುರ, ಬಳ್ಳಾರಿ |
| ಹುಲಿಗಪ್ಪ | ೪೮ | ಕಲಾವಿದ | ಗಬ್ಬೂರು, ರಾಯಚೂರು |
| ಹನುಮಂತಪ್ಪ .ಬಿ | ೫೨ | ಕಲಾವಿದ | ಮುದ್ದನಹಳ್ಳಿ, ಶಿವಮೊಗ್ಗ |
| ಹುಲಿಗಮ್ಮ | ೬೦ | ಕಲಾವಿದೆ | ಕೆಂಗಟ್ಟೆ, ಶಿವಮೊಗ್ಗ |

## ಸಮೀಕ್ಷೆದಾರರ ಸೂಚಿ

| ಹೆಸರು | ತಂದೆ : ಗಂಡನ ಹೆಸರು | ವಯಸ್ಸು | ಉದ್ಯೋಗ | ಗ್ರಾಮ |
|---|---|---|---|---|
| **ಚಿಕ್ಕಮಗಳೂರು** | | | | |
| ಅಣ್ಣಯ್ಯ | ವೆಂಕಟರಾಮು | ೨೪ | ವ್ಯವಸಾಯ | ಚಿಕ್ಕಸಿಂಗನಹಳ್ಳಿ |
| ಗೋವಿಂದರಾಜು | ಮಂಜಪ್ಪ | ೪೨ | ವ್ಯವಸಾಯ | ಜಡಕನಕಟ್ಟೆ |
| ಯಲ್ಲಪ್ಪ ಟಿ.ಎಲ್ | ಲಕ್ಷ್ಮಯ್ಯ | ೬೨ | ವ್ಯವಸಾಯ | ಬೆಮ್ಮನಹಳ್ಳಿ |
| **ತುಮಕೂರು** | | | | |
| ಕುಮಾರ್ | ಗೋವಿಂದಯ್ಯ | ೨೪ | ಕೂಲಿ | ತುರುವಕೆರೆ ತಾಲ್ಲೂಕು |
| ಗಂಗಾಮಣಿ | ಪುಟ್ಟರೇವಣ್ಣ | ೩೨ | ಗೃಹಿಣಿ | ಲಕ್ಕಿರಾಮನಪಾಳ್ಯ |
| ನರಸಿಂಹಯ್ಯ | ಮುನಿ ವೆಂಕಟಪ್ಪ | ೪೫ | ಸರ್ಕಾರಿ ನೌಕರ | ಬೋರಲಿಂಗನ ಪಾಳ್ಯ, ಕುಣಿಗಲ್ |
| ನೆಟ್ಟಿಕಲ್ಲಪ್ಪ ಬಿ.ಹೆಚ್ | ಹನುಮಂತಯ್ಯ | ೩೨ | ವಕೀಲರು | ಬುಕ್ಕಪಟ್ಟಣ, ಕೊರಟಗೆರೆ ತಾ |
| ಭಾಸ್ಕರ್ | ಬಸವಯ್ಯ | ೩೫ | ಕೂಲಿ | ಕೊತ್ತಗೆರೆ, ಕುಣಿಗಲ್ ತಾ. |
| ಮಂಜಣ್ಣ | ಸುಬ್ಬಯ್ಯ | ೪೭ | ವ್ಯಾಪಾರ | ಬಡವನಹಳ್ಳಿ, ಮಧುಗಿರಿ ತಾ. |
| ವೆಂಕಟೇಶ್ ಕೆ.ವಿ. | ವೆಂಕಟಪ್ಪ | ೫೦ | ವ್ಯಾಪಾರ | ಕುವೆಂಪುನಗರ, ಕುಣಿಗಲ್ |
| **ದಾವಣಗೆರೆ** | | | | |
| ಕೃಷ್ಣಪ್ಪ .ಆರ್ | ರೆಡ್ಡಿರಂಗಪ್ಪ | ೫೫ | ಸರ್ಕಾರಿ ನೌಕರ | ಸಿದ್ದಮ್ಮನಹಳ್ಳಿ, ಜಗಳೂರು |
| ಗುರುಸ್ವಾಮಿ | ಸಣ್ಣಗುರಪ್ಪ | ೩೫ | ವ್ಯವಸಾಯ | ಸಿದ್ದಮ್ಮನಹಳ್ಳಿ, ಜಗಳೂರು |
| ರಂಗಪ್ಪ .ಎಂ | ಮಾರಪ್ಪ | ೨೫ | ವ್ಯಾಪಾರ | ಬಂಗಾರಕ್ಕನಗುಡ್ಡ, ಜಗಳೂರು |
| ಲಕ್ಷ್ಮಣ | ರಾಮಪ್ಪ | ೨೩ | ವ್ಯಾಪಾರ | ಬಾತಿಗ್ರಾಮ, ದಾವಣಗೆರೆ ತಾ. |
| ಹುಲಿಯಪ್ಪ .ಎಂ | ಕಸ್ತೂರಪ್ಪ | ೩೦ | ಪ್ರೇಂವರ್ಕ್ | ಕೈದಾಳ, ದಾವಣಗೆರೆ ತಾ. |

| ಹೆಸರು | ತಂದೆ : ಗಂಡನ ಹೆಸರು | ವಯಸ್ಸು | ಉದ್ಯೋಗ | ಗ್ರಾಮ |
|---|---|---|---|---|
| **ದೊಡ್ಡಬಳ್ಳಾಪುರ** | | | | |
| ಆಂಜನಪ್ಪ ಭಕ್ತರಹಳ್ಳಿ | | ೬೫ | ಕಲಾವಿದರು | ಹೊಸಕೋಟೆ, ಬೆಂಗಳೂರು |
| ರಾಘವಯ್ಯ | | ೫೩ | ಕಲಾವಿದರು | ಪುರಸಭೆ, ದೊಡ್ಡಬಳ್ಳಾಪುರ |
| ಶ್ರೀಧರ ಕೆ. | ಕೋದಂಡರಾಮು | ೨೮ | ಕಾರ್ಮಿಕ | ಯಲಹಂಕ, ಬೆಂಗಳೂರು |
| **ಬೆಂಗಳೂರು** | | | | |
| ಕೆಂಪರೇವಣ್ಣ | ಸಿಂಗಪ್ಪ | ೪೭ | ಕೂಲಿ | ಶಿವಪುರ, ಬೆಂಗಳೂರು |
| ಗವಿರಂಗ | ಮುನಿಯಪ್ಪ | ೪೦ | ಟೈಲರ್ | ಕಮಲಾನಗರ, ಬೆಂಗಳೂರು |
| ಗುರುಶಾಂತ | ವೆಂಕಟರಮಣಯ್ಯ | ೪೦ | ಕೂಲಿ | ಕಮಲಾನಗರ ಬೆಂಗಳೂರು |
| ಮಂಜುನಾಥ | ನಾಗರಾಜ | ೩೦ | ಕಾರ್ಮಿಕ | ಹೊಸಕೆರೆಹಳ್ಳಿ, ಬೆಂಗಳೂರು |
| ರಂಗನಾಥ | ಬಾಲಹನುಮಯ್ಯ | ೩೨ | ವಕೀಲರು | ಐಜೂರುಗುಡ್ಡ, ರಾಮನಗರ |
| ರಾಜೇಶ್ | ಮುನಿಯಪ್ಪ | ೩೪ | ವ್ಯಾಪಾರ | ಬನ್ನಿಕುಪ್ಪೆ, ರಾಮನಗರ ತಾ |
| ವೆಂಕಟೇಶ್ | | ೪೫ | ಸ್ಟುಡಿಯೋ | ಮಾಗಡಿ ಬೆಂಗಳೂರು |
| ಶ್ರೀನಿವಾಸ್ | ಮುನಿಕೃಷ್ಣಪ್ಪ | ೩೭ | ಕೂಲಿ | ಕಾರಲಾಪುರ, ಬೆಂಗಳೂರು |
| ಕೆ. ಶ್ರೀನಿವಾಸ | ಕೊಂಡಪ್ಪ | ೩೮ | ಬಳೆವ್ಯಾಪಾರಿ | ರಾಮನಗರ |
| ಶ್ರೀನಿವಾಸ್‌ಮೂರ್ತಿ ಕೆ.ಎಂ. | ಮುನಿಯಪ್ಪ | ೨೮ | ಅಂಗಾಮಿನೌಕರ | ಕಾಳೇನಹಳ್ಳಿ, ಬೆಂಗಳೂರು |
| ಸುರೇಶಕುಮಾರ | ಮುನಿರಾಜಪ್ಪ | ೨೯ | ಅಡುಗೆ ಕೆಲಸ | ಕಾಳೇನಹಳ್ಳಿ, ಬೆಂಗಳೂರು |
| ಸುರೇಶ ಬಿ.ವಿ. | ವೆಂಕಟೇಶ | ೩೨ | ವ್ಯಾಪಾರ | ಬಸವನಗುಡಿ, ಬೆಂಗಳೂರು |

| ಹೆಸರು | ತಂದೆ : ಗಂಡನ ಹೆಸರು | ವಯಸ್ಸು | ಉದ್ಯೋಗ | ಗ್ರಾಮ |
|---|---|---|---|---|
| **ಮಂಡ್ಯ** | | | | |
| ಗೋವಿಂದರಾಜು | ಲಕ್ಷ್ಮಯ್ಯ | ೩೮ | ಬಳೆವ್ಯಾಪಾರಿ | ಗುತ್ತಲು, ಮಂಡ್ಯ |
| ನಟರಾಜ | ಮುನಿಸ್ವಾಮಿ | ೪೦ | ವ್ಯಾಪಾರಿ | ಹಿಂಡವಾಳು, ಮಂಡ್ಯ ತಾ |
| ನಾಗೇಶ | ಕೃಷ್ಣಪ್ಪ | ೨೦ | ಕಾರ್ಮಿಕ | ನಾಯಸಿಂಗನಹಳ್ಳಿ |
| ಮಂಜು | ಬಿ.ಎ. ಪರಮೇಶ್ | ೩೨ | ಪೋಲೀಸ್ | ಹೊಸಹಳ್ಳಿ, ಮಂಡ್ಯ |
| ರೇವಣ್ಣ | ಗೋಪಾಲಯ್ಯ | ೨೫ | ವಿದ್ಯಾರ್ಥಿ | ಮಾಣಿಕ್ಯನಹಳ್ಳಿ |
| ಸೋಮಶೇಖರ್ | ರಾಮಚಂದ್ರ | ೨೧ | ವ್ಯವಸಾಯ | ಮಾಣಿಕ್ಯನಹಳ್ಳಿ |
| ರವಿ ಎಂ.ಆರ್ | ರಾಮದಾಸಯ್ಯ | ೨೨ | ಕೂಲಿ | ಮಾಣಿಕ್ಯನಹಳ್ಳಿ |
| **ಮೈಸೂರು** | | | | |
| ಕುಮಾರ .ವೈ | ಯೋಗಣ್ಣ | ೩೨ | ಕೂಲಿ | ಏಕಲವ್ಯನಗರ, ಮೈಸೂರು |
| ರಮೆಶ .ವಿ | ವೆಂಕಟರಮಣಯ್ಯ | ೩೨ | ಕಾರ್ಮಿಕ | ಯಾಚೇಗೌಡನಹಳ್ಳಿ, ಮೈ |
| ರಾಜು ಕೆ.ವಿ. | ವೆಂಕಟರಾಮಯ್ಯ | ೪೦ | ಕೂಲಿ | ಏಕಲವ್ಯನಗರ, ಮೈಸೂರು |
| ಲೋಕೇಶ .ವಿ | ವೆಂಕಟಪ್ಪ | ೩೬ | ಖಾಸಗಿ ನೌಕರ | ಯಾಚೇಗೌಡನಹಳ್ಳಿ, ಮೈ |
| ಸೂರಜ್ ಕೆ.ಎನ್ | ನಾಗರಾಜ ಕುಪ್ಪೆ | ೧೮ | ವಿದ್ಯಾರ್ಥಿ | ಹಿನಕಲ್, ಮೈಸೂರು. |
| **ಹಾಸನ** | | | | |
| ಅಶ್ವತ | ವೆಂಕಟೇಶ್ | ೧೯ | ವಿದ್ಯಾರ್ಥಿ | ಗುಳಸಿಂದ, ಚನ್ನರಾಯಪಟ್ಟಣ ತಾ |
| ಗುರುಮೂರ್ತಿ .ವಿ | ವೆಂಕಟಪ್ಪ | ೩೭ | ಶಿಕ್ಷಕರು | ಯಾಚೇಗೌಡನಹಳ್ಳಿ, ಮೈಸೂರು |
| ಪರಮೇಶ್ | ನಾರಾಯಣಪ್ಪ | ೪೨ | ವ್ಯವಸಾಯ | ತಿಮ್ಮಲಾಪುರ, ಚನ್ನರಾಯನಪಟ್ಟಣ ತಾ |

| ಹೆಸರು | ತಂದೆ : ಗಂಡನ ಹೆಸರು | ವಯಸ್ಸು | ಉದ್ಯೋಗ | ಗ್ರಾಮ |
| --- | --- | --- | --- | --- |
| ಪುಟ್ಟರೇವಣ್ಣ | ವೆಂಕಟೇಶ್ | ೪೦ | ಬಳೇವ್ಯಾಪಾರಿ | ಅರಸೀಕೆರೆ |
| ಮಂಜುನಾಥ | ಶ್ರೀನಿವಾಸ್ | ೪೫ | ಟೈಲರ್ | ಕೆ. ನಿಂಗೇನಹಳ್ಳಿ, ಚನ್ನರಾಯನಪಟ್ಟಣ |
| ಮಂಜುನಾಥ | ವೆಂಕಟಪ್ಪ | ೪೫ | ಟೈಲರ್ | ಮಡಬ, ಚನ್ನರಾಯನಪಟ್ಟಣ ತಾ |
| ವೆಂಕಟಾಚಲ | ವೆಂಕಟರಾಮಯ್ಯ | ೪೮ | ಶಿಕ್ಷಕರು | ತಿಮ್ಮಲಾಪುರ, ಚನ್ನರಾಯನಪಟ್ಟಣ |
| ಶ್ರೀರಾಮಯ್ಯ | ವೆಂಕಟರಾಮಯ್ಯ | ೬೦ | ನಿವೃತ್ತ ನೌಕರ | ಚನ್ನರಾಯನಪಟ್ಟಣ |
| ಶಿವಮೊಗ್ಗ | | | | |
| ಮೋಹನದಾಸ್ .ಆರ್ | ರಾಜಣ್ಣ | ೪೭ | ಸರ್ಕಾರಿ ನೌಕರ | ತೀರ್ಥಹಳ್ಳಿ, ಶಿವಮೊಗ್ಗ ಜಿಲ್ಲೆ |
| ಲಕ್ಷ್ಮಣ ಕೆ.ಹೆಚ್ | ಹನುಮಂತಪ್ಪ | ೩೫ | ಗ್ರಾ.ಪಂ. ಅಧ್ಯಕ್ಷರು | ಕೆಂಗಟ್ಟೆ |
| ವೆಂಕಟೇಶ್ | ವೆಂಕಟಪ್ಪ | ೩೭ | ವ್ಯಾಪಾರ | ಕೆಂಗಟ್ಟೆ |
| ಹನುಮಂತಪ್ಪ | ಶೇಖರಪ್ಪ | ೩೩ | ವ್ಯವಸಾಯ | ಕೆಂಗಟ್ಟೆ |
| ಸಂಗಪ್ಪ | ಭೀಮಪ್ಪ | ೫೦ | ವ್ಯಾಪಾರ | ಅಸೋಡಿ |
| ನಾಗರಾಜ ಬಿ.ವೈ. | ಯಲ್ಲಪ್ಪ | ೪೫ | ಬಳೆವ್ಯಾಪಾರ | ಹೊಸಬುಳ್ಳಾಪುರ |
| ವೆಂಕಟೇಶ | ವೆಂಕಟಪ್ಪ | ೩೫ | ಸರ್ಕಾರಿ ನೌಕರ | ವಿನಾಯಕನಗರ |

## ಪರಾಮರ್ಶನ ಸೂಚಿ


**ಕನ್ನಡ**

ಅಕ್ಕೂರಮಠ, ಷಣ್ಮುಖಯ್ಯ., *ಭಾರತೀಯ ಭಕ್ತಿ ಚಳುವಳಿ* (ಬೆಂಗಳೂರು: ಕನ್ನಡ ಸಾಹಿತ್ಯ ಪರಿಷತ್ತು, ೨೦೦೦)

ಆದ್ಯರಂಗಾಚಾರ (ಅನು), ಧರ್ಮಾನಂದ ಕೋಸಂಬಿ., *ಭಗವಾನ ಬುದ್ಧ* (ನವದೆಹಲಿ: ಕೇಂದ್ರ ಸಾಹಿತ್ಯ ಅಕಾಡೆಮಿ, ೧೯೯೮).

ಬಸವರಾಧ್ಯ, ಎನ್ (ಸಂ)., *ಸಂಕ್ಷಿಪ್ತ ಕನ್ನಡ ನಿಘಂಟು* (ಪರಿಷ್ಕೃತ) (ಬೆಂಗಳೂರು: ಕನ್ನಡ ಸಾಹಿತ್ಯ ಪರಿಷತ್,೨೦೦೧).

ಭಗವಾನ್(ಅನು),ಸ್ವಾಮಿಧರ್ಮತೀರ್ಥ., *ಹಿಂದೂ ಸಾಮ್ರಾಜ್ಯಶಾಹಿಯ ಇತಿಹಾಸ* (ಮೈಸೂರು: ಮಹಿಮ ಪ್ರಕಾಶನ, ೨೦೦೩).

ಭರಣಿ, ಸುಭಾಷ್., ಧರೆಗೆ ದೊಡ್ಡವರು (ಮೈಸೂರು: ದ್ರಾವಿಡ ಪಬ್ಲಿಕೇಷನ್ಸ್, ೨೦೦೫)

ಬೀಚನಳ್ಳಿ, ಕರೀಗೌಡ (ಸಂ)., *ಕರಕುಶಲ ಕಲೆಗಳು* (ಹಂಪಿ: ಕನ್ನಡ ವಿಶ್ವವಿದ್ಯಾಲಯ, ೨೦೦೦).

ಬಿಳಿಮಲೆ, ಪುರುಷೋತ್ತ., ದಲಿತ ಜಗತ್ತು (ಬೆಂಗಳೂರು: ಹೊಸದಿಕ್ಕು ಪ್ರಕಾಶನ,೧೯೮೮).

ಬೆಟಗೇರಿ, ಕೃಷ್ಣಶರ್ಮ., *ಕನ್ನಡ ಜಾನಪದ ಸಾಹಿತ್ಯ* (ಧಾರವಾಡ: ಕರ್ನಾಟಕ ವಿಶ್ವವಿದ್ಯಾಲಯ, ೧೯೭೬).

ಬೋರಲಿಂಗಯ್ಯ, ಹಿ ಚಿ., ದಾಸಪ್ಪ–ಜೋಗಪ್ಪ (ಬೆಂಗಳೂರು: ಕನ್ನಡ ಸಾಹಿತ್ಯ ಪರಿಷತ್ತು, ೧೯೮೧).

..........(ಸಂ).,*ಕರ್ನಾಟಕ ಜನಪದ ಕಲೆಗಳ ಕೋಶ* (ಹಂಪಿ: ಕನ್ನಡ ವಿಶ್ವವಿದ್ಯಾಲಯ, ೧೯೯೬).

ಚಂದ್ರಹಾಸಗುಪ್ತ (ಪ್ರಸಂ)., *ಭಾರತದ ಗ್ಯಾಜೆಟಿಯರ್* (ಬೆಂಗಳೂರು:ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ).

ಚಿದಾನಂದಮೂರ್ತಿ, ಎಂ., *ಮಧ್ಯಕಾಲೀನ ಕನ್ನಡ ಸಾಹಿತ್ಯ ಮತ್ತು ಅಸ್ಪೃಶ್ಯತೆ* (ಧಾರವಾಡ: ಕರ್ನಾಟಕ ವಿಶ್ವವಿದ್ಯಾಲಯ, ೧೯೮೫).

..........,*ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ* (ಧಾರವಾಡ: ಕರ್ನಾಟಕ ವಿಶ್ವವಿದ್ಯಾಲಯ, ೨೦೦೨).

ಧೂಪದ, ಎಂ ಟಿ., *ಕರ್ನಾಟಕ ಜಾನಪದ ಜಂಗಭೂಮಿ* (ಬೆಂಗಳೂರು:ಹಂಸಧ್ವನಿ ಪ್ರಕಾಶನ, ೧೯೭೧).

.........., ಶ್ರೀಕೃಷ್ಣಪಾರಿಜಾತ ಜಾನಪದ ಶೈಲಿ

ಇಟ್ಟಣ್ಣವರ, ಶ್ರೀರಾಮ *ಶ್ರೀಕೃಷ್ಣಪಾರಿಜಾತ:ಒಂದು ಅಧ್ಯಯನ* (ಬೀಳಗಿ: ಮಿನಿ ಪ್ರಕಾಶನ, ೧೯೯೧).

ಹಂಪ, ನಾಗರಾಜಯ್ಯ., *ದ್ರಾವಿಡಭಾಷಾವಿಜ್ಞಾನ* (ಬೆಂಗಳೂರು:ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ೧೯೯೧).

ಹೊಸೂರು, ಮುನಿಶಾಮಪ್ಪ., *ನಟುವರ ಸಂಸ್ಕೃತಿ* (ಬೆಂಗಳೂರು: ಕರ್ನಾಟಕ ಸಾಹಿತ್ಯ ಅಕಾಡೆಮಿ,೧೯೯೩)

ಗೀತಾಚಾರ್ಯ.ನಾ., *ಆಳ್ವಾರರ ಹಾಡುಗಳು* (ಕನ್ನಡ ಪುಸಕ ಪಾಧೀಕಾರ ಬೆಂಗಳೂರು-೨೦೦೪)

ಗೊಳಸಂಗಿ, ಅರ್ಜುನ., *ದಲಿತರ ಬದುಕು ಮತ್ತು ಸಂಸ್ಕೃತಿ: ಒಂದು ಅಧ್ಯಯನ* (ಅಥಣಿ: ವಿಮೋಚನ ಪ್ರಕಾಶನ, ೨೦೦೦).

ಕುರ್ತುಕೋಟಿ, ಕೀರ್ತಿನಾಥ (ಅನು), ಜೋಶಿ, ಶಂ ಬಾ., *ಮರ್ಹಾಟೀ ಸಂಸ್ಕೃತಿ ಕೆಲವು ಸಮಸ್ಯೆಗಳು* (ಬೆಂಗಳೂರು: ಕರ್ನಾಟಕ ಸಾಹಿತ್ಯ ಅಕಾಡೆಮಿ,೧೯೯೦).

ಲಕ್ಷ್ಮೀಪತಿ, ಕೋಲಾರ., ಮಾಸ್ತಿಕರ ಸಂಸ್ಕೃತಿ (ಬೆಂಗಳೂರು: ಕರ್ನಾಟಕ ಸಾಹಿತ್ಯ ಅಕಾಡೆಮಿ,೧೯೯೩).

ಕಂಬಾರ, ಚಂದ್ರಶೇಖರ., *ಕನ್ನಡ ಜಾನಪದ ವಿಶ್ವಕೋಶ* (ಬೆಂಗಳೂರು:ಕನ್ನಡ ಸಾಹಿತ್ಯ ಪರಿಷತ್ತು, ೧೯೮೫), ಸಂಪುಟ ೨.

ಕಲಬುರ್ಗಿ, ಎಂ ಎಂ (ಸಂ)., ಕರ್ನಾಟಕದ ಕೈಫಿಯತ್ತುಗಳು (ಹಂಪಿ:ಕನ್ನಡ ವಿಶ್ವವಿದ್ಯಾಲಯ, ೧೯೯೪).

ಕರಿಶೆಟ್ಟಿ, ರುದ್ರಪ್ಪ., *ಮ್ಯಾಸನಾಯಕರು: ಒಂದು ಜನಾಂಗಿಕ ಅಧ್ಯಯನ* (ಬೆಂಗಳೂರು:ಕನ್ನಡ ಸಾಹಿತ್ಯ ಪರಿಷತ್ತು, ೧೯೯೫).

ಕಟ್ಟೀ, ವೆಂಕಟರಂಗೋ (ಅನು)., *ಗ್ಯಾಝೆಟೀಯರು ಮುಂಬಯೀ ಇಲಾಖೆಗೆ ಸೇರಿದ ಕರ್ನಾಟಕ ಭಾಗದ್ದು: ಧಾರವಾಡ ಬೆಳಗಾವಿ ವಿಜಾಪುರ ಕಾನಡಾ ಈ ನಾಲ್ಕು ಜಿಲ್ಲೆಗಳದ್ದು* (ಮುಂಬಯಿ: ಗವರ್ನಮೆಂಟ್ ಸೆಂಟ್ರಲ್ ಬುಕ್ ಡಿಪೊ, ೧೮೯೩) ಪುನರ್ ಮುದ್ರಣ. ೧೯೮೪, ಹೊಸ ದೆಹಲಿ: ಏಷಿಯನ್ ಎಜುಕೇಷನಲ್ ಸರ್ವೀಸೆಸ್).

ಕುಮಾರ, ಕಕ್ಕಯ್ಯ ಪೋಳ., ಚಾತುರ್ ವರ್ಣ ಧರ್ಮ ದರ್ಶನ (ಬೆಂಗಳೂರು:ಕರ್ನಾಟಕ ದಲಿತ ಕ್ರೀಯಾ ವೇದಿಕೆ,೧೯೯೭).

ಕುಪ್ಪೆ, ನಾಗರಾಜ(ಸಂ)., *ಏಕತಾರಿ* (ಮೈಸೂರು:ದೊಂಬಿದಾಸರ ಕ್ಷೇಮಾಭಿವೃದ್ಧಿ ಸಂಘ, ೨೦೦೩).

ಕೃಷ್ಣ ರಾಯ,ಅ.ನ.(ಸಂ)., *ಭಾರತೀಯ ಕಲಾದರ್ಶನ* (ಬೆಂಗಳೂರು: ಸಂಗೀತ-ನಾಟಕ ಅಕಾಡಮಿ,೧೯೬೪).

ಕೃಷ್ಣರಾವ್, ಎಂ ವಿ ಮತು ಕೇಶವ ಭಟ್ಟ, *ಕರ್ನಾಟಕ ಇತಿಹಾಸ ದರ್ಶನ* (ಬೆಂಗಳೂರು: ಕರ್ನಾಟಕ ಸಹಕಾರ ಪ್ರಕಾಶನ ಮಂದಿರ, ೧೯೭೦)

ಕೋಟಗಾನಹಳ್ಳಿ, ರಾಮಯ್ಯ., *ಸಿಂಧ್‌ಮಾದಿಗರ ಸಂಸ್ಕೃತಿ* (ಬೆಂಗಳೂರು: ಕರ್ನಾಟಕ ಸಾಹಿತ್ಯ ಅಕಾಡೆಮಿ,೧೯೯೩).

ಲಕ್ಕಪ್ಪಗೌಡ, ಹೆಚ್ ಜೆ (ಪ್ರಸಂ)., *ಜಾನಪದ ಕೈಪಿಡಿ* (ಬೆಂಗಳೂರು: ಕನ್ನಡ ಪುಸ್ತಕ ಪ್ರಾಧಿಕಾರ, ೧೯೯೭)

ಮಲಶೆಟ್ಟಿ, ಬಸವರಾಜ., *ಉತ್ತರ ಕರ್ನಾಟಕದ ಬಯಲಾಟಗಳು* (ಧಾರವಾಡ: ಕರ್ನಾಟಕ ವಿಶ್ವವಿದ್ಯಾಲಯ, ೨೧೯೮೩).

ನಂಜೇಗೌಡ, ಹೆಚ್ (ಸಂ)., *ಜಾನಪದ ಕೋಶ* (ಮೈಸೂರು: ತನುಮನ ಪ್ರಕಾಶನ, ತೃಪ್ತಿ, ೪೨ ಜೆ. ಬ್ಲಾಕ್, ೩ನೇ ತಿರುವು, ರಾಮಕೃಷ್ಣನಗರ,೨೦೦೨).

ನಾಗೇಗೌಡ, ಹೆಚ್ ಎಲ್ (ಸಂ)., *ಕನ್ನಡ ಜನಪದ ಕೋಶ* (ಬೆಂಗಳೂರು: ಕರ್ನಾಟಕ ಜಾನಪದ ಪರಿಷತ್ತು,೧೯೯೮)

ನಾಗರತ್ನಟಿಎಸ್., *ಹರಿದಾಸ ಸಾಹಿತ್ಯ* (ಗುಲಬರ್ಗಾ: ಗುಲಬರ್ಗಾ ವಿಶ್ವವಿದ್ಯಾಲಯ, ೧೯೯೪)

ನಾವಡ,ಎ ವಿ (ಸಂ).,*ಈಸಬೇಕು ಇದ್ದು ಜಯಿಸಬೇಕು* (ಹಂಪಿ:ಕನ್ನಡ ವಿಶ್ವವಿದ್ಯಾಲಯ,೨೦೦೨)

ನಿರುಪಮಾ ಮತ್ತು ಲಲಿತಶಾಸಿ., ದಾಸ ಪರಂಪರೆ (ಬೆಂಗಳೂರು: ಆರತಿ ಪಬ್ಲಿಕೇಷನ್, ೧೯೯೯)

ಸಣ್ಣಕ್ಕಿ, ನಿಂಗಣ್ಣ., *ಜಾನಪದ ವೈಭವ* (ಗೋಕಾಕ,: ಪೂರ್ಣಿಮಾ ಪ್ರಕಾಶನ,೧೯೯೧).

ಪಂಡಿತ,ಯಜ್ಞನಾರಾಯಣಉಡುಪ.,*ಪುರಾಣಭಾರತ ಕೋಶ* (ಮೈಸೂರು:ಗೀತಾ ಬುಕ್ ಹೌಸ್,೧೯೭೫)

ಪರಮಶಿವಯ್ಯ, ಜೀ ಶಂ., *ದೊಂಬಿದಾಸರ ಲಾವಣಿಗಳು* (ಮೈಸೂರು:ಸಾಹಿತ್ಯ ಸದನ, ೧೯೭೪).

.........,*ದಕ್ಷಿಣ ಕರ್ನಾಟಕದ ಜಾನಪದ ಕಾವ್ಯಪ್ರಕಾರಗಳು* (ಮೈಸೂರು:ವಿಶ್ವ ವಿದ್ಯಾನಿಲಯ, ೧೯೭೯).

..........,*ದೊಂಬಿದಾಸರು* (ಬೆಂಗಳೂರು: ಐಬಿಹೆಚ್ ಪ್ರಕಾಶನ,೧೯೮೦)

.........(ಸಂ)., *ಕನ್ನಡ ವೃತ್ತಿ ಗಾಯಕ ಕಾವ್ಯಗಳು* (ಬೆಂಗಳೂರು: ಕನ್ನಡ ಸಾಹಿತ್ಯ ಪರಿಷತ್, ೧೯೮೧).

.........., *ಕರ್ನಾಟಕ ಜನಪದ ವಾದ್ಯಗಳು* (ಬೆಂಗಳೂರು: ಐಬಿಹೆಚ್ ಪ್ರಕಾಶನ,೧೯೮೪)

ಪ್ರಧಾನಗುರುದತ್ತ (ಅನು), ಭಗವತ್ ಶರಣ ಉಪಾಧ್ಯಾಯ., *ಭಾರತೀಯ ಸಮಾಜದ ಐತಿಹಾಸಿಕ ವಿಶ್ಲೇಷಣೆ* (ಬೆಂಗಳೂರು: ನವಕರ್ನಾಟಕ ಪ್ರಕಾಶನ, ೧೯೮೬).

ಪ್ರಶಾಂತ ಎಚ್ ಡಿ (ಸಂ)., *ಜನಸಮುದಾಯ ಸಂಪುಟ* (ಹಂಪಿ:ಕನ್ನಡ ವಿಶ್ವವಿದ್ಯಾಲಯ, ೨೦೦೦).

ಮಾಲಗತ್ತಿ, ಅರವಿಂದ (ಪ್ರಸಂ)., *ಕನ್ನಡ ವಿಷಯ ವಿಶ್ವಕೋಶ* (ಮೈಸೂರು: ಮೈಸೂರು ವಿಶ್ವವಿದ್ಯಾನಿಲಯ, ೨೦೦೫).

.........., *ಕನ್ನಡ ಜಾನಪದ ವಿಶ್ವಕೋಶ*(ಮೈಸೂರು: ಮೈಸೂರು ವಿಶ್ವವಿದ್ಯಾನಿಲಯ, ೨೦೦೬).

ಮೇತ್ರಿ ಕೆ ಎಂ.,*ಬುಡಕಟ್ಟು ಕುಲಕಸುಬುಗಳು* (ಹಂಪಿ:ಕನ್ನಡ ವಿಶ್ವವಿದ್ಯಾಲಯ, ೨೦೦೨).

ಮೈಲಹಳ್ಳಿ, ರೇವಣ್ಣ., ಮಾದಾರ ಸಂಸ್ಕೃತಿ ಮತ್ತು ಸಾಹಿತ್ಯ (ಮೈಸೂರು: ರಾಜ್ ಪ್ರಕಾಶನ, ನಂ. ೮೩, ಕೆಎಸ್ಆರ್‌ಟಿಸಿ ಬಡಾವಣೆ, ಬನ್ನಿಮಂಟಪ, ೨೦೦೪).

ರಂಗನಾಥ, ಎಚ್ ಕೆ., *ಕನ್ನಡ ನಾಟಕಕಲೆ* (ಬೆಂಗಳೂರು: ಸಂಗೀತ ನಾಟಕ ಅಕಾಡೆಮಿ, ೧೯೭೨).

ರಾಜಶೇಖರಯ್ಯ, ಎ ಎಂ., *ಡಾ ಬಾಬಾಸಾಹೇಬ್ ಅಂಬೇಡ್ಕರ್ ಬರಹಗಳು ಮತ್ತು ಭಾಷಣಗಳು* (ಬೆಂಗಳೂರು:ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ೧೯೯೧), ಸಂಪುಟ ೭.

ರಾಜೂರ, ವೀರಣ್ಣ (ಸಂ)., *ಜಾನಪದ ಸಾಹಿತ್ಯ ದರ್ಶನ ಸಂ–೧೪* (ಧಾರವಾಡ: ಕರ್ನಾಟಕ ವಿಶ್ವವಿದ್ಯಾಲಯ, ೧೯೯೨)

ರಾಜೇಂದ್ರ, ಡಿ ಕೆ., *ಜಾನಪದ ಶಿಷ್ಟಪದ* (ಬೆಂಗಳೂರು: ಕನ್ನಡ ಪುಸ್ತಕ ಪ್ರಾಧಿಕಾರ, ೨೦೦೩).

ರಾಮಕೃಷ್ಣ, ಮರಾತೆ., *ಉತ್ತರ ಕರ್ನಾಟಕ ವೃತ್ತಿ ರಂಗಭೂಮಿ* (ಬೆಂಗಳೂರು: ಇಳಾ ಪ್ರಕಾಶನ, ೧೯೯೪).

ರಾಮಚಂದ್ರರಾವ್, ಸಾ ಕೃ., *ದಾಸಸಾಹಿತ್ಯ ಮತ್ತು ಸಂಸ್ಕೃತಿ* (ಬೆಂಗಳೂರು: ಕನ್ನಡ ಪುಸ್ತಕ ಪ್ರಾಧಿಕಾರ, ೨೦೦೩).

ರಾಮಚಂದ್ರೇಗೌಡ, ಹಿ ಶಿ (ಸಂ)., *ವಿಚಾರ ಸಾಹಿತ್ಯ* (ಬೆಂಗಳೂರು: ಕರ್ನಾಟಕ ಸಾಹಿತ್ಯ ಅಕಾಡೆಮಿ, ೧೯೯೭)

ರಾಮಾನುಜಂ, ಪಿ ಎಸ್., *ಕರ್ನಾಟಕದ ಪರಂಪರೆ* (ಬೆಂಗಳೂರು:ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ೧೯೯೨).

ರೈ, ಎ ಸುಬ್ಬಣ್ಣ...(ಸಂ).,*ದ್ರಾವಿಡ ನಿಘಂಟು* (ಹಂಪಿ:ಕನ್ನಡ ವಿಶ್ವವಿದ್ಯಾಲಯ, ೨೦೦೧).

ಶ್ರೀಮತಿ, ಎಚ್ ಎಸ್ (ಅನು), ಬಾಲಗೋಪಾಲನ್., ಪ್ರಾಚೀನ ಭಾರತದ ಚರಿತ್ರೆ (ಬೆಂಗಳೂರು: ಬೆಳ್ಳಿಚುಕ್ಕಿ ಬುಕ್ ಟ್ರಸ್ಟ್, ೧೯೯೮).

ಶ್ರೀಕಂಠಶಾಸ್ತ್ರಿ, ಎಸ್., *ಸಂಶೋಧನ ಲೇಖನಗಳು* (ಮೈಸೂರು:ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ,೧೯೭೫)

ಶ್ರೀನಿವಾಸಮೂರ್ತಿ,ಜೆ...(ಅನು), ಶರ್ಮಾ, ಆರ್ ಎಸ್., *ಪ್ರಾಚೀನ ಭಾರತದಲ್ಲಿ ಶೂದ್ರರು* (ಬೆಂಗಳೂರು: ನವಕರ್ನಾಟಕ ಪ್ರಕಾಶನ,೨೦೦೪).

ಶಿವರುದ್ರಪ್ಪ, ಜಿ ಎಸ್(ಪ್ರಸಂ)., *ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ* (ಬೆಂಗಳೂರು: ಬೆಂಗಳೂರುವಿಶ್ವವಿದ್ಯಾಲಯ, ೧೯೭೭), ಸಂಪುಟ–೪

ಸಿಂಗೆ, ಎಸ್ ಆರ್., ಹೊಲೆಯರು: ಒಂದು ಅಧ್ಯಯನ (ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಅಪ್ರಕಟಿತ ಪಿಹೆಚ್‌ಡಿ ಮಹಾಪ್ರಬಂಧ, ೧೯೯೧).

ಸುಂಕಾಪುರ, ಎಂ ಎಸ್ (ಸಂ)., *ಕನ್ನಡ ಬಯಲಾಟ* (ಧಾರವಾಡ: ಕರ್ನಾಟಕ ವಿಶ್ವವಿದ್ಯಾಲಯ, ೧೯೭೨)

..........(ಸಂ)., *ಜಾನಪದ ಸಾಹಿತ್ಯದರ್ಶನ–೩* (ಧಾರವಾಡ: ಕರ್ನಾಟಕ ವಿಶ್ವವಿದ್ಯಾಲಯ, ೧೯೭೮)

..........(ಸಂ)., *ಜಾನಪದ ಸಾಹಿತ್ಯದರ್ಶನ-೪* (ಧಾರವಾಡ: ಕರ್ನಾಟಕ ವಿಶ್ವವಿದ್ಯಾಲಯ, ೧೯೭೮)

..........(ಸಂ)., *ಜಾನಪದ ಸಾಹಿತ್ಯದರ್ಶನ-೬* (ಧಾರವಾಡ: ಕರ್ನಾಟಕ ವಿಶ್ವವಿದ್ಯಾಲಯ, ೧೯೮೦)

ವೀರಭದ್ರಪ್ಪ, ಬಿ ವಿ., *ವೇದಗಳಲ್ಲಿ ಜನಸಾಮಾನ್ಯರು* (ಹಂಪಿ:ಕನ್ನಡ ವಿಶ್ವವಿದ್ಯಾಲಯ, ೨೦೦೧).

ವೆಂಕಟಸುಬ್ಬಯ್ಯ, ಜಿ (ಪ್ರಸಂ)., *ಕನ್ನಡ ನಿಘಂಟು* (ಬೆಂಗಳೂರು:ಕನ್ನಡ ಸಾಹಿತ್ಯ ಪರಿಷತ್ತು, ೧೯೭೯), ಸಂಪುಟ ೪.

**ನಿಯತಕಾಲಿಕಗಳು ಮತ್ತು ಪತ್ರಿಕೆಗಳು**

ಪ್ರಜಾವಾಣಿ

ಸಂಯುಕ್ತ ಕರ್ನಾಟಕ

ಆಂದೋಲನ

ದಿ ಟೈಮ್ಸ್ ಆಫ್ ಇಂಡಿಯಾ

ಡೆಕನ್ ಹೆರಾಲ್ಡ್

ಸಂವಾದ ಮಾಸ ಪತ್ರಿಕೆ

ಸುದ್ದಿ ಸಂಗಾತಿ ವಾರ ಪತ್ರಿಕೆ

ಚುಟುಕು ಮಾಸ ಪತ್ರಿಕೆ

**ತೆಲುಗು**

ದಾಸ್, ಜಿ ವಿ(ಸಂ).,*ಹೊಲೆಯ ದಾಸರಿ ವೃತ್ತಿ ಜೀವನ ವಿಧಾನಮು* (ರಂಗಾರೆಡ್ಡಿ: ಆಧ್ಯಾತ್ಮಿಕ ಆರೋಗ್ಯ ಕೇಂದ್ರಂ, ಸರೂರ್ ನಗರ ಮಂಡಲಂ, ೧೯೯೮).

**ಇಂಗ್ಲಿಷ**

Ananthakrishna Iyer, L K., *The Mysore Tribes and Castes* (Mysore: The Mysore University, 1930; rpt. 1998, New Delhi: Mittal Publications), 5 Vols.

*Brochure on Reservation for Scheduled Castes, Scheduled Tribes and other Categories of Backward Classes in Services and Posts* (Bangalore: Government Press, 1987).

*Brochure on Reservation and Concessions for Scheduled Castes, Scheduled Tribes and other Backward Classes*...(New Delhi: A Nabhi Publications, 2004).

Devy, G N (Chairman)., Technical Advisory Group on Denotified Nomadic and Semi-nomadic Tribes Report, 2006 (New Delhi: Ministry of Social Justice and Empowerment, Government of India).

Enthoven, R E., *The Tribes and Castes of Bombay* (Bombay: Government Central Press,1922; rpt. 1975, Delhi: Cosmo Publications) 3 Vols.

Eustace J Kitts, *A Compendium of the Castes and Tribes found in India: Census of India 1881* (Byculla: Education Sociey Press,1885; rpt.1982, Gurgaon: The Academic Press, Gurgaon).

Hassan, S S., *The Castes and Tribes of H E H Nizam's Dominions* (Bombay: Government Central Press, 1920; rpt. 1989, New Delhi: Asian Educational Services).

Havanur, L G (Chairman)., *Karnataka Backward Classes Commission Report* (Bangalore: Government Press, 1975 ), 5 Vols.

Joint Committee on the Scheduled castes and Scheduled Tribers Orders (Amendmant) Bill 1967, Published by Govt. of India.

Kittel, F Rev., *A Kannada - English, Dictionary* (New Delhi:Asian Educational Services, 1993).

Misra, P K, Rajalakshmi, C R, Verghese, I., *Nomads in the Mysore City* (Calcutta: Anthropological Survey of India, 1971).

Nagan Gowda, R (Chairman)., *Mysore Backward Classes Committee Report* (Bangalore: Government Press, 1979).

Nanjundayya, H V., *The Ethnographic Survey of Mysore* (Bangalore: Government Press, 1906).

Ravivarma Kumar (Chairman)., *The Karnataka State Commission for Backward Classes Special Report -2000* (Bangalore: Government Press, 2000).

Reddy, O Chinnappa (Chairman).,Report of the Karnataka Third Backward Classes Commission (Bangalore: Government Press, 1990), 2 Vols.

Risley, H H.,*The Caste and Tribes of Bengal* (Calcutta: Bengal Secretariat Press, 1891; rpt.1981, Calcutta: Firma Mukhopadhyay), vols

Russell, R V and Hiralal, *The Tribes and Castes of the Central Provinces of India* (London: Macmillan and Co., 1916; rpt. 1975, New Delhi:Cosmo Publications), vols

Shashi, S S., *The World of Nomads*(New Delhi: Lotus Press, 2006).

Singh, K S., *The Scheduled Castes* (Delhi: Oxford University, Press,1993) People of Inida National Series, vol. 2

........ ., *The Scheduled Tribes* (Delhi: Oxford University, Press,1994) People of Inida National Series, vol. 3

........ ., *India's Communities* (Delhi: Oxford University, Press,1998) People of Inida National Series, vol.4-6.

........ (General Editor)., *People of India : Karnataka* (New Delhi: Anthropological Survey of India, 2003) Volume XXVI.

*The Annual Administration Report on the Working of the Criminal Tribes Act in the Bombay Presidency Part - I* (Bombay: Govt. Central Press, 1936)

*The New Encyclopaedia Britannica* (The University of Chicago, 1992)

The Scheduled Castes and Scheduled Tribes Orders (Amendment) Bill, 1967 (No. 119-B of 1967), Published by Govt. of India.

Thurrston, E., *Ethnographic Notes on Southern India* (Madrss: Government Press, 1906).

..........., *Castes and Tribes of Southern India* (Madrss: Government Press, 1909; rpt. 1975, Delhi: Cosmo Publications) 7 vols.

Usha Rani, N., *Folk Media for Development (A Study of Karnataka's Traditional Media)* (Bangalore: Karnataka Book Publishers, Mico Layout, Arakere, Bannergatta Road,1996).

Venkataswamy, T (Chairman).,Report of the Karnataka Second Backward Classes Commission (Bangalore: Government Press, 1986), 3 Vols.



ಭಕ್ತ ಪ್ರಹ್ಲಾದ ಬಯಲಾಟ ಪ್ರದರ್ಶನಕ್ಕೆ ವೇಷದ ಸಿದ್ಧತೆ, ಆನಂದೂರು ಕೊಪ್ಪಲು



ದೊಂಬಿದಾಸ ಸಮುದಾಯದ ವಾದ್ಯಪರಿಕರಗಳು




ಸ್ಟೇಷನರಿ ವ್ಯಾಪಾರಕ್ಕೆ ಹೊರಟ ಸಮುದಾಯದ ಮಹಿಳೆಯರು



ಮೀನು ಬೇಟೆಯ ಬಲೆ ರಿಪೇರಿಯಲ್ಲಿ ನಿರತ ಯುವಕರು



ಬೇಟೆಯ ಪರಿಕರಗಳೊಂದಿಗೆ ಸಮುದಾಯದ ಜನ



ವ್ಯಾಪಾರಕ್ಕೆ ಹೊರಟ ಸಮುದಾಯದ ಯುವಕರು, ಸಂತೆಬೆನ್ನೂರು



ಮಧುಮಗಳಿಗೆ ಬಳೆಶಾಸ್ತ್ರ, ಕುಪ್ಪೆ



**ಮದುವೆ ಚಪ್ಪರದಲ್ಲಿ ಹಾಲಗಂಬದ ಪೂಜೆ**



ಮಗಳನ್ನು ಧಾರೆ ಎರೆಯುತ್ತಿರುವ ತಂದೆ-ತಾಯಿ ಮತ್ತು ಬಂಧುಗಳು



ಮಾಂಗಲ್ಯ ಕಟ್ಟುತ್ತಿರುವ ಮದುಮಗ, ಏಕಲವ್ಯ ನಗರ - ಮೈಸೂರು



ಭಿಕ್ಷಾಟನೆ ಮಾಡುತ್ತಿರುವ ವಯೋವೃದ್ಧರು, ಆನಂದೂರು ಕೊಪ್ಪಲು



ಜೋಪಡಿಯ ಮುಂದೆ ಕುಳಿತಿರುವ ಸಮುದಾಯದ ಮಹಿಳೆ, ಬಂಗಾರಕ್ಕನ ಗುಡ್ಡ



ಅಲೆಮಾರಿ ತಾಂಡಕ್ಕೆ ರಾಷ್ಟ್ರೀಯ ಆಯೋಗದ ಅಧ್ಯಕ್ಷರ ಭೇಟಿ



ಕೋಲೆ ಬಸವನೊಂದಿಗೆ ಭಿಕ್ಷಾಟನೆಗೆ ತೆರಳುತ್ತಿರುವುದು, ಏಕಲವ್ಯನಗರ



ಪಿಟೀಲು ವಾದಕ ನಾಬುಕಪ್ಪ, ಸಿದ್ದಮ್ಮನಹಳ್ಳಿ



ದೊಂಬಿದಾಸರ ನಿಸ್ಸಹಾಯಕ ಜೀವನ, ಆನವೇರಿ



ದೊಂಬಿದಾಸರ ಬೀದಿ ಬದಿಯ ಬದುಕು, ಹೊಳೆಹೊನ್ನೂರು



ಭಿಕ್ಷೆ ಪಡೆಯುತ್ತಿರುವ ಏಕತಾರಿ ವ್ಯಕ್ತಿ, ಬಂಗಾರಕ್ಕನ ಗುಡ್ಡ